# ಬ್ಯಾಂಕಿಂಗ್ ಪ್ರಪಂಚ

ಸಂಪಾದಕರು

ಎಚ್ಚೆಸ್ಕೆ

ಸಂಪುಟ ೩

★

ಸಂಚಿಕೆ ೨

ಅಕ್ಟೋಬರ್

೧೯೮೫

## ಈ ಸಂಚಿಕೆಯಲ್ಲಿ




ಪ್ರಕಾಶಕರು : ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)

ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೭೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦೦೦೨


ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ಅರ್ಧವಾರ್ಷಿಕ

# ಬ್ಯಾಂಕಿಂಗ್ ಪ್ರಪಂಚ

ಸಂಪುಟ ೬ ಅಕ್ಟೋಬರ್ ೧೯೮೪ ಸಂಚಿಕೆ ೨




ವಾರ್ಷಿಕ ಚಂದಾ : ರೂ. 7

ಆಜೀವ ಚಂದಾ : ರೂ. 100


## ಲೇಖಕರಿಗೆ ಸೂಚನೆಗಳು

ಬ್ಯಾಂಕಿಂಗ್ ಪ್ರಪಂಚದಲ್ಲಿ ಪ್ರಕಟನೆಗಾಗಿ ಹಣ, ಬ್ಯಾಂಕಿಂಗ್ ಮತ್ತು ತತ್ಸಂಬಂಧಿ ವಿಷಯಗಳನ್ನು ಕುರಿತ ಲೇಖನಗಳಿಗೆ ಸ್ವಾಗತವಿದೆ.

ಲೇಖನಗಳು ಸ್ವತಂತ್ರವಾಗಿರಬಹುದು, ಇಲ್ಲವೇ ಅನುವಾದಗಳಾಗಿರಬಹುದು. ಲೇಖನ ಅನುವಾದವಾಗಿದ್ದರೆ ಮೂಲಲೇಖನದ ಶೀರ್ಷಿಕೆ, ಮೂಲಲೇಖಕರ ಹೆಸರು ಮತ್ತು ವಿಳಾಸ, ಮೂಲಲೇಖನ ಪ್ರಕಟವಾಗಿದ್ದರೆ ಆ ಬಗ್ಗೆ ವಿವರಗಳು ಇವನ್ನೂ ಅನುವಾದವನ್ನು ಪ್ರಕಟಿಸಲು ಮೂಲಲೇಖಕರ ಅನುಮತಿಯನ್ನೂ ಅನುವಾದಿತ ಲೇಖನದೊಂದಿಗೆ ಕಳುಹಿಸಿಕೊಡಬೇಕು.

ಲೇಖಕರು ಲೇಖನವನ್ನು ಕಾಗದದ ಒಂದೇ ಮಗ್ಗುಲಿನಲ್ಲಿ ಸ್ಫುಟವಾಗಿ ಬರೆದಿರಬೇಕು. ಪುಟದ ಎಡಬದಿಯಲ್ಲಿ ಸಾಕಷ್ಟು ಅಂಚು ಬಿಟ್ಟಿರಬೇಕು. ಒಂದು ಸಾಲಿಗೂ ಇನ್ನೊಂದು ಸಾಲಿಗೂ ನಡುವೆ ಧಾರಾಳವಾಗಿ ಸ್ಥಳ ಬಿಟ್ಟಿರಬೇಕು.

ಲೇಖಕರು ತಮ್ಮ ಹೆಸರು ವಿಳಾಸಗಳನ್ನೂ ತಮ್ಮ ಸಂಕ್ಷಿಪ್ತ ಪರಿಚಯವನ್ನೂ ಲೇಖನದೊಂದಿಗೆ ಕಳುಹಿಸಿಕೊಡಬೇಕು.

ಲೇಖನವನ್ನು ಪ್ರಕಟಿಸುವ ಅಥವಾ ಬಿಡುವ, ಯುಕ್ತವೆನಿಸಿದ ಮಾರ್ಪಾಟು ಮಾಡಿ ಪ್ರಕಟಿಸುವ ಅಧಿಕಾರ ಸಂಪಾದಕರಿಗೆ ಉಂಟು.

ಪ್ರಕಟವಾಗದ ಲೇಖನಗಳನ್ನು ಹಿಂದಿರುಗಿಸಲು ವ್ಯವಸ್ಥೆಯಿಲ್ಲ. ಲೇಖಕರು ಪತ್ರಿಕೆಗೆ ಕಳುಹಿಸುವ ಲೇಖನದ ಪ್ರತಿಯೊಂದನ್ನು ಇಟ್ಟುಕೊಳ್ಳಬೇಕು.

ಬ್ಯಾಂಕಿಂಗ್ ಪ್ರಪಂಚದಲ್ಲಿ ವಿಮರ್ಶೆಗಾಗಿ ಪುಸ್ತಕವನ್ನು ಕಳುಹಿಸುವವರು ಅದರ ಎರಡು ಪ್ರತಿಗಳನ್ನು ಕಳುಹಿಸಿಕೊಡಬೇಕು.

ಬ್ಯಾಂಕಿಂಗ್ ಪ್ರಪಂಚದಲ್ಲಿ ಪ್ರಕಟವಾದ ಲೇಖನಗಳ ಬಗ್ಗೆ ಅಭಿಪ್ರಾಯಗಳನ್ನು ಪ್ರಕಟನೆಗಾಗಿ ಬರೆದು ಕಳುಹಿಸಬಹುದು. ಇವು ಸಣ್ಣವಾಗಿರಬೇಕು. ಅಭಿಪ್ರಾಯಗಳೊಂದಿಗೆ ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ಬರೆದಿರಬೇಕು.

# ಬ್ಯಾಂಕಿಂಗ್ ಪ್ರಪಂಚದ ಆಜೀವ ಚಂದಾದಾರರು

(ಹಿಂದಿನ ಸಂಚಿಕೆಯಿಂದ ಮುಂದುವರಿದ ಪಟ್ಟಿ)

331 ಡಿ. ವಿ. ಪ್ರಸಾದ್
332 ವೈ. ಎಸ್. ಉಷಾ
333 ಬಿ. ನಾಗರಾಜ್
334 ಶ್ರೀಧರ ರಾಯಸಂ
335 ಜಿ. ಆರ್. ಕಾಮತ್
336 ಮಹದೇವ ಗಾಣಿಗ
337 ಎಸ್. ಆರ್. ಕುಲಕರ್ಣಿ
338 ವಿ. ಎಸ್. ರವೀಂದ್ರ
339 ಎಂ. ಎಸ್. ನರಸಿಂಹಮೂರ್ತಿ
340 ಕೆ. ಎಸ್. ಶ್ರೀನಿವಾಸ್
341 ಜಿ. ಆರ್. ಸಮೀರ ಕುಮಾರ್
342 ಪಿ. ಆರ್. ಕುಲಕರ್ಣಿ
343 ಶಿವರಾಜು
344 ಎನ್. ಆರ್. ಬಾಲಸುಬ್ರಹ್ಮಣ್ಯ
345 ಬಿ. ಎಸ್. ಭಾಸ್ಕರಶರ್ಮ
346 ಹೆಚ್. ಎಸ್. ಪ್ರಭಾಕರ
347 ರವಿಶಂಕರ ಕೋಳಿವಾಡ
348 ಪು. ರಾ. ಮುರಳೀಧರ
349 ಟಿ. ಆರ್. ಭಟ್
350 ಎನ್. ಕೆ. ಕರೇಗೌಡ
351 ಬಿ. ಎನ್. ಶ್ರೀನಿವಾಸಮೂರ್ತಿ

**ಭಾರತೀಯ ಸ್ಟೇಟ್ ಬ್ಯಾಂಕಿನ ಈ ಮುಂದಿನ ಶಾಖೆಗಳು :**

352 ಸಿಂದಗಿ
353 ಕೃಷಿ ಅಭಿವೃದ್ಧಿ ಶಾಖೆ, ಮೂಡಿಗೆರೆ
354 ತಿಪಟೂರು
355 ಕಡಗಂಚಿ
356 ಯಯ್ಯಾಡಿ ಇಂಡಸ್ಟ್ರಿಯಲ್ ಏರಿಯ
357 ಸಿರಸಿ
358 ಕಾಳಗಿ
359 ಬ್ಯಾಲ್ಯ
360 ರಾಜಾಜಿನಗರ 5ನೇ ಬ್ಲಾಕ್
361 ಪ್ರಾದೇಶಿಕ ಕಛೇರಿ, ಬೆಂಗಳೂರು
362 ಕಕ್ಕೇರ
363 ನಂಜನಗೂಡು
364 ಲಾಲ್‌ಬಾಗ್ (ಮಂಗಳೂರು)
365 ಅಗ್ರ ಬ್ಯಾಂಕ್ ಕಛೇರಿ, ಗುಲ್ಬರ್ಗ
366 ಸೀಗೂರು
367 ಮುಧೋಳ (ಬಿಜಾಪುರ ಜಿಲ್ಲೆ)
368 ನಿಂಬರ್ಗ
369 ಕಾಮಲಾಪುರಂ
370 ಚಿಟಗುಪ್ಪ
371 ಶ್ರೀ ಸಿತ್ಯಸಾಯಿಬಾಬಾ ಆಶ್ರಮ (ಕಾಡುಗೋಡಿ)
372 ಬೆಳವಾಡಿ ಇಂಡಸ್ಟ್ರಿಯಲ್ ಎಸ್ಟೇಟ್
373 ಬಿದರೆ
374 ಕೃಷಿ ಅಭಿವೃದ್ಧಿ ಶಾಖೆ, ಬಳ್ಳಾರಿ
375 ಓಲ್ಡ್ ಹುಬ್ಬಳ್ಳಿ ಶಾಖೆ (ಹುಬ್ಬಳ್ಳಿ)
376 ರಾಜ್‌ನಗರ (ಹುಬ್ಬಳ್ಳಿ)
377 ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಹೊಂಗಹಳ್ಳಿ
378 ಕರ್ನಾಟಕ ಕೈಗಾರಿಕಾ ಸಹಕಾರಿ ಬ್ಯಾಂಕ್ ನೌಕರರ ಸಂಘ, ಬೆಂಗಳೂರು
379 ಮೈ.ಸೆಂ.ಕೊ. ಜೂನಿಯರ್ ಕಾಲೇಜು, ಅಮ್ಮಸಂದ್ರ
380 ಶಿವಮೊಗ್ಗ ಜಿಲ್ಲಾ ಸಹಕಾರಿ ಕೇಂದ್ರ ಬ್ಯಾಂಕ್ ಲಿ., ಶಿವಮೊಗ್ಗ
381 ಜಿ. ಪಿ. ಪೋರ್‌ವಾಲ್ ಕಲಾ ಮತ್ತು ವಾಣಿಜ್ಯ ಕಾಲೇಜು, ಸಿಂದಗಿ
382 ಶ್ರೀ ಗುರುಸಿದ್ದೇಶ್ವರ ಕೋ ಆಪರೇಟಿವ್ ಬ್ಯಾಂಕ್, ಹುಬ್ಬಳ್ಳಿ

ಬ್ಯಾಂಕಿಂಗ್ ಪ್ರಪಂಚಕ್ಕೆ ಆಜೀವ ಚಂದಾ ರೂ. 100.00
"ಸಮನ್ವಯ ಸಮಿತಿ"ಯ ಹೆಸರಿಗೆ ಬರೆದ ಚೆಕ್/ಡ್ರಾಫ್ಟ್ ಮೂಲಕ ಚಂದಾ ಪಾವತಿ ಮಾಡಬಹುದು.

**ಸಮನ್ವಯ ಸಮಿತಿ**
ಆಶ್ರಯ : ಭಾರತೀಯ ಸ್ಟೇಟ್ ಬ್ಯಾಂಕ್
ಬೆಂಗಳೂರು ನಗರ ಶಾಖೆ
22, ಜಯಚಾಮರಾಜ ರಸ್ತೆ, ಬೆಂಗಳೂರು–560 002

# ಸಂಪಾದಕೀಯ

## ರಿಸರ್ವ್ ಬ್ಯಾಂಕ್ 50

ಭಾರತೀಯ ರಿಸರ್ವ್ ಬ್ಯಾಂಕಿಗೆ ಈ ಏಪ್ರಿಲ್ ಒಂದಕ್ಕೆ ಐವತ್ತು ವರ್ಷ. ಈಗ ನಡೆಯುತ್ತಿರುವುದು ಐವತ್ತೊಂದು.

'ನಡೆದು ಬಂದ ದಾರಿ ಕಡೆಗೆ ತಿರುಗಿಸಬೇಡ—ಕಣ್ಣ ಹೊರಳಿಸಬೇಡ,' ಎಂದು ಉದ್ಗರಿಸಬಹುದು ಕವಿ. ಆದರೆ ರಿಸರ್ವ್ ಬ್ಯಾಂಕು ತನ್ನ ಐವತ್ತು ವರ್ಷಗಳ ಪಥದಾಖಲೆಯ ಬಗ್ಗೆ ಹೆಮ್ಮೆಪಡಬಹುದಾದ್ದು ಸಹಜ.

ಐವತ್ತು ವರ್ಷ ಹಿಂದೆ ರಿಸರ್ವ್ ಬ್ಯಾಂಕು ಷೇರುದಾರರ ಸಂಸ್ಥೆಯಾಗಿ ಸ್ಥಾಪಿತವಾಯಿತು. ಅದರ ಪಾವತಿಯಾದ ಬಂಡವಾಳ ರೂ. ಐದು ಕೋಟಿ. ಇಂದಿನ ಮಾನಕಗಳ ಪ್ರಕಾರ ರೂ. ಐದು ಕೋಟಿ ಬಹಳ ಕಡಿಮೆಯೆನಿಸ ಬಹುದು. ಆದರೆ ಅಂದಿನ ಲೆಕ್ಕದಲ್ಲಿ ಅದು ಅಧಿಕವೇ. ಪ್ರಪಂಚವೇ ಮಹಾ ಆರ್ಥಿಕ ಮುಗ್ಗಟ್ಟನ್ನು ದಾಟಿ ನಡೆಯುತ್ತಿದ್ದ ಕಾಲವದು.

ಪರಕೀಯರ ಆಳ್ವಿಕೆಗೆ ಒಳಪಟ್ಟಿದ್ದ ಭಾರತದಲ್ಲಿ ಕೇಂದ್ರೀಯ ಬ್ಯಾಂಕೊಂದು ಸ್ಥಾಪಿತವಾಗಬೇಕೆಂಬುದು ಇಲ್ಲಿಯ ಜನರ ಬಹುಕಾಲದ ಬೇಡಿಕೆಯಾಗಿತ್ತು. ಆದರೆ ಬ್ರಿಟಿಷ್ ಸರ್ಕಾರ ಈ ಬೇಡಿಕೆಯನ್ನು ಕಡೆಗಣಿಸುತ್ತಲೇ ಬಂದಿತ್ತು. 1836ರಷ್ಟು ಹಿಂದೆ, ಭಾರತದಲ್ಲಿ ಈಸ್ಟ್ ಇಂಡಿಯ ಕಂಪನಿಯ ರಾಜ್ಯಭಾರವಿದ್ದಾಗ, ಬ್ರಿಟಿಷ್ ಭಾರತದಲ್ಲಿ ಬೃಹತ್ ಬ್ಯಾಂಕಿಂಗ್ ವ್ಯವಸ್ಥೆಯೊಂದು ಸ್ಥಾಪಿತವಾಗಬೇಕೆಂದು ಕಂಪನಿಯ ನಿರ್ದೇಶಕರ ಮಂಡಲಿಗೆ ವರ್ತಕರ ತಂಡವೊಂದು ಬೇಡಿಕೆ ಸಲ್ಲಿಸಿತ್ತು. ಭಾರತದಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಪ್ರೆಸಿಡೆನ್ಸಿ ಬ್ಯಾಂಕುಗಳನ್ನು ಸಮಾಮೇಲನಗೊಳಿಸಿ ಅಖಿಲ ಭಾರತ ಬ್ಯಾಂಕಿಂಗ್ ಸಂಸ್ಥೆಯೊಂದನ್ನು ಸ್ಥಾಪಿಸುವ ಸೂಚನೆ ಪ್ರಪ್ರಥಮವಾಗಿ ಪ್ರಧಾನವಾಗಿ ಕೇಳಿಬಂದಿದ್ದು 1867ರಲ್ಲಿ. ಆದರೆ ಈ ಸೂಚನೆಯನ್ನು ಸರ್ಕಾರ ಅಷ್ಟೇನೂ ಪರಿಗಣಿಸಲಿಲ್ಲ. ಭಾರತದ ಕರೆನ್ಸಿ ಮತ್ತು ವಿನಿಮಯವನ್ನು ಕುರಿತಂತೆ ಪರಿಶೀಲನೆ ನಡಸಿ ವರದಿ ಸಲ್ಲಿಸಲು 1913ರಲ್ಲಿ ಆಸ್ಟಿನ್ ಚೇಂಬರ್ಲೇನರ ಅಧ್ಯಕ್ಷತೆಯಲ್ಲಿ ನೇಮಕವಾಗಿದ್ದ ಆಯೋಗದ ಸದಸ್ಯರಾಗಿದ್ದ ಜೆ. ಎಂ. ಕೇನ್ಸರು, ಇನ್ನೊಬ್ಬ ಸದಸ್ಯರೊಂದಿಗೆ, ಭಾರತಕ್ಕೊಂದು ಕೇಂದ್ರೀಯ ಬ್ಯಾಂಕನ್ನು ಸ್ಥಾಪಿಸುವ ಬಗ್ಗೆ ವಿವರವಾದ ಯೋಜನೆಯೊಂದನ್ನು ತಯಾರಿಸಿದ್ದರು. 1921ರಲ್ಲಿಸ್ಥಾಪಿತವಾದ ಇಂಪೀರಿಯಲ್ ಬ್ಯಾಂಕು ಬಹಳವಮಟ್ಟಿಗೆ ಈ ಯೋಜನೆಗೆ ಅನುಗುಣವಾಗಿತ್ತು. ಈ ಬ್ಯಾಂಕು ಸರ್ಕಾರದ ಬ್ಯಾಂಕಾಗಿ ಕಾರ್ಯ ನಿರ್ವಹಿಸುತ್ತಿತ್ತಾದರೂ ಕೇಂದ್ರೀಯ ಬ್ಯಾಂಕಿನ ಎಲ್ಲ ಕಾರ್ಯಭಾರಗಳನ್ನು ನಿರ್ವಹಿಸುವ ಅಧಿಕಾರ ಇದಕ್ಕೆ ಪ್ರಾಪ್ತವಾಗಿರಲಿಲ್ಲ. 1935ರಲ್ಲಿ ಸ್ಥಾಪಿತವಾದ ರಿಸರ್ವ್ ಬ್ಯಾಂಕು ನಿಜವಾದ ಅರ್ಥದಲ್ಲಿ ಭಾರತದ ಕೇಂದ್ರೀಯ ಬ್ಯಾಂಕು.

ಅಂದಿನಿಂದ ಇಂದಿನವರೆಗಿನ ಐದು ದಶಕಗಳ ಅವಧಿಯಲ್ಲಿ ರಿಸರ್ವ್ ಬ್ಯಾಂಕು ಅಗಾಧವಾಗಿ ಬೆಳೆದಿದೆ, ಅನೇಕ ವಿಕ್ರಮಗಳನ್ನು ಸಾಧಿಸಿದೆ. ಭಾರತದ ಅತ್ಯಂತ ಬಿಕಟ್ಟಿನ ದಿನಗಳಲ್ಲಿ ಸ್ಥಾಪಿತವಾದ ಬ್ಯಾಂಕು ಈ ಐವತ್ತು ವರ್ಷಗಳಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸಿ ಗೆದ್ದಿದೆ. ರಿಸರ್ವ್ ಬ್ಯಾಂಕ್ ಐವತ್ತು ವರ್ಷಗಳಲ್ಲಿ ಭಾರತದ ಆರ್ಥಿಕ ಇತಿಹಾಸವನ್ನೇ ತಿದ್ದಿ ಬೆಳೆಸಿದೆಯೆನ್ನಬಹುದು. ದೇಶ ಈ ಅವಧಿಯಲ್ಲಿ ಅಗಾಧ ಆರ್ಥಿಕ, ರಾಜಕೀಯ ಹಾಗೂ ಸಾಮಾಜಿಕ ಬದಲಾವಣೆಗಳನ್ನು ಕಂಡಿದೆ. ರಿಸರ್ವ್ ಬ್ಯಾಂಕು ಕೂಡ ಬಹಳವಮಟ್ಟಿಗೆ ಇದರಲ್ಲಿ ಪಾಲ್ಗೊಂಡಿದೆ.

1935ರಲ್ಲಿ ರಿಸರ್ವ್ ಬ್ಯಾಂಕು ಸ್ಥಾಪಿತವಾದ್ದು ಪ್ರಪಂಚದ ಮುಂದುವರಿದ ದೇಶಗಳ ಕೇಂದ್ರೀಯ ಬ್ಯಾಂಕುಗಳ ಮಾದರಿಯಲ್ಲೇ. ನೋಟು ನೀಡಿಕೆಯ ಪ್ರಾಧಿಕಾರ ಹೊಂದಿ, ಸರ್ಕಾರದ ಬ್ಯಾಂಕಾಗಿ, ಬ್ಯಾಂಕುಗಳ ಬ್ಯಾಂಕಾಗಿ ಇದು ಕಾರ್ಯದಲ್ಲಿ ತೊಡಗಿತು. ಇವೆಲ್ಲಾ ಕೇಂದ್ರೀಯ ಬ್ಯಾಂಕುಗಳಿಗೆ ಪರಂಪರಾಗತವಾಗಿ ಬಂದ ಕಾರ್ಯಭಾರಗಳೇ. ಆರ್ಥಿಕ ಅಭಿವರ್ಧನೆಯ ಸಾಧನವಾಗಿ ಅದು ಕೈಗೊಂಡ ಒಂದು ಕಾರ್ಯಭಾರವೆಂದರೆ ಕೃಷಿಗೆ ಸಹಕಾರ ಕ್ಷೇತ್ರದಿಂದ ಉದರಿ ದೊರಕುವಂತೆ ಪ್ರೋತ್ಸಾಹ ನೀಡುವುದು. ಈ ಒಂದು ವಿಚಾರವನ್ನು ಬಿಟ್ಟರೆ ಉಳಿದಂತೆ ರಿಸರ್ವ್ ಬ್ಯಾಂಕಿಗೆ ದೇಶದ ಮಹಾ ಪರಿವರ್ತನೆಯ ಕಾರ್ಯದಲ್ಲಿ ಕೈಹಾಕುವ ಹೊಣೆಯೇನೂ ಇರಲಿಲ್ಲವೆನ್ನಬೇಕು. ದೇಶದ ಅರ್ಥವ್ಯವಸ್ಥೆಯ ಪರಿವರ್ತನೆಯ ವೇಗವರ್ಧಕ

ವಾಗಿ ಅದೇನೂ ಮಾಡಬೇಕಾದ್ದಿರಲಿಲ್ಲ.

ರಿಸರ್ವ್ ಬ್ಯಾಂಕಿನ ಸ್ಥಾಪನೆಯ ಅನಂತರದ ವರ್ಷಗಳು ಬಹಳ ತ್ರಾಸದಾಯಕವಾಗಿದ್ದಂಥವೇ. ಪ್ರಪಂಚದಲ್ಲಿ ಎರಡನೆಯ ಮಹಾಯುದ್ಧಕ್ಕೆ ಸನ್ನಾಹ ನಡೆದಿತ್ತು. ಅನಂತರ ಯುದ್ಧವೇ ಭುಗಿಲೆದ್ದಿತು. ತನ್ನಿಚ್ಛೆಯಿಲ್ಲದೆ ಯುದ್ಧದ ಹೊಂಡಕ್ಕೆ ಭಾರತವೂ ತಳ್ಳಲ್ಪಟ್ಟಾಗ ಅದರ ಅರ್ಥವ್ಯವಸ್ಥೆ ಜರ್ಜರಿತವಾಯಿತು. ಮೊತ್ತಮೊದಲನೆಯ ಬಾರಿಗೆ ಭಾರತಕ್ಕೆ ಹಣದುಬ್ಬರದ ಬಿಸಿ ತಾಕಿತು. ಯುದ್ಧಾನಂತರದ ಕಾಲದ ಹಣಕಾಸು ಪರಿಸ್ಥಿತಿಯ ಸ್ವರೂಪವೇ ಬೇರೆಯಾಯಿತು. ಯುದ್ಧದ ಫಲವಾಗಿ ಉದ್ಭವಿಸಿದ್ದ ಆರ್ಥಿಕ ಸಮಸ್ಯೆಗಳ ಜೊತೆಗೆ ರಾಜಕೀಯ ಅಲ್ಲಕಲ್ಲೋಲದ ಪರಿಣಾಮವನ್ನೂ ಎದುರಿಸಬೇಕಾಗಿ ಬಂತು. ದೇಶ ಒಡೆಯಿತು. ಭಾರತ ಸ್ವತಂತ್ರವಾಯಿತು. ದೇಶವಿಭಜನೆಯೊಂದಿಗೆ ಬ್ಯಾಂಕಿಂಗ್ ಹಾಗೂ ಹಣಕಾಸಿನ ಕ್ಷೇತ್ರದಲ್ಲೂ ಹಲವಾರು ಸಮಸ್ಯೆಗಳು ಉದ್ಭವಿಸಿದುವು. ಅನಂತರ ಪಾಕಿಸ್ತಾನದೊಂದಿಗೂ ಚೀನದೊಂದಿಗೂ ಯುದ್ಧಗಳು ಸಂಭವಿಸಿದುವು. ಈ ಸಂದರ್ಭಗಳಲ್ಲೆಲ್ಲ ರಿಸರ್ವ್ ಬ್ಯಾಂಕು ಹಣಕಾಸಿನ ಕ್ಷೇತ್ರದಲ್ಲಿ ಕೈಗೊಳ್ಳಬೇಕಾಗಿ ಬಂದ ಕ್ರಮಗಳು ಸಾಮಾನ್ಯವಲ್ಲ.

ಈ ನಡುವೆ ರಿಸರ್ವ್ ಬ್ಯಾಂಕಿನ ಸ್ವರೂಪದಲ್ಲೇ ಮಹಾ ಪರಿವರ್ತನೆಯಾಗಿದೆ. 1949ರಲ್ಲಿ ರಿಸರ್ವ್ ಬ್ಯಾಂಕಿನ ರಾಷ್ಟ್ರೀಕರಣವಾಯಿತು. ಷೇರುದಾರರ ಸಂಸ್ಥೆಯಾಗಿದ್ದ ರಿಸರ್ವ್ ಬ್ಯಾಂಕಿನ ಒಡೆತನ ಹಾಗೂ ನಿಯಂತ್ರಣಗಳು ಸರ್ಕಾರದ ವಶಕ್ಕೆ ಬಂದುವು. ಯುದ್ಧಾನಂತರದ ಕಾಲದಲ್ಲಿ ಅನೇಕ ದೇಶಗಳಲ್ಲಿ ಕಂಡುಬಂದ ಪ್ರವೃತ್ತಿಯೇ ಇದು. ಅನೇಕ ಹಳೆಯ ಕೇಂದ್ರೀಯ ಬ್ಯಾಂಕುಗಳು ರಾಷ್ಟ್ರೀಕರಣಗೊಂಡಿದ್ದುವು. ಇಂಗ್ಲೆಂಡಿನಲ್ಲಿ ಬ್ಯಾಂಕ್ ಆಫ್ ಇಂಗ್ಲೆಂಡ್ ರಾಷ್ಟ್ರೀಕೃತ ಬ್ಯಾಂಕ್ ಆಗಿ ಪರಿವರ್ತನೆಗೊಂಡಿತ್ತು. ಅನೇಕ ರಾಷ್ಟ್ರಗಳಲ್ಲಿ ನೂತನವಾಗಿ ಸ್ಥಾಪಿತವಾದ ಕೇಂದ್ರೀಯ ಬ್ಯಾಂಕುಗಳು ರಾಷ್ಟ್ರದ ಒಡೆತನದಲ್ಲೇ ಆರಂಭವಾಗಿದ್ದುವು. ಭಾರತವಾದರೂ ಈ ವಿಚಾರದಲ್ಲಿ ಹಿಂದುಳಿಯಲಿಲ್ಲ.

ಗಣರಾಜ್ಯ ಭಾರತ ಹೊಸದೊಂದು ಸಾಹಸದ ಮಾರ್ಗದಲ್ಲಿ ಹೆಜ್ಜೆಯಿಡತೊಡಗಿತ್ತು. ಪಂಚವಾರ್ಷಿಕಯೋಜನೆಗಳ ಮಾರ್ಗವದು. ಭಾರತದ ಅರ್ಥವ್ಯವಸ್ಥೆಯ ಅಭಿವೃದ್ಧಿ ಸಾಧನೆಯಲ್ಲಿ ರಿಸರ್ವ್ ಬ್ಯಾಂಕಿಗೆ ಒಪ್ಪಿಸಿದ ಹೊಣೆ ಅಗಾಧವಾದ್ದು. ಅಭಿವೃದ್ಧಿಗೆ ಒದಗಿಬರುವಂತೆ ಆಂತರಿಕ ಉಳಿತಾಯ ಹಾಗೂ ವಿನಿಯೋಜನೆಗೆ ಪ್ರೋತ್ಸಾಹ, ಜೊತೆಜೊತೆಗೇ ಬೆಲೆಗಳ ಮಟ್ಟ ಏರಿದಂತೆ ಕಟ್ಟುನಿಟ್ಟಿನ ಕ್ರಮಗಳ ಜಾರಿ, ಬ್ಯಾಂಕಿನ ಕಲಾಪಗಳ ವಿಸ್ತರಣೆ—ಇವೂ ರಿಸರ್ವ್ ಬ್ಯಾಂಕಿನ ಮುಖ್ಯ ಹೊಣೆಗಳಾದುವು. ಸರ್ಕಾರದ ವ್ಯವಹಾರ ನಡೆಸುವ, ನೋಟು ನೀಡಿಕೆಯ ಪಾತ್ರ ನಿರ್ವಹಿಸುವ, ಬ್ಯಾಂಕುಗಳ ಬ್ಯಾಂಕಾಗಿ ವರ್ತಿಸುವ ಕಾರ್ಯಭಾರಗಳ ಜೊತೆಗೆ ರಿಸರ್ವ್ ಬ್ಯಾಂಕು ಅಭಿವೃದ್ಧಿಶೀಲ ಅರ್ಥವ್ಯವಸ್ಥೆಯ ಅಗತ್ಯಗಳನ್ನು ಪೂರೈಸುವ ಕಾರ್ಯದಲ್ಲಿ ಸಾಕಷ್ಟು ದೂರ ಸಾಗಿ ಬಂದಿದೆ. ಅನೇಕ ದೇಶಗಳ ಕೇಂದ್ರೀಯ ಬ್ಯಾಂಕುಗಳು ಸಾಮಾನ್ಯವಾಗಿ ಅದುವರೆಗೂ ನಿರ್ವಹಿಸದಿದ್ದಂಥ ಕಾರ್ಯಭಾರಗಳು ಇವು.

ರಿಸರ್ವ್ ಬ್ಯಾಂಕು ಈ ಹೊಣೆಯನ್ನು ತಕ್ಕಮಟ್ಟಿಗೆ ಯಶಸ್ವಿಯಾಗಿಯೇ ನಿರ್ವಹಿಸಿದೆಯೆನ್ನಬೇಕು. ಭಾರತದ ಅರ್ಥವ್ಯವಸ್ಥೆಯಲ್ಲಿ ಹಣದ ಪಾತ್ರ ವಿಸ್ತರಿಸಿದೆ. ಜನರಲ್ಲಿ ಬ್ಯಾಂಕಿಂಗ್ ಅಭ್ಯಾಸ ಬೆಳೆದಿದೆ. ಅವರ ಉಳಿತಾಯಗಳು ಹಣ ಸಂಸ್ಥೆಗಳ ಮೂಲಕ ಹರಿದುಬಂದು ಒಗ್ಗೂಡಿ, ರಾಷ್ಟ್ರಾಭಿವೃದ್ಧಿ ಕಾರ್ಯಕ್ಕೆ ಒದಗಿಬರುವಂತಾಗಿದೆ. ದೇಶದಲ್ಲಿ ಸುಭದ್ರ ಬ್ಯಾಂಕಿಂಗ್ ಹಾಗೂ ಉದರಿ ಸಂರಚನೆಯ ನಿರ್ಮಾಣವಾಗಿದೆ. ಕೃಷಿ ಹಾಗೂ ತತ್ಸಂಬಂಧದ ಚಟುವಟಿಕೆಗಳಿಗೆ ಉದರಿಯ ವಿತರಣೆ ಸಾಧ್ಯವಾಗುವಂತೆ ವಿವಿಧ ಸ್ತರಗಳಲ್ಲಿ ವೈವಿಧ್ಯಮಯವಾದ ಸಾಂಸ್ಥಿಕ ವ್ಯವಸ್ಥೆಯ ರಚನೆಯಾಗಿದೆ. ಕೈಗಾರಿಕೆಗಳಿಗೆ ಸಾವಧಿಕ ಹಣಕಾಸು ದೊರಕುವಂತೆ ಅಖಿಲ ಭಾರತದ ಹಾಗೂ ಪ್ರಾದೇಶಿಕ ಮಟ್ಟಗಳಲ್ಲಿ ಅನೇಕ ವಿಶಿಷ್ಟ ಹಣಕಾಸು ಸಂಸ್ಥೆಗಳನ್ನು ರಿಸರ್ವ್ ಬ್ಯಾಂಕು ಪ್ರವರ್ತನೆಗೊಳಿಸಿದೆ. ಆರ್ಥಿಕ ಅಭಿವೃದ್ಧಿ ಹಾಗೂ ಸಾಮಾಜಿಕ ನ್ಯಾಯವನ್ನು ಸಾಧಿಸುವ ಉದ್ದೇಶದಿಂದ ಯೋಜನಾ ಪ್ರಾಧಿಕಾರ ಹಾಗೂ ಸರ್ಕಾರಗಳು ಇಟ್ಟುಕೊಂಡ ಕಾರ್ಯಕ್ರಮಗಳಿಗೆ ಹಣದ ಬೆಂಬಲ ಪ್ರಾಪ್ತವಾಗುವಂತೆ ಇದು ನೋಡಿಕೊಂಡಿದೆ.

ದೇಶಾದ್ಯಂತ ಅಭಿವೃದ್ಧಿ ಚಟುವಟಿಕೆಗಳಿಗೆ ಹಣಕಾಸು ಒದಗಿಬರಲು ಅಗತ್ಯವಾದ ವ್ಯವಸ್ಥೆಯನ್ನು ರಿಸರ್ವ್ ಬ್ಯಾಂಕು ತಾನೇ ರಚಿಸಬೇಕು, ಇಲ್ಲವೇ ಅದರ ರಚನೆಗೆ ಅಗತ್ಯವಾದ ನೆರವು ನೀಡಬೇಕು; ಅಭಿವೃದ್ಧಿಗೆ ಒದಗಿಬರುವ ಹಣಕಾಸು ಉದ್ದೇಶಿಸಿದ ದಿಕ್ಕುಗಳಲ್ಲಿ, ನಿಗದಿಯಾದ ಪ್ರಮಾಣಗಳಲ್ಲಿ ಹರಿದುಬರುವಂತೆ ರಿಸರ್ವ್ ಬ್ಯಾಂಕು ನೋಡಿಕೊಳ್ಳಬೇಕು—ಎಂಬುದಾಗಿ ನಮ್ಮ ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ಆಶಿಸಲಾಗಿತ್ತು. ರಿಸರ್ವ್ ಬ್ಯಾಂಕು ಈ ಆಶಯವನ್ನು ಬಹುಮಟ್ಟಿಗೆ ಸಫಲಗೊಳಿಸಿದೆಯೆನ್ನಬಹುದು. ತನ್ನ ಮುಂದೆ ಇರಿಸಲಾದ ವಿಭಿನ್ನ ಹೊಣೆಗಳನ್ನು ಅದು ನಿರ್ವಹಿಸಿದೆ. ಹಣಕಾಸಿನ ಅಧೋರಚನೆಯಲ್ಲಿದ್ದ ಕೊರತೆಗಳನ್ನು ತುಂಬಲು ಯತ್ನಿಸಿದೆ. ಅರ್ಥವ್ಯವಸ್ಥೆಯ ಉದರಿ ಅಗತ್ಯಗಳನ್ನು ಪೂರೈಸಿದೆ.

ವಿನಿಯೋಜನಾರ್ಹ ನಿಧಿಗಳನ್ನು ದಕ್ಷವಾದ ಹಾಗೂ ಉತ್ಪಾದಕವಾದ ರೀತಿಯಲ್ಲಿ ಹೂಡುವಲ್ಲಿ ಯೋಜನಾ ಆಯೋಗಕ್ಕೆ ಬ್ಯಾಂಕು ನೆರವನ್ನೂ ಬೆಂಬಲವನ್ನೂ ನೀಡಿದೆ. ಸ್ಥಿರತೆ, ಸಾಮಾಜಿಕ ನ್ಯಾಯ ಇವುಗಳನ್ನು ಸಾಧಿಸುವುದರೊಂದಿಗೇ ಬೆಳವಣಿಗೆಯನ್ನು ಗರಿಷ್ಠಗೊಳಿಸುವಂತೆ ಧನ ನಿರ್ವಹಣೆಯ ಕಾರ್ಯ ಕೈಗೊಂಡಿದೆ.

ದೇಶದ ಪ್ರಮುಖ ಬ್ಯಾಂಕುಗಳ ರಾಷ್ಟ್ರೀಕರಣವಾದ ಮೇಲಂತೂ ರಿಸರ್ವ್ ಬ್ಯಾಂಕಿನ ಪಾತ್ರ ಹಾಗೂ ಹೊಣೆಗಳು ಅಗಾಧವಾಗಿ ಬೆಳೆದಿವೆಯೆನ್ನಬಹುದು. ದೇಶದ ಹಿಂದುಳಿದ ಪ್ರದೇಶಗಳ ಹಾಗೂ ಜನವರ್ಗಗಳ ಪ್ರಗತಿ ಸಾಧನೆಯ ಗುರಿಯನ್ನು ಮುಂದಿಟ್ಟುಕೊಂಡು ಬ್ಯಾಂಕುಗಳು ಮುನ್ನಡೆಯುವಂತೆ ಅವಕ್ಕೆ ಮಾರ್ಗದರ್ಶನ ಹಾಗೂ ನೆರವು ನೀಡುವ ಕಾರ್ಯದಲ್ಲಿ ರಿಸರ್ವ್ ಬ್ಯಾಂಕು ಎಂದೂ ಹಿಂದೆಮುಂದೆ ನೋಡಿಲ್ಲ. ಅಗ್ರ ಬ್ಯಾಂಕಿಂಗ್ ಒಂದು ಕ್ರಾಂತಿಕಾರಕವಾದ ಪರಿಕಲ್ಪನೆ. ದೇಶದ ಮೂಲೆಮೂಲೆಗಳಿಗೂ ಬ್ಯಾಂಕುಗಳ ಸೇವೆ ಲಭ್ಯವಾಗುವಂತೆ ಶಾಖಾಜಾಲದ ರಚನೆ ಮಾಡಬೇಕೆಂಬ ಉದ್ದೇಶದಿಂದ ಹೊಸ ಶಾಖೆಗಳ ಆರಂಭಕ್ಕೆ ಪರವಾನೆ ನೀಡುವಲ್ಲಿ ರಿಸರ್ವ್ ಬ್ಯಾಂಕು ಸಂಯೋಜಿತವಾದ ಕ್ರಮ ಕೈಗೊಂಡಿದೆ. ಪಟ್ಟಣಗಳಲ್ಲೇ ದಟ್ಟೈಸಿದ್ದ ಬ್ಯಾಂಕಿಂಗ್ ಕಲಾಪಗಳು ಹಳ್ಳಿಗಳಿಗೂ ಪಯಣ ಬೆಳೆಸುವಂತೆ ರಿಸರ್ವ್ ಬ್ಯಾಂಕ್ ನೋಡಿಕೊಂಡಿದೆ. 1969ರಿಂದ ಇದುವರೆಗೆ ಬ್ಯಾಂಕ್ ಶಾಖೆಗಳ ಸಂಖ್ಯೆ ಆರು ಮಡಿಯಾಗಿದ್ದರೆ. ಠೇವಣಿಗಳು ಹದಿನಾರರಷ್ಟಾಗಿದ್ದರೆ, ಮುಂಗಡಗಳೂ ಸುಮಾರು ಹದಿನೈದು ಪಟ್ಟು ಬೆಳೆದಿದ್ದರೆ, ಅದರ ಹಿಂದೆ ರಿಸರ್ವ್ ಬ್ಯಾಂಕಿನ ಪ್ರೇರಣೆ-ನಿರ್ದೇಶನಗಳೂ ಇಲ್ಲದಿಲ್ಲ.

ನೋಟು ನೀಡಿಕೆಯ ಪ್ರಾಧಿಕಾರವಾಗಿ, ಬ್ಯಾಂಕುಗಳ ಬ್ಯಾಂಕಾಗಿ, ಉದರಿ ನಿಯಂತ್ರಣದ ಹೊಣೆ ಹೊತ್ತ ಸಂಸ್ಥೆಯಾಗಿ ಕಾರ್ಯಾರಂಭಮಾಡಿದ ರಿಸರ್ವ್ ಬ್ಯಾಂಕು ಈಚಿನ ವರ್ಷಗಳಲ್ಲಿ ತನ್ನದೇ ಆದೊಂದು ರಾಜಮಾರ್ಗವನ್ನು ನಿರ್ಮಿಸಿಕೊಂಡಿದೆ. ಆರ್ಥಿಕ ಅಭಿವೃದ್ಧಿ ಹಾಗೂ ಬೆಳವಣಿಗೆ ಸಾಧಿಸಲು, ವರಮಾನದ ಅಂತರಗಳನ್ನು ಕಡಿಮೆ ಮಾಡಲು, ಕೆಲವೇ ವ್ಯಕ್ತಿಗಳಲ್ಲಿ ಅಥವಾ ಸಮೂಹಗಳಲ್ಲಿ ಆರ್ಥಿಕ ಅಧಿಕಾರ ಸಾಂದ್ರೀಕೃತವಾಗುವುದನ್ನು ನಿವಾರಿಸಲು, ಬ್ಯಾಂಕಿಂಗ್ ಸೌಲಭ್ಯಗಳ ಒದಗಣೆಯಲ್ಲಿಯ ಪ್ರಾದೇಶಿಕ ತರತಮಗಳನ್ನು ಹೋಗಲಾಡಿಸಲು ಸಾಧ್ಯವಾಗುವಂತೆ ಅದು ತನ್ನ ರೀತಿನೀತಿಗಳನ್ನು ಪುನರನುಸ್ಥಾಪಿಸಿಕೊಂಡಿದೆ. ಕೆಲವೇ ಪ್ರತಿಷ್ಠಿತ ವರ್ಗಗಳ ಸೇವೆಗೆ ಮುಡಿಪಾಗಿದ್ದ ಬ್ಯಾಂಕಿಂಗ್ ಸಂಸ್ಥೆಗಳು ನಿಜವಾದ ಅರ್ಥದಲ್ಲಿ ಜನಪರವಾಗುವಂತೆ ಮಾಡಲು ರಿಸರ್ವ್ ಬ್ಯಾಂಕ್ ಹೆಣಗುತ್ತ ಬಂದಿದೆ. ಅಗ್ರ ಬ್ಯಾಂಕಿಂಗ್ ಯೋಜನೆ ಈ ನಿಟ್ಟಿನಲ್ಲಿ ಒಂದು ಸ್ತುತ್ಯಪ್ರಯತ್ನ. ಒಳನಾಡಿನಲ್ಲಿ ಹಬ್ಬಿದ ಜನಸಮೂಹಗಳಿಂದ ಠೇವಣಿಗಳನ್ನು ಸಂಗ್ರಹಿಸುವುದೂ ದುರ್ಬಲವರ್ಗಗಳಿಗೆ ಹಣಕಾಸಿನ ಹಾಗೂ ಇತರ ಬಗೆಯ ನೆರವು ದೊರಕುವಂತೆ ಮಾಡುವುದೂ ಅಗ್ರ ಬ್ಯಾಂಕಿಂಗ್ ಯೋಜನೆಯ ದ್ವೈತೋದ್ದೇಶಗಳು. ಪ್ರಾದೇಶಿಕ ಗ್ರಾಮೀಣ ಬ್ಯಾಂಕು ಇದರ ಮುಂದಿನ ಹೆಜ್ಜೆ. ಬಡತನದ ರೇಖೆಯ ಕೆಳಗಿರುವ ಜನಕೋಟಿಯ ಮೇಲ್ಪಾಟು, ನಿರುದ್ಯೋಗ ಅಲ್ಪೋದ್ಯೋಗ ಹಾಗೂ ಪ್ರಚ್ಛನ್ನ ನಿರುದ್ಯೋಗಪರಿಸ್ಥಿತಿಯ ನಿವಾರಣೆ, ಸ್ವೋದ್ಯೋಗಾವಕಾಶಗಳ ಕಲ್ಪನೆ ಹಾಗೂ ಸಾಮರ್ಥ್ಯದ ನಿರ್ಮಾಣ ಇಂಥ ಅನೇಕ ಉದ್ದೇಶಗಳಿಂದ ಬ್ಯಾಂಕುಗಳು ಇಂದು ಕಾರ್ಯಪ್ರವೃತ್ತವಾಗಿವೆ. ಅಭಿವೃದ್ಧಿ ಬ್ಯಾಂಕಿಂಗಿನ ನಾನಾ ಪರಿಕಲ್ಪನೆಗಳ ಉದಯವಾಗಿದೆ. ಬೆಳವಣಿಗೆಯ ಕೇಂದ್ರಗಳನ್ನು ಗುರುತಿಸುವ, ಠೇವಣಿ ಸಂಗ್ರಹಣೆಯ ಅವಕಾಶಗಳ ಪತ್ತೆಹಚ್ಚುವ, ಎಲ್ಲಿ ಉದರಿ ಅಗತ್ಯವೆಂಬುದನ್ನೂ ಎಲ್ಲಿ ಅದು ಸಾಕಷ್ಟಿಲ್ಲವೆಂಬುದನ್ನೂ ಪರಿಶೀಲಿಸುವ, ಪ್ರತಿಯೊಂದು ಜಿಲ್ಲೆಯ ಬ್ಯಾಂಕಿಂಗ್ ಹಾಗೂ ಇತರ ಹಣಕಾಸು ಸಂಸ್ಥೆಗಳ ಸಹಯೋಗದೊಂದಿಗೆ ಆ ಪ್ರದೇಶದಲ್ಲಿ ಉದರಿ ವಿನಿಯೋಜನೆಗಾಗಿ ಸಂಯೋಜಿತ ಕಾರ್ಯಕ್ರಮವೊಂದನ್ನು ರೂಪಿಸುವ ಹೊಣೆ ಆಯಾ ಜಿಲ್ಲೆಯ ಅಗ್ರಬ್ಯಾಂಕಿಂಗ್ ಸಂಸ್ಥೆಯದಾಗಿರುತ್ತದೆ. ಪ್ರಾದೇಶಿಕ ಅಭಿವೃದ್ಧಿಯ, ಆರ್ಥಿಕ ಬದಲಾವಣೆಯ ಸಾಧನವಾಗಿ ಬ್ಯಾಂಕುಗಳನ್ನು ಪರಿವರ್ತಿಸುವಲ್ಲಿ ರಿಸರ್ವ್ ಬ್ಯಾಂಕಿನ ಪಾತ್ರ ದೊಡ್ಡದು.

ಉದರಿ ನಿಯಂತ್ರಣವನ್ನು ಕುರಿತದ್ದು ರಿಸರ್ವ್ ಬ್ಯಾಂಕಿನ ಇನ್ನೊಂದು ದೊಡ್ಡ ಕಾರ್ಯಕ್ಷೇತ್ರ. ಭಾರತದಂಥ ಅಭಿವೃದ್ಧಿಶೀಲ ದೇಶದಲ್ಲಿ ಇದು ಬಹು ಜಟಿಲವಾದ್ದು. ದೇಶದ ವಿವಿಧ ಹಣ ವಲಯಗಳ ನಡುವೆ ಹೊಂದಾಣಿಕೆಯಿಲ್ಲದಿರುವುದು, ಇಡೀ ಹಣ ಮಾರುಕಟ್ಟೆ ಏಕೀಕೃತವಾಗಿಲ್ಲದಿರುವುದು, ಒಂದು ಕಾರಣ. ಉದರಿಯ ಪರಿಮಾಣಾತ್ಮಕ ಅಥವಾ ಗಾತ್ರಾತ್ಮಕ ನಿಯಂತ್ರಣದೊಂದಿಗೆ ಗುಣಾತ್ಮಕ ಹಾಗೂ ವಲಯಾತ್ಮಕ ನಿಯಂತ್ರಣವೂ ಅಗತ್ಯವಾಗಿದೆ. ಆದ್ಯತೆಗೆ ಅನುಗುಣವಾಗಿ ನಿಧಿಗಳು ಹರಿಯುವಂತೆ ಮಾಡುವುದರ ಜೊತೆಗೆ, ಕೆಲವು ಕ್ಷೇತ್ರಗಳಿಗೆ ಅನಾವಶ್ಯಕವಾಗಿ ಹಣ ಹರಿದು, ಕೊಚ್ಚೆ ಏರ್ಪಟ್ಟು, ಇಡೀ ಅರ್ಥವ್ಯವಸ್ಥೆಯೇ ಅಸ್ತವ್ಯಸ್ತವಾಗದ ಹಾಗೆ ನೋಡಿಕೊಳ್ಳಬೇಕಾಗಿದೆ. ಉತ್ಪಾದನೆಗೆ ಉತ್ತೇಜನ ದೊರಕಿಸಿಕೊಡಬೇಕಾಗಿದೆ. ಕೇಂದ್ರೀಯ ಬ್ಯಾಂಕಿನ ಪರಂಪರಾಗತ

ಉದರಿ ನಿಯಂತ್ರಣಾಸ್ತ್ರಗಳ ಜೊತೆಗೆ ಹೊಸ ಹೊಸ ಅಸ್ತ್ರಗಳನ್ನು ಬೇರೆಬೇರೆಯಾಗಿಯೋ ಪರಸ್ಪರ ಹೊಂದಿಸಿಯೋ ಪ್ರಯೋಗಿಸುವುದರ ಮೂಲಕ ರಿಸರ್ವ್ ಬ್ಯಾಂಕು ಇದನ್ನೆಲ್ಲ ಸಾಧಿಸಲು ಯತ್ನಿಸುತ್ತಿದೆ. ಬ್ಯಾಂಕು ದರ, ತೆರೆದ ಪೇಟೆಯ ಕಲಾಪಗಳು, ವರಣಾತ್ಮಕ ಉದರಿ ನಿಯಂತ್ರಣ, ಪ್ರತಿಭೂತಿಯ ಆಧಾರದ ಮೇಲೆ ನೀಡಬಹುದಾದ ಮುಂಗಡದ ಪ್ರಮಾಣದ ನಿಗದಿ, ನಗದು ಮೀಸಲು ಅನುಪಾತದ ಏರಿಳಿತ, ಪರಿನಿಯತ ದ್ರವತ್ವ ಅನುಪಾತದಲ್ಲಿ ವ್ಯತ್ಯಾಸ, ನೈತಿಕ ಪ್ರಭಾವ, ಬಲಾತ್ಕಾರ ಮುಂತಾದ ನಾನಾ ವಿಧಾನಗಳಿಂದ ಉದರಿ ನಿಯಂತ್ರಣ ಸಾಧಿಸಲೂ, ಉತ್ಪಾದನೆಗೆ ಯಥೋಚಿತ ಉತ್ತೇಜನ ದೊರಕಿಸಲೂ, ಹಣದುಬ್ಬರವನ್ನು ಹತ್ತಿಕ್ಕಲೂ ರಿಸರ್ವ್ ಬ್ಯಾಂಕು ಯತ್ನಿಸಿದೆ.

ರಿಸರ್ವ್ ಬ್ಯಾಂಕು ಈಗ ಸರ್ಕಾರದ ಒಡೆತನದ ಸಂಸ್ಥೆಯಾದರೂ ಅದಕ್ಕೆ ತಕ್ಕಮಟ್ಟಿನ ಸ್ವಾಯತ್ತಾಧಿಕಾರ ಇದೆಯೆನ್ನಬಹುದು. ಅದು ಸ್ವತಂತ್ರ ಸಂಸ್ಥೆಯೆಂಬಂತೆ ಸರ್ಕಾರಕ್ಕೆ ಆಗಿಂದಾಗ್ಗೆ ಆರ್ಥಿಕ ವಿಚಾರಗಳ ಬಗ್ಗೆ ಸಲಹೆ ನೀಡುತ್ತ ಬಂದಿದೆ. ಸರ್ಕಾರದ ನೀತಿಗಳು ಕಾರ್ಯಗತವಾಗುವಂತೆ ಮಾಡಲು ಯುಕ್ತಕ್ರಮಗಳನ್ನೂ ಕೈಗೊಳ್ಳುತ್ತ ಬರುತ್ತಿದೆ. ಸರ್ಕಾರ ಹಾಗೂ ಬ್ಯಾಂಕಿನ ನಡುವೆ ಸಂಪೂರ್ಣ ಸಹಯೋಗ ಅತ್ಯಗತ್ಯ. ಆದರೆ ಯಾವುದೇ ವಿಚಾರದಲ್ಲಿ ಭಿನ್ನಾಭಿಪ್ರಾಯವುಂಟಾದಾಗ ರಿಸರ್ವ್ ಬ್ಯಾಂಕಿನ ಮಾತು ನಡೆಯತಕ್ಕದ್ದೇ ಅಥವಾ ಸರ್ಕಾರದ ಮಾತು ನಡೆಯಬೇಕೇ ಎಂಬುದು ಕೂಟಪ್ರಶ್ನೆ. ರಿಸರ್ವ್ ಬ್ಯಾಂಕ್ ಸರ್ಕಾರದ ಒಡೆತನದ ಸಂಸ್ಥೆಯಾದ್ದರಿಂದ, ಅದರ ಉನ್ನತಾಧಿಕಾರಿಗಳ ನೇಮಕವಾಗುವುದು ಸರ್ಕಾರದಿಂದಲಾದ್ದರಿಂದ ಅನೇಕ ವೇಳೆ ಸರ್ಕಾರದ್ದೇ ಕೊನೆಯ ಮಾತು ಎಂಬಂತಾಗಿದೆ. ರಿಸರ್ವ್ ಬ್ಯಾಂಕು ಸರ್ಕಾರದ ಆದೇಶದಂತೆಯೇ ನಡೆದುಕೊಂಡು, ಸ್ವಾಯತ್ತ ಹಣ ಸಂಸ್ಥೆಯಾಗಿ ತನ್ನ ಹೊಣೆಯನ್ನು ಬಿಟ್ಟುಕೊಟ್ಟ ಸಂದರ್ಭಗಳೂ ಇಲ್ಲದಿಲ್ಲ. ಆದರೆ ಕೇಂದ್ರೀಯ ಬ್ಯಾಂಕ್ ಹಾಗೂ ಸರ್ಕಾರದ ಸಂಬಂಧ ಅತ್ಯಂತ ಸೂಕ್ಷ್ಮವಾದ್ದು. ಈ ವಿಚಾರದಲ್ಲಿ ಸಮತೋಲ ಸಾಧಿಸಲು ಉಭಯಪಕ್ಷಗಳೂ ವಿವೇಕದಿಂದ ವರ್ತಿಸಬೇಕಾಗುತ್ತದೆ. ಸರ್ಕಾರ, ಬ್ಯಾಂಕು ಎರಡೂ ಈ ಕೌಶಲವನ್ನು ಇನ್ನೂ ಸಾಧಿಸಬೇಕಾಗಿದೆ. ಇದೊಂದು ಕೊರತೆಯೇ ಎನ್ನಬೇಕು.

ಈ ಐವತ್ತು ವರ್ಷಗಳ ಸಾಧನೆಗಳನ್ನು ನೆನೆದು ರಿಸರ್ವ್ ಬ್ಯಾಂಕು ಬೆನ್ನು ಚಪ್ಪರಿಸಿಕೊಳ್ಳಬಹುದಾಗಿದೆ. ಭಾರತದಲ್ಲಿ ಪದೇಪದೇ ಬ್ಯಾಂಕುಗಳು ದಿವಾಳಿ ಏಳುತ್ತಿದ್ದ ಪರಿಸ್ಥಿತಿ ಈಗ ಇಲ್ಲದಂತಾಗಿರುವುದಕ್ಕೆ ರಿಸರ್ವ್ ಬ್ಯಾಂಕೂ ಬಹಳಮಟ್ಟಿಗೆ ಕಾರಣ. ಆದರೆ ಬ್ಯಾಂಕುಗಳ ಮೇಲೆ ರಿಸರ್ವ್ ಬ್ಯಾಂಕು ನಿಜವಾದ ಅರ್ಥದಲ್ಲಿ ಸಾಕಷ್ಟು ನಿಯಂತ್ರಣ ಸಾಧಿಸಲಾಗಿಲ್ಲ. ಈಚಿನ ವರ್ಷಗಳಲ್ಲಿ ನಮ್ಮ ಬ್ಯಾಂಕಿಂಗ್ ವಲಯ ಅಗಾಧವಾಗಿ ಬೆಳೆದಿದೆ. ಬ್ಯಾಂಕುಗಳ ಸಂಖ್ಯೆ ಹೆಚ್ಚದಿದ್ದರೂ ಶಾಖೆಗಳು ಬೆಳೆದಿವೆ. ಇವುಗಳ ನಿರೀಕ್ಷಣೆ, ಗುಣಮಟ್ಟದ ಏರಿಕೆ—ಈ ನಿಟ್ಟಿನಲ್ಲಿ ರಿಸರ್ವ್ ಬ್ಯಾಂಕು ಸಾಧಿಸಬೇಕಾದ್ದು ಬಹಳಷ್ಟಿದೆ. ಬ್ಯಾಂಕುಗಳಲ್ಲಿ ವಂಚನೆ, ಹಣದ ದಸ್ತು ಮುಂತಾದ ಪ್ರಕರಣಗಳು ಬೆಳೆಯುತ್ತಿವೆ. ಬ್ಯಾಂಕುಗಳು ಬೃಹತ್ ಅಸ್ವಸ್ಥ ಉದ್ಯಮಗಳಾಗುತ್ತಿವೆ. ಈ ಅನಿಷ್ಟಕಾರಕ ಪ್ರವೃತ್ತಿಗಳ ನಿವಾರಣೆಗೆ ರಿಸರ್ವ್ ಬ್ಯಾಂಕು ಇನ್ನೂ ಹೆಚ್ಚು ಶ್ರದ್ಧೆಯಿಂದ ಟೊಂಕ ಕಟ್ಟಿ ನಿಲ್ಲಬೇಕಾಗಿದೆ.

ದೇಶದಲ್ಲಿ ಅರ್ಬುದವ್ಯಾಧಿಯಂತೆ ಬೆಳೆಯುತ್ತಿರುವ ಹಣದುಬ್ಬರವನ್ನಾಗಲಿ, ಕಪ್ಪು ಹಣವನ್ನಾಗಲಿ ತಡೆಗಟ್ಟುವಲ್ಲಿ ರಿಸರ್ವ್ ಬ್ಯಾಂಕು ಯಶಸ್ಸು ಗಳಿಸಿಲ್ಲ. ಆದರೆ ರಿಸರ್ವ್ ಬ್ಯಾಂಕ್ ಒಂದೇ ಇದನ್ನು ಸಾಧಿಸಲಾರದು. ರಾಜಕೀಯ ವ್ಯವಸ್ಥೆ, ನೈತಿಕಮೌಲ್ಯಗಳು, ತೆರಿಗೆ ನೀತಿ, ಕಾನೂನು ಮುಂತಾದ ಹಲವಾರು ಪ್ರಸಕ್ತ ನಿಯತಾಂಕಗಳನ್ನು ನಾವಿಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಲಿಲಿಪುಟರ ನಾಡಿನಲ್ಲಿ ಬಂಧಿತನಾಗಿದ್ದ ಗಲಿವರನಂತೆ ಕಟ್ಟುಗಳನ್ನು ಮುರಿದು ಮೇಲೆದ್ದು ಬೆಳೆಯುತ್ತಿರುವ ಕೈಗಾರಿಕಾ ಸಾಮ್ರಾಜ್ಯಗಳನ್ನು ಹತ್ತಿಕ್ಕುವಲ್ಲೂ ರಿಸರ್ವ್ ಬ್ಯಾಂಕ್ ವಿಫಲಗೊಂಡಿದೆ. ಬ್ಯಾಂಕ್ ನಿಧಿಗಳು ಇವುಗಳಿಗೆ ಹರಿಯುವುದನ್ನು ತಡೆಗಟ್ಟುವುದು ಇನ್ನೂವರೆಗೂ ಸಾಧ್ಯವಾಗಿಲ್ಲ, ಅಸ್ವಸ್ಥ ಕೈಗಾರಿಕೆಗಳ ಸಂತ್ರಣ ಮಾಯಾಜಾಲವನ್ನು ಪಕ್ಕಕ್ಕೆ ಸರಿಸಿ ನೋಡಲು ರಿಸರ್ವ್ ಬ್ಯಾಂಕ್ ಸಮರ್ಥವಾಗಿಲ್ಲ. ಆದ್ಯತಾವಲಯಗಳಿಗೆ ಹರಿಯುತ್ತಿರುವ ಹಣದ ಹೊಳೆಯಿಂದ ಹಸಿರು ಕೊನರುತ್ತಿಲ್ಲ. ಅದು ಮರಳುಗಾಡಿನಲ್ಲಿ ಬತ್ತಿದ ತೊರೆಯಂತಾಗಿದೆ. ಅದರ ಗುರುತೂ ರಿಸರ್ವ್ ಬ್ಯಾಂಕಿಗೆ ಹತ್ತುತ್ತಿಲ್ಲ! ಹಳ್ಳಿಗಾಡುಗಳಲ್ಲಿ ಲೇವಾದೇವಿಗಾರರ ಕೈವಾಡ ತಪ್ಪಿಲ್ಲ. ಪರ್ಯಾಯ ಉದರಿ ಸಾಧನಗಳನ್ನು ರಿಸರ್ವ್ ಬ್ಯಾಂಕೂ ಸರ್ಕಾರವೂ ಇನ್ನೂ ತಲಾಷ್ ಮಾಡುತ್ತಲೇ ಇವೆ. ದೇಶೀಯ ಬ್ಯಾಂಕರುಗಳನ್ನು ಸಂಘಟಿತ ಬ್ಯಾಂಕಿಂಗ್ ವಲಯದೊಂದಿಗೆ ಹೆಣೆಯಲೂ ರಿಸರ್ವ್ ಬ್ಯಾಂಕು ಅಸಮರ್ಥವಾಗಿದೆ. ಹಣ ಪೇಟೆ ಸಂಪೂರ್ಣವಾಗಿ ರಿಸರ್ವ್ ಬ್ಯಾಂಕಿನ ಹತೋಟಿಗೆ ಒಳಪಟ್ಟಿಲ್ಲವೆಂಬ ಅಂಶವನ್ನು ನಾವು ರಿಸರ್ವ್ ಬ್ಯಾಂಕಿನ

ಯಾವುದೇ ಕ್ರಮದ ಸಾಫಲ್ಯವೈಫಲ್ಯಗಳ ಪರೀಕ್ಷೆ ನಡಸುವಾಗ ನೆನಪಿನಲ್ಲಿಟ್ಟುಕೊಳ್ಳಬೇಕು.

ಆದಾಗ್ಯೂ ರಿಸರ್ವ್ ಬ್ಯಾಂಕು ಈ ಐವತ್ತು ವರ್ಷಗಳಲ್ಲಿ ಭಾರತದ ಅರ್ಥವ್ಯವಸ್ಥೆಯ ವಟವೃಕ್ಷವಾಗಿ ಬೆಳೆದಿದೆ. ದೇಶದ ಆರ್ಥಿಕ ಇತಿಹಾಸವೂ ರಿಸರ್ವ್ ಬ್ಯಾಂಕಿನ ಇತಿಹಾಸವೂ ಒಂದೇ ಎಂಬ ರೀತಿಯಲ್ಲಿ ಇವೆರಡರ ನಡುವೆ ಅವಿನಾಭಾವ ಸಂಬಂಧ ಏರ್ಪಟ್ಟಿದೆ. ಇದೊಂದು ಮಹಾ ಸಾಧನೆಯೇ. ●

# ಬ್ಯಾಂಕಿಂಗ್ ನಿಘಂಟು

ಬ್ಯಾಂಕಿಂಗ್ ಪ್ರಪಂಚದ ಹಿಂದಿನ ಸಂಚಿಕೆಗಳನ್ನು ನೋಡಿರುವವರ ಗಮನ ಆ ಸಂಚಿಕೆಗಳ ಕೊನೆಯ ಪುಟಗಳತ್ತ ಹರಿದಿರಲೇಬೇಕು. ಸಾಮಾನ್ಯವಾಗಿ ಆ ಪುಟಗಳಲ್ಲಿ ಬ್ಯಾಂಕಿಂಗ್ ಪದಕೋಶವನ್ನು ಧಾರಾವಾಹಿಯಾಗಿ ಪ್ರಕಟಿಸಲಾಗುತ್ತಿತ್ತು. ಇಂಗ್ಲಿಷ್ 'ಎ'ಯಿಂದ 'ಜೆಡ್' ವರೆಗಿನ ಅಕ್ಷರಗಳಿಂದ ಆರಂಭವಾಗುವ—ಬ್ಯಾಂಕಿಂಗ್, ಹಣಕಾಸು ಹಾಗೂ ತತ್ಸಂಬಂಧಿ ಕ್ಷೇತ್ರಗಳಲ್ಲಿ ಬಳಕೆಯಲ್ಲಿರುವ—ನಾನಾ ಇಂಗ್ಲಿಷ್ ಪದಗಳಿಗೆ ಸಂವಾದಿಯಾದ ಕನ್ನಡ ಪದಗಳನ್ನೂ ಆ ಪದಗಳ ವ್ಯಾಖ್ಯೆ, ಅರ್ಥವಿವರಣೆ, ಕಾನೂನಿನ ಹಾಗೂ ಆಚರಣೆಯ ಹಿನ್ನೆಲೆ ಮುಂತಾದುವನ್ನೂ ನೀಡಲಾಗುತ್ತಿತ್ತು.

ಸಮನ್ವಯ ಸಮಿತಿ ಇದೀಗ ಬ್ಯಾಂಕಿಂಗ್ ನಿಘಂಟನ್ನು ಪ್ರತ್ಯೇಕ ಪುಸ್ತಕವಾಗಿ ಪ್ರಕಟಿಸಿದೆ. ಎರಡು ಸಾವಿರದ ಆರನೂರಕ್ಕೂ ಹೆಚ್ಚು ಪದಗಳಿರುವ ಈ ನಿಘಂಟು ಒಂದು ರೀತಿಯಲ್ಲಿ ಬ್ಯಾಂಕಿಂಗ್ ವಿಶ್ವಕೋಶವೆನ್ನಬಹುದು. ಇವುಗಳ ಜೊತೆಗೆ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಬಳಕೆಯಲ್ಲಿರುವ ನಾನಾ ಸಂಕೇತಾಕ್ಷರಗಳ ವಿಸ್ತೃತರೂಪಗಳನ್ನೂ ಅವುಗಳ ಕನ್ನಡ ಅನುವಾದಗಳನ್ನೂ ಒಳಗೊಂಡಿರುವ ಈ ಪುಸ್ತಕವನ್ನು ಕಳೆದ ಆಗಸ್ಟ್ 19ರಂದು ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಕರ್ನಾಟಕದ ಮುಖ್ಯ ಮಂತ್ರಿಗಳಾದ ಶ್ರೀ ರಾಮಕೃಷ್ಣ ಹೆಗಡೆ ಅವರು ಬಿಡುಗಡೆ ಮಾಡಿದರು. ಈ ಸಂದರ್ಭದಲ್ಲಿ ಹೊರತರಲಾದ, ಸಮನ್ವಯ ಸಮಿತಿಯ ಅನಿಯತಕಾಲಿಕವಾದ 'ಸಂವಹನ'ದ ವಿಶೇಷ ಸಂಚಿಕೆಯನ್ನು ಬಿಡುಗಡೆ ಮಾಡಿದವರು ಸಾರಿಗೆ ಮತ್ತು ವಸತಿ ರಾಜ್ಯ ಸಚಿವರಾದ ಶ್ರೀ ಪಿ. ಜಿ. ಆರ್. ಸಿಂಧ್ಯ. ಭಾರತೀಯ ಸ್ಟೇಟ್ ಬ್ಯಾಂಕಿನ ಬೆಂಗಳೂರು ವೃತ್ತದ ಮುಖ್ಯ ಪ್ರಧಾನ ವ್ಯವಸ್ಥಾಪಕರಾದ ಶ್ರೀ ಎ. ವಿ. ಸುಬ್ರಹ್ಮಣ್ಯಂ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ವರ್ಣಮಯ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಪ್ರಧಾನ ವ್ಯವಸ್ಥಾಪಕರಲ್ಲೊಬ್ಬರಾದ ಶ್ರೀ ಎಂ. ನವರತ್ನರಾಜು ಅವರೂ ಭಾರತೀಯ ಸ್ಟೇಟ್ ಬ್ಯಾಂಕಿನ ಸ್ಥಳೀಯ ಸಲಹಾ ಮಂಡಲಿಯ ಸದಸ್ಯರಾದ ಶ್ರೀ ಕೆ. ಪಿ. ರಾವ್ ಅವರೂ ಆಗಮಿಸಿದ್ದರು.

ಬ್ಯಾಂಕುಗಳಲ್ಲಿ ಕನ್ನಡ ಬಳಸಲು ಅಗತ್ಯವಾದ ಅಧೋರಚನೆಯ ನಿರ್ಮಾಣಕಾರ್ಯದಲ್ಲಿ ಬ್ಯಾಂಕಿಂಗ್ ನಿಘಂಟು ಮೊದಲನೆಯ ಹೆಜ್ಜೆ. ಇದಕ್ಕೆ ಕನ್ನಡಿಗರು ನೀಡಿರುವ ಬೆಂಬಲ ಅಸಾಧಾರಣವಾದ್ದು. ಪ್ರಕಟನೆಗೆ ಪೂರ್ವದಲ್ಲಿಯೇ ಇದರ ಬಹುತೇಕ ಪ್ರತಿಗಳು ಮಾರಾಟವಾದುವೆಂಬುದು ತುಂಬ ಅಭಿಮಾನದ ಸಂಗತಿ. ಸರ್ಕಾರ, ಬ್ಯಾಂಕ್ ವ್ಯವಸ್ಥಾಪಕ ವರ್ಗ ಹಾಗೂ ಉದ್ಯೋಗಿಗಳ ಪ್ರತಿನಿಧಿಗಳಿಂದ ಕೂಡಿದ್ದ ಈ ಸಮಾರಂಭದಲ್ಲಿ ಈ ಕಾರ್ಯದ ಬಗ್ಗೆ ವ್ಯಕ್ತವಾದ ಅಭಿಪ್ರಾಯಗಳು ನಮಗೆ ಉತ್ತೇಜನ ನೀಡುವಂಥವು. ಬ್ಯಾಂಕುಗಳಲ್ಲಿ ಕನ್ನಡವನ್ನು ಬಳಸುವ ಬಗ್ಗೆ ಇರುವ ಕಾಲ್ತೊಡಕುಗಳ ನಿವಾರಣೆಯ ದಿನಗಳು ಬಹು ದೂರವಿಲ್ಲ ಎಂಬುದನ್ನು ಇವು ಸೂಚಿಸುತ್ತವೆ. ಬ್ಯಾಂಕುಗಳಲ್ಲಿ ಕನ್ನಡದ ಬಳಕೆ ಅನಿವಾರ್ಯ, ಅಗತ್ಯ ಎಂಬುದು ಈಗಲಾದರೂ ಮೇಲ್ಪಟ್ಟವರಿಗೆ ಮನವರಿಕೆಯಾದೀತೆಂದೂ ಈ ನಿಟ್ಟಿನಲ್ಲಿ ಯುಕ್ತವಾದ ಕ್ರಮ ತೆಗೆದುಕೊಳ್ಳಲು ಅವರಾಗಿಯೇ ಮುಂದೆ ಬಂದಾರೆಂದೂ ನಾವು ಆಶಿಸುತ್ತೇವೆ. ಇದು ಬರೀ ಆಕಾಶಕುಸುಮವಾಗದಿರಲಿ. ●

# ಕಾನೂನಿನ ದೃಷ್ಟಿಯಲ್ಲಿ ಪಾಸ್ ಪುಸ್ತಕಗಳ ನಮೂದುಗಳು

ಕೆ. ಎಸ್. ಮಹಾಬಲ

ಬ್ಯಾಂಕರನಿಂದ ಗ್ರಾಹಕನತ್ತ, ಗ್ರಾಹಕನಿಂದ ಬ್ಯಾಂಕರನತ್ತ ಪಾಸ್ ಆಗುತ್ತಾ, ಖಾತೆಯ ವಸ್ತುಸ್ಥಿತಿಯ ವಿವರಣೆಯನ್ನು ನೀಡುತ್ತಾ, ಪಾಸ್ ಪುಸ್ತಕ ಬ್ಯಾಂಕರ್-ಗ್ರಾಹಕ ಸಂಬಂಧದಲ್ಲಿ ಮಹತ್ತರವಾದ ಪಾತ್ರವೊಂದನ್ನು ವಹಿಸುತ್ತಿದೆ. ಬ್ಯಾಂಕರ್ ಖಾತೆದಾರನಲ್ಲದ ಮೂರನೆಯ ವ್ಯಕ್ತಿಯೊಬ್ಬನಿಗೆ ಹಣ ಪಾವತಿ ಮಾಡುವುದಿದ್ದರೆ ಪಾಸ್ ಪುಸ್ತಕ ಜತೆಗಿದ್ದರೆ ಕೆಲಸ ಸುಲಭ. ಇನ್ನೂ ಹಲವಾರು ಸಂದರ್ಭಗಳಲ್ಲಿ ಕೂಡ ಪಾಸ್ ಪುಸ್ತಕ ಉಪಯುಕ್ತವಾಗಿ ಕಂಡು ಬರುತ್ತದೆ. ಅಮೆರಿಕಾದ ಬ್ಯಾಂಕುಗಳಲ್ಲಿ ಪಾಸ್ ಪುಸ್ತಕವನ್ನು ಒತ್ತೆಯನ್ನಾಗಿ ಇಟ್ಟುಕೊಂಡು, ಸಾಲ ನೀಡುವ ಪರಿಪಾಠವೂ ಇದೆ ಯೆಂದು ತಿಳಿದುಬಂದಿದೆ.

ಪಾಸ್ ಪುಸ್ತಕದ ನಮೂದುಗಳನ್ನು ಖಾತೆಯ ಸ್ಥಿತಿಯ ತದ್ವತ್ ನಕಲೆಂದು ನ್ಯಾಯಾಲಯಗಳು ಮಾನ್ಯಮಾಡುತ್ತಿವೆ. ಪಾಸ್ ಪುಸ್ತಕ ನಮೂದುಗಳ ಸಂಬಂಧದಲ್ಲಿ ನಿರ್ದಿಷ್ಟವಾದ ಕಾನೂನೊಂದು ಇಲ್ಲದಿರುವುದು ಇಂತಹ ವಿವೇಚನೆಗೆ ಕಾರಣವಾಗಿದೆ. ಹೀಗಿರುವಾಗ ಬ್ಯಾಂಕಿಂಗ್ ಇತಿಹಾಸವನ್ನು ನಾವು ತಿರುವಿ ಹಾಕಿದಾಗ ಪಾಸ್ ಪುಸ್ತಕ ನಮೂದುಗಳ ಸತ್ಯಾಸತ್ಯತೆಯನ್ನು ಪ್ರಶ್ನಿಸಿರುವ ಪ್ರಸಂಗ ಗಳನ್ನು ಕಾಣಲು ಸಾಧ್ಯ. ಈ ಪ್ರಕರಣಗಳ ತೀರ್ಪುಗಳೇ ಈ ಸಂಬಂಧದ ಮುಂದಿನ ಎಲ್ಲಾ ಪ್ರಕರಣವನ್ನು, ಹಾದಿಯನ್ನು ನಿರ್ದೇಶಿಸುವ ಸೂತ್ರಗಳಾಗಿವೆ. ಬ್ಯಾಂಕರ್ ಮತ್ತು ಗ್ರಾಹಕ ಇಬ್ಬರನ್ನೂ ಹಲವಾರು ರೀತಿಯ ನಷ್ಟ-ಪೇಚುಗಳಿಗೆ ಈಡು ಮಾಡಿರುವ ಪಾಸ್ ಪುಸ್ತಕದ ನಮೂದುಗಳನ್ನು ಪರಿಶೀಲನೆಯ ಒರೆಗಲ್ಲಿಗೆ ಹಚ್ಚುವುದು ಅಗತ್ಯವಾಗಿದೆ.

### ಪಾಸ್ ಪುಸ್ತಕ ನಮೂದುಗಳ ಔಚಿತ್ಯ

ಸರ್ ಜಾನ್ ಪೇಜೆಟ್‌ರವರ ಅಭಿಪ್ರಾಯದಲ್ಲಿ ಕಾನೂನಿನ ದೃಷ್ಟಿ ಯಿಂದ ಪಾಸ್ ಪುಸ್ತಕದ ಸ್ಥಿತಿ ಅತೃಪ್ತಿಕರವಾದುದಾಗಿದೆ. ಬ್ಯಾಂಕರ್ ಅಥವಾ ಗ್ರಾಹಕ ಇಬ್ಬರಿಂದಲೂ ಸಂಭವಿಸಬಹುದಾದ ನಿರ್ಲಕ್ಷ್ಯ ಅಥವಾ ಅನಾದರದ ಪ್ರಕರಣಗಳನ್ನು ಬಿಟ್ಟರೆ ಉಳಿದಂತೆ ಪಾಸ್ ಪುಸ್ತಕದ ನಿಜವಾದ ಕರ್ತವ್ಯವೆಂದರೆ, ಅಖೈರಾದ ಮತ್ತು ಪ್ರಶ್ನಾತೀತವಾದ ವ್ಯವಹಾರದ ದಾಖಲೆಗಳನ್ನು ಮಾಡುವುದು— ಎಂಬುದು ಅವರ ಅಭಿಪ್ರಾಯ. ಪೂರ್ಣವಾದ ಪರಿಶೀಲನೆಯ ಅನಂತರ ಎಲ್ಲಾ ವ್ಯವಹಾರಗಳೂ, ಕಡೆಯ ಪಕ್ಷ ಖುಣಿಕೆ ನಮೂದು ಗಳು, ನಿಸ್ಸಂದಿಗ್ಧವಾದುವಾಗಿರಬೇಕು ಮತ್ತು ಮುಂದೊಮ್ಮೆ ಪೂರ್ಣ ಪರಿಶೀಲನೆಗೆ ಬಾಧ್ಯವಾಗದ್ದಾಗಿರಬೇಕು.

ಈ ಮಾತನ್ನು ಮತ್ತಷ್ಟು ವಿವರಿಸುವುದಾದರೆ, ಸಾಮಾನ್ಯವಾಗಿ ಪಾಸ್ ಪುಸ್ತಕದ ಎಲ್ಲಾ ನಮೂದುಗಳೂ ಮೇಲ್ನೋಟಕ್ಕೆ ಬ್ಯಾಂಕರನಿಗೆ ವಿರುದ್ಧವಾದ ಸಾಕ್ಷ್ಯಗಳು. ಒಂದು ವೇಳೆ ಗ್ರಾಹಕ ಆ ನಮೂದುಗಳನ್ನು ಆಧರಿಸಿ, ದುರುದ್ದೇಶವಿಲ್ಲದೆ ತನ್ನ ಖಾತೆಯ ಸ್ಥಿತಿ ಬದಲಿಸಿದನೆಂದರೆ, ಬ್ಯಾಂಕರ ಮುಂದೆ ಅಂತಹ ನಮೂದು ಗಳನ್ನು ನಿರಾಕರಿಸಲು ಸಾಧ್ಯವಿಲ್ಲ. ಆದರೆ ಈ ವಿಷಯದಲ್ಲಿ ಆಚ ರಣೆ ಎಲ್ಲೆಡೆ ಏಕರೂಪವಾಗಿಲ್ಲ. ಅಮೆರಿಕಾದಲ್ಲಿ ಪಾಸ್ ಪುಸ್ತಕದ ನಮೂದುಗಳನ್ನು ಪರಿಶೀಲಿಸುವುದು ಗ್ರಾಹಕನ ಸಂಪೂರ್ಣ ಜವಾ ಬ್ದಾರಿಯೆಂದು ಹಲವಾರು ನ್ಯಾಯತೀರ್ಪುಗಳಲ್ಲಿ ಸ್ಪಷ್ಟಗೊಳಿಸಲಾ ಗಿದೆ. ಮೋರ್ಗನ್ ವಿರುದ್ಧ ಡಬ್ಲ್ಯೂ. ಎಸ್. ಮಾರ್ಟ್‌ಗೇಜ್ ಟ್ರಸ್ಟ್ ಕಂಪನಿ ಪ್ರಕರಣದಲ್ಲಿ ಗ್ರಾಹಕ ಬ್ಯಾಂಕಿನಿಂದ ಪ್ರಮಾಣಿತ ಚೀಟಿ (ವೋಚರ್)ಗಳನ್ನೂ, ಪಾಸ್ ಪುಸ್ತಕವನ್ನೂ ಪಡೆದ ನಂತರ ಪರಿಶೀಲಿಸಲು ವಿಫಲನಾದಲ್ಲಿ ಅದನ್ನು 'ನಿರ್ಲಕ್ಷ್ಯದ ನಡೆ' ಎಂದು ಭಾವಿಸಿ ತೀರ್ಪು ನೀಡಲಾಯಿತು. ಇಲ್ಲಿ ನಿರ್ಲಕ್ಷ್ಯದ ನಡೆಯ ವಿವರಣೆ ಯೆಂದರೆ, ಸಾಮಾನ್ಯ ವ್ಯವಹಾರ ಆಚರಣೆಗಳು ಮತ್ತು ಬ್ಯಾಂಕಿ ನೊಡನೆ ನ್ಯಾಯೋಚಿತ ವ್ಯವಹಾರದನ್ವಯ ನಿರೂಪಿತವಾದ ನಿರ್ದೇಶಗಳಂತೆ ನಡೆದುಕೊಳ್ಳದಿದ್ದಲ್ಲಿ ಸಂಭವಿಸುವ ತಪ್ಪುನಡತೆ ಗಳನ್ನು ತಡೆಗಟ್ಟಲು ವಿಫಲನಾಗಿರುವುದು.

ಆದರೆ ಭಾರತ ಹಾಗೂ ಬ್ರಿಟನ್ ದೇಶಗಳಲ್ಲಿ ಇಂತಹ ನಿಖರ ವಾದ ಪರಿಸ್ಥಿತಿ ಇಲ್ಲ. ಬ್ಯಾಂಕುಗಳು ಗ್ರಾಹಕನೊಡನೆ ಪಾಸ್ ಪುಸ್ತಕದ ನಮೂದುಗಳನ್ನು ಕುರಿತಂತೆ ನಿಶ್ಚಿತವಾದ ಒಪ್ಪಂದ ಮಾಡಿಕೊಂಡಿ ರುವ ಪ್ರಕರಣಗಳ ಹೊರತು ಉಳಿದಂತೆ ಪಾಸ್ ಪುಸ್ತಕವನ್ನು ಒಡ್ಡದ ಗ್ರಾಹಕನ ಕ್ರಮ 'ನಿರ್ಲಕ್ಷ ದ ನಡೆ' ಎನ್ನಿಸಿಕೊಳ್ಳುವುದಿಲ್ಲ.

### ಗ್ರಾಹಕನ ಮೌನ

ಪಾಸ್ ಪುಸ್ತಕದ ನಮೂದುಗಳ ವಿಷಯದಲ್ಲಿ ಗ್ರಾಹಕ ಬ್ಯಾಂಕರ ನಿಗೆ ಏನನ್ನೂ ತಿಳಿಸದಿದ್ದರೆ, ಆ ನಮೂದುಗಳು ಸರಿಯಾದವು ಎಂದು ಭಾವಿಸಲಾಗುವುದು. ಈವಾಯ್ನೆಸ್ ವಿರುದ್ಧ ನೋಬಲ್ ಪ್ರಕರಣದಲ್ಲಿ ಈ ಅಂಶ ಸಾಬೀತಾಯಿತು. ಆದರೆ ಮುಂದೆ ದಾಗ್ಲಿಯಾನೇ ಸೋದರರ ವಿರುದ್ಧ ಬ್ಯಾಂಕ್ ಆಫ್ ಇಂಗ್ಲೆಂಡ್ ಪ್ರಕರಣದಲ್ಲಿ ತೀರ್ಪು ಬೇರೆ ರೀತಿಯಲ್ಲಿತ್ತು. ಈ ಪ್ರಕರಣದಲ್ಲಿ ವಾದಿಯು ಬ್ಯಾಂಕಿನಿಂದ ಕಾಲಕಾಲಕ್ಕೆ ಕೆಲವು ನಿರ್ದಿಷ್ಟ ಹುಂಡಿಗಳ ಸಂಬಂಧದಲ್ಲಿ ಖುಣಿಕೆ ನಮೂದುಗಳುಳ್ಳ ಪಾಸ್ ಪುಸ್ತಕವನ್ನೂ ಪ್ರಮಾಣಿತ ಚೀಟಿಗಳನ್ನೂ ಪಡೆಯುತ್ತಿದ್ದ. ಮುಂದೆ ಪ್ರಮಾಣಿತ ಚೀಟಿಗಳನ್ನು ತನ್ನಲ್ಲೇ ಇರಿಸಿಕೊಂಡು ಪಾಸ್ ಪುಸ್ತಕವನ್ನು ಮತ್ತೆ ನಮೂದಿಗಾಗಿ ಬ್ಯಾಂಕಿಗೆ ನೀಡುತ್ತಿದ್ದ. ಈ ಪ್ರಕರಣದಲ್ಲಿ ಬ್ಯಾಂಕು

* ಕೆ. ಎಸ್. ಮಹಾಬಲ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು

ವಾದಿಸುತ್ತಾ, ಪಾಸ್ ಪುಸ್ತಕದ ನಮೂದುಗಳು ಗ್ರಾಹಕನ ಖಾತೆಯ ಇತ್ಯರ್ಥವಾದ ವಿಷಯವೆಂದೂ, ಗ್ರಾಹಕ ಆ ನಮೂದುಗಳನ್ನು ಪರಿಶೀಲಿಸದೆ ಇದ್ದುದು ನಿರ್ಲಕ್ಷ್ಯದ ನಡೆಯೆಂದೂ ಪ್ರತಿಪಾದಿಸಿತು. ಆದಾಗ್ಯೂ ತೀರ್ಪು ಬ್ಯಾಂಕಿನ ಪಕ್ಷದಲ್ಲಿ ಇರಲಿಲ್ಲ. ಬ್ಯಾಂಕರ್ ಗ್ರಾಹಕರ ನಡುವೆ ಪಾಸ್ ಪುಸ್ತಕದ ವ್ಯವಹಾರದಿಂದ ಸೂಚಿತವಾದ ಒಪ್ಪಂದವೊಂದು ಸ್ಥಾಪಿತವಾಗುತ್ತದೆ ಎಂಬುದಕ್ಕಾಗಲಿ, ಬ್ಯಾಂಕರ್ ಮತ್ತು ಗ್ರಾಹಕನ ಸರ್ವೇಸಾಧಾರಣವಾದ ವ್ಯವಹಾರವನ್ನು ಗಮನಿಸಿದಾಗ, ನಿರ್ಲಕ್ಷದ ನಡೆ ಸಂಭವಿಸಿದೆ ಎಂದಾಗಲಿ ತೀರ್ಮಾನಿಸಲು ಯಾವ ಆಧಾರವೂ ಇಲ್ಲ ಎಂಬ ನಿರ್ಣಯಕ್ಕೆ ನ್ಯಾಯಾಲಯ ಬಂದಿತು. ಗ್ರಾಹಕ ನಮೂದಾದ ಪಾಸ್‌ಪುಸ್ತಕವನ್ನು ಪಡೆದ ಒಂದು ತಿಂಗಳೊಳಗೆ ತಪ್ಪು ನಮೂದನ್ನು ಬ್ಯಾಂಕಿನ ಗಮನಕ್ಕೆ ತರಬೇಕು ಎಂಬ ಷರತ್ತನ್ನು ವಿಧಿಸಬೇಕೆಂದು ವಾದಿಸಲಾಗುತ್ತಿದೆ. ಆದರೆ ತಪ್ಪು ನಮೂದು ಬ್ಯಾಂಕಿಗೆ ಪ್ರತಿಕೂಲವಾಗಿದ್ದು ಒಂದು ತಿಂಗಳೊಳಗೆ ಬ್ಯಾಂಕಿನ ಗಮನಕ್ಕೆ ಬರದೆ ಮುಂದೆಂದಾದರೂ ಬೆಳಕಿಗೆ ಬಂದರೆ ಸರಿಪಡಿಸಲಾಗದು ಎನ್ನಲಾದೀತೆ? ಎನ್ನುವ ಅಭಿಪ್ರಾಯಕ್ಕೆ ಈ ಪ್ರಕರಣ ದಾರಿ ಮಾಡುತ್ತದೆ.

## ಗ್ರಾಹಕನ ಕರ್ತವ್ಯವೇನು ?

ಪಾಸ್ ಪುಸ್ತಕದ ನಮೂದುಗಳ ವಿಷಯವಾಗಿ ಬ್ಯಾಂಕಿಗೆ ಗ್ರಾಹಕ ಯಾವುದೇ ರೀತಿಯ ಕರ್ತವ್ಯವನ್ನೂ ಹೊಂದಿಲ್ಲ. ಒಂದು ವೇಳೆ ಪಾಸ್ ಪುಸ್ತಕವನ್ನು ಪರಿಶೀಲಿಸಿದರೂ ತಪ್ಪು ನಮೂದುಗಳನ್ನು ಮುಂದೆ ಯಾವಾಗಲಾದರೂ ಬ್ಯಾಂಕಿನ ಗಮನಕ್ಕೆ ತಂದು ಸರಿಪಡಿಸಿಕೊಳ್ಳಲು ಯಾವ ಅಡ್ಡಿಯೂ ಇಲ್ಲ ಎಂಬ ಅಭಿಪ್ರಾಯ ಚಾಟರ್‌ಟನ್ ವಿರುದ್ಧ ಲಂಡನ್ ಕೌಂಟಿ ಬ್ಯಾಂಕ್ ಪ್ರಕರಣದಲ್ಲಿ ವ್ಯಕ್ತವಾಯಿತು. ಚಾಟರ್‌ಟನ್ ಅವರು ವಾರಕ್ಕೊಮ್ಮೆ ಬ್ಯಾಂಕ್‌ನಿಂದ ನಮೂದಾದ ಪಾಸ್ ಪುಸ್ತಕವನ್ನು ಪಡೆಯುತ್ತಿದ್ದರು. ಖಾತೆಯಿಂದ ನಮೂದನ್ನು ಓದುತ್ತಿದ್ದ ಗುಮಾಸ್ತ ನೋಡ್‌ನ ಸಹಾಯದಿಂದ ಪಾಸ್ ಪುಸ್ತಕದ ನಮೂದುಗಳನ್ನು ಪರಿಶೀಲಿಸುತ್ತಿದ್ದರು. ಸ್ವಲ್ಪ ಕಾಲದ ನಂತರ ಚಾಟರ್‌ಟನ್‌ರವರು ಬ್ಯಾಂಕು ಪಾವತಿಮಾಡಿದೆಯೆನ್ನಲಾದ ಇಪ್ಪತ್ತೈದು ಚೆಕ್‌ಗಳು ಸೃಷ್ಟನೆ (ಫೋರ್ಜರಿ)ಗೆ ಒಳಗಾದವು ಎಂದೂ ಬ್ಯಾಂಕ್ ಹಾಗೆ ಪಾವತಿ ಮಾಡಿರುವ ಚೆಕ್‌ಗಳ ಮೊತ್ತವನ್ನು ಹಿಂತಿರುಗಿಸಬೇಕೆಂದೂ ದಾವಾ ಹೂಡಿದರು. ಆ ಇಪ್ಪತ್ತೈದು ಚೆಕ್‌ಗಳು ಒಂದು ವೇಳೆ ಸೃಷ್ಟನೆಯ ಪ್ರಕರಣವಾಗಿದ್ದರೆ, ವಾದಿ ಪಾಸ್ ಪುಸ್ತಕವನ್ನು ಪರಿಶೀಲಿಸಿ, ತಪ್ಪನ್ನು ಬ್ಯಾಂಕಿನ ಗಮನಕ್ಕೆ ತರದೆ ತಪ್ಪುದಾರಿಗೆ ಎಳೆದಿದ್ದಾರೆ ಎಂದು ಬ್ಯಾಂಕು ವಾದಿಸಿತು. ನ್ಯಾಯಾಧೀಶ ಮ್ಯಾಥ್ಯೂರವರು ತಮ್ಮ ತೀರ್ಪಿನಲ್ಲಿ ಪಾಸ್ ಪುಸ್ತಕ ಮತ್ತು ಪ್ರತಿ ಹಾಳೆ (ಕೌಂಟರ್‌ಫಾಯಿಲ್)ಗಳನ್ನು ತಾಳೆ ನೋಡುವುದು ಗ್ರಾಹಕನ ನಿತ್ಯದ ಪದ್ಧತಿಯಾಗಿತ್ತೇ? ಚಾಟರ್‌ಟನ್‌ರವರು ಪಾಸ್ ಪುಸ್ತಕವನ್ನು ತಾವೇ ಸ್ವತಃ ಪರಿಶೀಲಿಸದೆ ಗುಮಾಸ್ತ ನೋಡ್‌ನ ಸಹಾಯ ಪಡೆದುದು ನಿರ್ಲಕ್ಷ್ಯದ ನಡೆ ಎಂದು ಹೇಳಲಾದೀತೇ? ವಾದಿ ತನ್ನ ನಡವಳಿಕೆಯಿಂದ ಸೃಷ್ಟನೆಗೊಳಗಾಗಿದೆ ಎನ್ನಲಾಗಿರುವ ಆ ಇಪ್ಪತ್ತೈದು ಚೆಕ್‌ಗಳನ್ನು ಪಾವತಿ ಮಾಡಬಹುದು ಎಂಬ ಇಂಗಿತ ಕೊಟ್ಟರೇ? ಬ್ಯಾಂಕು ಆ ಚೆಕ್‌ಗಳನ್ನು ಪಾವತಿ ಮಾಡಿದಾಗ ಅಂತಹ ಭಾವನೆ ತಳೆದಿತ್ತೆ? ಬ್ಯಾಂಕಿನ ಸರಾಫರು (ಟೆಲ್ಲರ್) ಚೆಕ್ಕನ್ನು ಪಾವತಿ ಮಾಡಿದಾಗ ಏನನ್ನು ಪರಿಶೀಲಿಸಿದರು?—ಈ ಎಲ್ಲಾ ಪ್ರಶ್ನೆಗಳನ್ನೂ ಚರ್ಚಿಸುತ್ತಾ, ತನ್ನ ನಡವಳಿಕೆಯಿಂದ ಬ್ಯಾಂಕನ್ನು ತಪ್ಪುದಾರಿಗೆ ಎಳೆಯಲಿಲ್ಲ ಎಂಬ ವಾದಿಯ ಅಭಿಪ್ರಾಯವನ್ನು ಎತ್ತಿಹಿಡಿದರು.

ಇದೇ ಪ್ರಶ್ನೆ ಮತ್ತೊಂದು ಬಾರಿ ಚರ್ಚೆಗೆ ಬಂತು. ಕೆಪ್ಪಿಗಲ ರಬ್ಬರ್ ಕಂಪನಿ ವಿರುದ್ಧ ನ್ಯಾಷನಲ್ ಬ್ಯಾಂಕ್ ಆಫ್ ಇಂಡಿಯ ಪ್ರಕರಣದಲ್ಲಿ ಕಂಪನಿಯ ಕಾರ್ಯದರ್ಶಿ ಅಧಿಕೃತ ಸಹಿದಾರರ (ಕಂಪನಿಯ ನಿರ್ದೇಶಕರು) ಸಹಿಯನ್ನು ಸೃಷ್ಟನೆ ಮಾಡಿದರು. ಕಂಪನಿ ಪಾಸ್ ಪುಸ್ತಕ ಹಾಗೂ ನಗದು ಪುಸ್ತಕ ಇವೆರಡನ್ನೂ ತಾಳೆ ನೋಡುವುದರ ಮೂಲಕ ವಂಚನೆಯನ್ನು ಪತ್ತೆಹಚ್ಚಬಹುದಿತ್ತೆಂದೂ ಮತ್ತು ಈ ನಿರ್ಲಕ್ಷ್ಯದ ನಡೆಯಿಂದ ಅದು ಬ್ಯಾಂಕು ಪಾವತಿ ಮಾಡಲಾಗಿದೆ ಎನ್ನಲಾದ ಚೆಕ್‌ಗಳ ಸಿಂಧುತ್ವವನ್ನು ಪ್ರಶ್ನಿಸುವ ಅರ್ಹತೆಯನ್ನು ಕಳೆದುಕೊಂಡಿದೆಯೆಂದೂ ಹೇಳಿದ ಬ್ಯಾಂಕಿನ ವಾದವನ್ನು ನ್ಯಾಯಾಲಯ ಒಪ್ಪಿಕೊಳ್ಳಲಿಲ್ಲ. ಅಷ್ಟೇ ಅಲ್ಲದೆ ವಂಚನೆಗೇ ಆಸ್ಪದವಿಲ್ಲದಂತಹ ಲೆಕ್ಕಪದ್ಧತಿಯನ್ನು ಹೊಂದಲು ಕಂಪನಿ ಬ್ಯಾಂಕಿಗೆ ಯಾವುದೇ ರೀತಿಯ ಜವಾಬ್ದಾರಿಯನ್ನೂ ಹೊಂದಿಲ್ಲವೆಂದು ನ್ಯಾಯಾಧೀಶ ಬೇ ಅವರು ತೀರ್ಪು ನೀಡಿದರು. ಪಾಸ್ ಪುಸ್ತಕವನ್ನು ಬ್ಯಾಂಕಿನಿಂದ ಪಡೆದೊಡನೆಯೇ ಬ್ಯಾಂಕಿನೊಡನೆ ಗ್ರಾಹಕನ ಲೆಕ್ಕ ಇತ್ಯರ್ಥವಾಯಿತು ಎನ್ನುವುದು ಎಷ್ಟು ಹಾಸ್ಯಾಸ್ಪದ! ಒಂದು ವೇಳೆ ಕಂಪನಿಯ ಕಾರ್ಯದರ್ಶಿ ವಂಚನೆಯನ್ನು ಮುಚ್ಚಿಹಾಕುವ ಸ್ವಾರ್ಥೋದ್ದೇಶದಿಂದ ನಿರ್ದೇಶಕ ಮಂಡಳಿಯ ಯಾರೊಬ್ಬರಿಗೂ ತಿಳಿಸದೆ ಬ್ಯಾಂಕಿಗೆ ಬರುವುದರ ಮೂಲಕ ಕಂಪನಿಯನ್ನು ಎಲ್ಲಾ ಕಾರಣಕ್ಕಾಗಿಯೂ ಹೊಣೆಗಾರನನ್ನಾಗಿ ಮಾಡಲಾದೀತೇ? ಎಂದೂ ಅವರು ತಮ್ಮ ತೀರ್ಪಿನಲ್ಲಿ ಪ್ರಶ್ನಿಸಿದರು.

ಇದೇ ರೀತಿ ಮತ್ತೊಂದು ಪ್ರಕರಣದಲ್ಲಿನ ತೀರ್ಪು ಪಾಸ್ ಪುಸ್ತಕದ ಅಖೈರುತನವನ್ನೂ ಪ್ರಶ್ನಾತೀತ ಗುಣವನ್ನೂ ಬದಿಗೊತ್ತಿತು. ಬ್ರೂವರ್ ವಿರುದ್ಧ ವೆಸ್ಟ್‌ಮಿನಿಸ್ಟರ್ ಬ್ಯಾಂಕ್ ಪ್ರಕರಣದಲ್ಲಿ ಬ್ಯಾಂಕ್ ಕಾಲಕಾಲಕ್ಕೆ ಲೆಕ್ಕತಃಖ್ತೆಯೊಂದನ್ನು ಗ್ರಾಹಕನಿಗೆ ಕಳುಹಿಸುತ್ತಿತ್ತು. ಆದರೆ ಗ್ರಾಹಕ ಆ ಲೆಕ್ಕತಃಖ್ತೆಯನ್ನು ಗಮನಿಸುತ್ತಲೇ ಇರಲಿಲ್ಲ. ಹೀಗಿರುವಾಗ ಪಾಸ್ ಪುಸ್ತಕ ಅಥವಾ ಲೆಕ್ಕ ತಃಖ್ತೆಯನ್ನು ಇತ್ಯರ್ಥವಾದ ಲೆಕ್ಕ ಎಂದು ಭಾವಿಸಲಾಗದು ಎಂಬ ತೀರ್ಪು ಹೊರಬಿತ್ತು.

ಈ ಎಲ್ಲ ಪ್ರಸಂಗಗಳಿಂದ ಒಂದು ಅಂಶವಂತೂ ಸ್ಪಷ್ಟಗೊಳ್ಳುತ್ತದೆ. ಗ್ರಾಹಕ ಹಾಗೂ ಬ್ಯಾಂಕರ್ ನಡುವಣ ನಿಖರವಾದ ಒಪ್ಪಂದವಿದ್ದ ಪ್ರಕರಣಗಳ ವಿನಾ ಉಳಿದಂತೆ ಪಾಸ್ ಪುಸ್ತಕದ ನಮೂದುಗಳನ್ನು ಇತ್ಯರ್ಥವಾದ ಲೆಕ್ಕವೆಂದು ಭಾವಿಸಲಾಗದು.

## ಗ್ರಾಹಕನಿಗೆ ಅನುಕೂಲಕರವಾದ ನಮೂದುಗಳು

ಗ್ರಾಹಕನ ಲೆಕ್ಕದಲ್ಲಿ ಒಂದು ನಮೂದು ತಪ್ಪಾಗಿರಬಹುದು. ಆ ತಪ್ಪು/ಗ್ರಾಹಕನಿಗೆ ಅನುಕೂಲಕರವಾಗಿದ್ದರೆ, ಅದನ್ನು ಬ್ಯಾಂಕರನಿಗೆ 'ದೋಷಪೂರ್ಣ' ಎಂದು ಸಾಬೀತುಗೊಳಿಸಲು ಅಧಿಕಾರವಿದೆ. ಮೇಲ್ನೋಟಕ್ಕೆ ಅವು ಬ್ಯಾಂಕರನಿಗೆ ವಿರುದ್ಧವಾದ ಸಾಕ್ಷ್ಯಗಳು, ಅಂತಹ ನಮೂದುಗಳು ರೂಪಿತವಾದ ರೀತಿಯನ್ನು ವಿವರಿಸಿ, ಸರಿಪಡಿಸಬೇಕಾಗುತ್ತದೆ. ಏಕಪಕ್ಷೀಯವಾಗಿ ಅಲ್ಲ. ಅಂದರೆ ಗ್ರಾಹಕನು ಸದ್‌ಭಾವನೆಯಿಂದ ಆ ನಮೂದುಗಳನ್ನು ಆಧರಿಸಿ ತನ್ನ ಖಾತೆಯ ಸ್ಥಿತಿಯನ್ನು ಬದಲಿಸಲು ಸಾಧ್ಯವಿದೆ. ಹಾಲೆಂಡ್ ವಿರುದ್ಧ

ವಮ್ಯಾಂಚೆಸ್ಟರ್ ಮತ್ತು ಜಿಲ್ಲಾ ಬ್ಯಾಂಕಿಂಗ್ ಕಂಪನಿ ಪ್ರಕರಣ ಈ ಅಂಶವನ್ನು ವಿವರಿಸುತ್ತದೆ. ಹತ್ತು ಪೌಂಡ್ ಹನ್ನೆರಡು ಷಿಲಿಂಗ್‌ಗಳ ಧನಿಕೆಯೊಂದನ್ನು ಎರಡು ಬಾರಿ ಪಾಸ್‌ಪುಸ್ತಕದಲ್ಲಿ ನಮೂದಿಸಲಾಗಿತ್ತು. ಗ್ರಾಹಕ ಪಾಸ್ ಪುಸ್ತಕದ ಕಡೆಯ ಶಿಲ್ಕನ್ನು ಆಧರಿಸಿ, ಚೆಕ್ ಬರೆದು ಬೇರೊಬ್ಬರಿಗೆ ನೀಡಿದ. ಈ ನಡುವೆ ಬ್ಯಾಂಕು ತಪ್ಪು ನಮೂದನ್ನು ಸರಿಪಡಿಸಿದ್ದರಿಂದ, ಚೆಕ್ ಪಾವತಿಯಾಗದೆ ವಾಪಸಾಯಿತು. ಗ್ರಾಹಕ ಬ್ಯಾಂಕಿನ ಮೇಲೆ ನಷ್ಟಕ್ಕಾಗಿ ದಾವಾ ಹೂಡಿ ಗೆದ್ದ. ಕೆಳ ನ್ಯಾಯಾಲಯದ ನ್ಯಾಯಾಧೀಶರಾದ ಅಲ್ವರ್‌ಸ್ಟನ್‌ರವರು ತಮ್ಮ ತೀರ್ಪಿನಲ್ಲಿ "ಬ್ಯಾಂಕರ ಅಂತಿಮವಾಗಿ ತಪ್ಪು ನಮೂದು ಸರಿಪಡಿಸುವ ಅಧಿಕಾರವನ್ನು ಹೊಂದಿದ್ದಾಗ್ಯೂ ಆ ರೀತಿ ತಿದ್ದುಪಡಿ ಮಾಡುವವರೆಗೆ, ವಂಚನೆಯ ಉದ್ದೇಶ ಹೊಂದಿರದ, ನಿರ್ಲಕ್ಷ್ಯದ ನಡೆಗೆ ಅನುವುಮಾಡಿಕೊಡದ ಗ್ರಾಹಕ ಪಾಸ್ ಪುಸ್ತಕದ ನಮೂದುಗಳನ್ನು ಆಧರಿಸಿ ವ್ಯವಹರಿಸಲು ಅರ್ಹನಾಗಿರುತ್ತಾನೆ ಎಂಬ ವಿಷಯವನ್ನು ವಿವರಿಸಿದರು.

ಆದರೆ ಇಂತಹ ಎಲ್ಲಾ ಪ್ರಕರಣಗಳಲ್ಲೂ ಇದೇ ರೀತಿಯ ತೀರ್ಪನ್ನುನಿರೀಕ್ಷಿಸುವುದು ತಪ್ಪಾಗುತ್ತದೆ. ಖಾತೆಯ ತಪ್ಪು ನಮೂದಿನ ದೋಷ ಕಾನೂನಿನ ದೋಷ ಆಗಿದ್ದರೆ (ಮಿಸ್ಟೇಕ್ ಆಫ್ ಲಾ) ತಿದ್ದುಪಡಿ ಮಾಡಲು ಸಾಧ್ಯವಿಲ್ಲ. ಆದರೆ ಅದೇ ವಸ್ತುಸ್ಥಿತಿಯ ದೋಷ (ಮಿಸ್ಟೇಕ್ ಆಫ್ ಫ್ಯಾಕ್ಟ್) ಆಗಿದ್ದರೆ ಬ್ಯಾಂಕರ ತಿದ್ದುಪಡಿ ಮಾಡಲು ಸಾಧ್ಯ. ಹೋಲ್ಟ್ ಮತ್ತು ಕಂಪನಿ ವಿರುದ್ಧ ಮಾರ್ಕ್‌ಹ್ಯಾಂ ಪ್ರಕರಣದಲ್ಲಿ ಸೈನ್ಯದ ಅಭಿಕರ್ತೃಗಳಾಗಿ ಪ್ರಚಾರ ಮಾಡುತ್ತಿದ್ದ ಹೋಲ್ಟ್ ಮತ್ತು ಕಂಪನಿ ಕರ್ನಲ್ ಮಾರ್ಕ್‌ಹ್ಯಾಂ ಅವರಿಗೆ ಒಮ್ಮೆ ಹೆಚ್ಚುವರಿ ಪಾವತಿ ಮಾಡಿತು. ಸೈನ್ಯದ ನಿಬಂಧನೆಗಳನ್ನು ತಪ್ಪಾಗಿ ಅರ್ಥೈಸಿದುದೇ ಇದಕ್ಕೆ ಕಾರಣವಾಗಿತ್ತು. ನ್ಯಾಯಾಲಯ ಇದನ್ನು ಕಾನೂನಿನ ದೋಷ ಎಂದು ಪರಿಗಣಿಸಿ ತೀರ್ಪು ನೀಡುತ್ತಾ ಹಣವನ್ನು ಮಾರ್ಕ್‌ಹ್ಯಾಂ ಅವರಿಂದ ಹಿಂತಿರುಗಿ ಪಡೆಯಲಾಗದೆ ಎಂಬ ಅಭಿಪ್ರಾಯಕ್ಕೆ ಬಂತು.

ಈ ಸ್ಥಿತಿಯನ್ನು ಲಾಯ್ಡ್ ಬ್ಯಾಂಕ್ ವಿರುದ್ಧ ಬ್ರೂಕ್ಸ್ ಪ್ರಕರಣ ಮತಷ್ಟು ಸ್ಥಿರಗೊಳಿಸಿತು. ಈ ಪ್ರಕರಣದಲ್ಲಿ ಪ್ರತಿವಾದಿಯ (ಗ್ರಾಹಕ) ಖಾತೆಗೆ ಹೆಚ್ಚು ಮೊತ್ತವೊಂದು ತಪ್ಪಾಗಿ ಧನಿಕೆಯಾಗಿತ್ತು ಮತ್ತು ಗ್ರಾಹಕ ಆ ಹಣವನ್ನು ವ್ಯಯಮಾಡಿದ್ದ. ನ್ಯಾಯಾಧೀಶ ಲಿನ್‌ಸ್ಕಿಯವರು ತಮ್ಮ ತೀರ್ಪಿನಲ್ಲಿ ಗ್ರಾಹಕರಿಗೆ ಖಾತೆಯ ಸ್ಥಿತಿಯನ್ನು ಕುರಿತಂತೆ ಸರಿಯಾದ ಮಾಹಿತಿ ನೀಡುವುದು ಬ್ಯಾಂಕರನ ಕರ್ತವ್ಯವೆಂದೂ ಯಾವುದೇ ಸಂದರ್ಭದಲ್ಲಿ ಹೆಚ್ಚು ಧನಿಕೆ ನಮೂದು ಹಾಕಿ ತನ್ಮೂಲಕ ಗ್ರಾಹಕರನ್ನು ಆ ತಪ್ಪು ಶಿಲ್ಕನ್ನು ಹಿಂಪಡೆಯಲು ಪ್ರಚೋದನೆ ಪಡೆಯದಂತೆ ಎಚ್ಚರ ವಹಿಸುವುದು ಬ್ಯಾಂಕರನ ಜವಾಬ್ದಾರಿಯೆಂದೂ ವಿವರಿಸಿದರು. ಈ ಪ್ರಕರಣದಲ್ಲಿ ಪ್ರತಿವಾದಿ ಖಾತೆಯ ಶಿಲ್ಕನ್ನು ಸದ್‌ಭಾವನೆಯಿಂದ ಖರ್ಚುಮಾಡಿದುದರಿಂದ ಜಯ ಸಿಕ್ಕಿತು ಎಂಬುದನ್ನು ಗಮನಿಸಬೇಕು. ಗ್ರಾಹಕನ ಸಾಚಾತನ ಪ್ರಶ್ನಾರ್ಹವಾದಂತಹ ಸಂದರ್ಭಗಳಲ್ಲಿ ತೀರ್ಮಾನ ಬೇರೆಯೇ ಆಗಿರುತ್ತಿತ್ತು ಎಂಬುದಂತೂ ನಿಜ. ವಾಣಿಜ್ಯ ಸಂಸ್ಥೆಯ ಗ್ರಾಹಕನೊಬ್ಬನೊಡನೆ ವ್ಯವಹರಿಸುವಾಗ ಬ್ಯಾಂಕರ್ ತಪ್ಪುನಮೂದು ಸರಿಪಡಿಸಲು ಸಾಧ್ಯವೇ ಎಂಬುದು ಇನ್ನೂ ಚರ್ಚೆಯ ವಿಷಯವಾಗಿದೆ. ಏಕೆಂದರೆ ಗ್ರಾಹಕನ ಸ್ವರೂಪವನ್ನೂ ಸಾಚಾತನವನ್ನೂ ಸಿದ್ಧಪಡಿಸುವುದು ಅಲ್ಲಿ ಬ್ಯಾಂಕರನಿಗೆ ಪ್ರಯಾಸಕರವಾದುದಾಗಿದೆ.

**ತಪ್ಪುನಮೂದು ಶಿಲ್ಕು-ಪಾವತಿ ನಿರಾಕರಣೆ**

ತಪ್ಪು ನಮೂದುಗಳಿರುವ ಪಾಸ್ ಪುಸ್ತಕವನ್ನು ಸ್ವೀಕರಿಸುವ ಮುಂಚೆ ಗ್ರಾಹಕ ಚೆಕ್ ನೀಡಿದ್ದು ಬ್ಯಾಂಕರ್ ಆ ನಡುವಣ ಅವಧಿಯಲ್ಲಿ ತಪ್ಪು ನಮೂದನ್ನು ಸರಿಪಡಿಸಿದ್ದರೆ, ಅಂತಹ ಚೆಕ್‌ಗಳ ಪಾವತಿಯನ್ನು ನಿರಾಕರಿಸಬಹುದು. ಸ್ಮಿತ್ ವಿರುದ್ಧ ಕಾಕ್ಸ್ ಮತ್ತು ಕಂಪನಿ ಈ ಅಂಶವನ್ನು ನಿರೂಪಿಸಿದೆ. ಅಲ್ಲದೆ ಒಂದು ತಪ್ಪು ನಮೂದಿನ ಅರಿವು ಗ್ರಾಹಕನಿಗೆ ಮೊದಲೇ ಇದ್ದಲ್ಲಿ ಬ್ಯಾಂಕರ್ ಖಾತೆಗೆ ತಿದ್ದುಪಡಿ ಮಾಡಬಹುದು. ಬ್ರಿಟಿಷ್ ಮತ್ತು ನಾರ್ತ್ ಯೂರೋಪಿಯನ್ ಬ್ಯಾಂಕ್ ವಿರುದ್ಧ ಜಾಲ್ಸ್‌ಸ್ಟೀನ್ ಪ್ರಕರಣದಲ್ಲಿ ಮೀರೆಳೆತ ಶಿಲ್ಕು (ಓವರ್‌ಡ್ರಾಫ್ಟ್ ಬ್ಯಾಲೆನ್ಸ್) ಇದ್ದ ಖಾತೆಯೊಂದರ ವಸ್ತುಸ್ಥಿತಿಯನ್ನು ತನ್ನ ಮೇಲಧಿಕಾರಿಗಳ ಮತ್ತು ಲೆಕ್ಕಪರಿಶೋಧಕರ ಕಣ್‌ತಪ್ಪಿಸುವ ದುರುದ್ದೇಶದಿಂದ ಬ್ಯಾಂಕ್ ವ್ಯವಸ್ಥಾಪಕನೊಬ್ಬ ಮತ್ತೊಂದು ಖಾತೆಯನ್ನು ಋಣಿಸಿ ಪ್ರತಿವಾದಿಯ ಖಾತೆಯನ್ನು ಧನಿಸಿದ. ಮುಂದೊಮ್ಮೆ ಈ ತಪ್ಪು ನಮೂದನ್ನು ಸರಿಪಡಿಸಿ, ಮೀರೆಳತದ ವ್ಯವಹಾರಕ್ಕಾಗಿ ಪ್ರತಿವಾದಿಯ ಮೇಲೆ ದಾವಾ ಹೂಡಲಾಯಿತು. ಧನಿಕೆ ನಮೂದನ್ನು ಆಧರಿಸಿ ಹಣ ಹಿಂಪಡೆಯಲು ತನಗೆ ಹಕ್ಕಿದೆಯೆಂದೂ ಅದೇ ಮೊತ್ತದ ಋಣಿಕೆ ನಮೂದನ್ನು ತಾನು ಗಮನಿಸಬೇಕಾಗಿಲ್ಲವೆಂದೂ ಪ್ರತಿವಾದಿ ವಾದಿಸಿದ. ಆತ ಎರಡೂ ನಮೂದುಗಳನ್ನು ಮಾಡುವ ವರೆಗೆ ಪಾಸ್ ಪುಸ್ತಕವನ್ನು ನೋಡಿರಲೂ ಇಲ್ಲ; ತಪ್ಪು ನಮೂದನ್ನು ಬ್ಯಾಂಕಿನ ಗಮನಕ್ಕೆ ತರಲೂ ಇಲ್ಲ.

ವಂಚನೆಯ ಉದ್ದೇಶದಿಂದ ಬ್ಯಾಂಕ್ ವ್ಯವಸ್ಥಾಪಕ ಸೃಷ್ಟಿಸಿದ ಕಾಲ್ಪನಿಕ ನಮೂದನ್ನು ಗ್ರಾಹಕ ಆಧರಿಸಲಾಗದು, ತನ್ನ ಖಾತೆಯ ಸ್ಥಿತಿಯನ್ನು ಬದಲಿಸಲಾಗದು ಎಂಬ ತೀರ್ಪು ಹೊರಬಿತ್ತು. ಒಂದು ವೇಳೆ ಗ್ರಾಹಕನಿಗೆ ಧನಿಕೆ ತಿಳಿವಳಿಕೆ (ಕ್ರೆಡಿಟ್ ಅಡ್ವೈಸ್) ನೀಡಿದ್ದಿದ್ದರೆ ಪ್ರಕರಣದ ಹಾದಿಯೇ ಬೇರೆಯಾಗುತ್ತಿತ್ತೇನೋ ?

**ಗ್ರಾಹಕನಿಗೆ ಪ್ರತಿಕೂಲಕರವಾದ ನಮೂದುಗಳು**

ಈ ವಿಷಯದಲ್ಲಿ ಕಾನೂನಿನ ಪರಿಸ್ಥಿತಿ ಅಸಮರ್ಪಕ ಹಾಗೂ ಅತೃಪ್ತಿಕರವಾದುದಾಗಿದೆ. ಬ್ಯಾಂಕಿನ ಪಾಸ್ ಪುಸ್ತಕವನ್ನು ಪರಿಶೀಲಿಸಿ ಲೆಕ್ಕ ಸರಿಯಾಗಿದೆ ಎಂಬ ಲಿಖಿತ ಉತ್ತರವನ್ನು ಬ್ಯಾಂಕಿಗೆ ನೀಡಬೇಕಾಗಿಲ್ಲ. ಚಾಟರ್‌ಟನ್ ವಿರುದ್ಧ ಲಂಡನ್ ಕೌಂಟಿ ಬ್ಯಾಂಕ್ ಮತ್ತು ಕೆಪ್ಪಿಗಲ ರಬ್ಬರ್ ಎಸ್ಟೇಟ್ ವಿರುದ್ಧ ನ್ಯಾಷನಲ್ ಬ್ಯಾಂಕ್ ಪ್ರಕರಣಗಳಲ್ಲಿ ಈ ವಿಷಯ ಸ್ಪಷ್ಟವಾಗಿದೆ. ಗ್ರಾಹಕ ತಪ್ಪು ನಮೂದನ್ನು ಸರಿಪಡಿಸಿಕೊಳ್ಳಲು ಕಾಲಮಿತಿಯೇನೂ ಇಲ್ಲ ಎಂಬುದಂತೂ ನಿಜ.

**ಲೆಕ್ಕತಃಖ್ತೆ**

ಗ್ರಾಹಕ ಮತ್ತು ಬ್ಯಾಂಕರ್ ನಡುವೆ ಪಾಸ್ ಆಗುವ ಪಾಸ್ ಪುಸ್ತಕದ ಜತೆ ಗ್ರಾಹಕರಿಗೆ ಒಂದು ನಿರ್ದಿಷ್ಟ ಅವಧಿಗೆ ಲೆಕ್ಕತಃಖ್ತೆಗಳನ್ನು ಕಳುಹಿಸುವ ಪರಿಪಾಠವೂ ಇಂದು ಬೆಳೆಯುತ್ತಿದೆ. ಖಾತೆ ನಮೂದು ಯಂತ್ರದ (ಲೆಜರ್ ಪೋಸ್ಟಿಂಗ್ ಮೆಷೀನ್) ಸಹಾಯದಿಂದ ಖಾತೆಯ ದೈನಂದಿನ ವ್ಯವಹಾರದ ನಕಲನ್ನು ಇಂದು ದೊಡ್ಡ ದೊಡ್ಡ ಗ್ರಾಹಕರಿಗೆ ನೀಡಲಾಗುತ್ತಿದೆ. ಪಾಸ್ ಪುಸ್ತಕದ ಮೂಲ ವಿವರಣೆಯೇ ಈ ಏಕಮುಖ ಸಂಚಾರದ ಲೆಕ್ಕತಃಖ್ತೆಗೂ ಅನ್ವಯವಾಗುವುದೇ ಎಂಬ ಪ್ರಶ್ನೆಗೆ ಸರ್ ಜಾನ್ ಪೇಜೆಟ್‌ರವರು

ಹೀಗೆ ಉತ್ತರಿಸಿದ್ದಾರೆ: "ಪಾಸ್ ಪುಸ್ತಕ ಮತ್ತು ಲೆಕ್ಕತಃಖ್ತೆಯಲ್ಲಿನ ಪ್ರಮುಖ ವ್ಯತ್ಯಾಸವೆಂದರೆ ಪಾಸ್ ಪುಸ್ತಕವನ್ನು ವಾಪಸು ಪಡೆಯುವ ಕ್ರಿಯೆ. ಅದನ್ನು ವಿಶೇಷ ಮಹತ್ವದ್ದು ಎಂದೇನೂ ಪರಿಗಣಿಸಲಾಗದು." ಪಾಸ್‌ಪುಸ್ತಕಕ್ಕೆ ಅನ್ವಯವಾಗುವ ಅಂಶಗಳೇ ಲೆಕ್ಕತಃಖ್ತೆಗೂ ಅನ್ವಯವಾಗುತ್ತವೆ ಎಂಬುದಂತೂ ಇದರಿಂದ ಸ್ಪಷ್ಟ.

### ಮುಕ್ತಾಯ

ಪಾಸ್ ಪುಸ್ತಕ ಇಂದು ವ್ಯಾಪಕವಾಗಿ ಬಳಕೆಯಾಗುತ್ತಿದೆ. ಕೃಷಿ ಸಾಲ, ಪಿ.ಪಿ.ಎಫ್. ವಂತಿಗೆ, ಆವರ್ತ ಠೇವಣಿ ಮುಂತಾದ ಖಾತೆಗಳಿಗೂ ಇಂದು ಪಾಸ್ ಪುಸ್ತಕವನ್ನು ನೀಡಲಾಗುತ್ತಿದೆ. ನಿರ್ದಿಷ್ಟವಾದ ಕಾನೂನಿನ ಬಲ ಇಲ್ಲದಿರುವುದರಿಂದ ಯಾವುದೇ ರೀತಿಯ ಕಟ್ಟುಪಾಡನ್ನೂ ವಿಧಿಸುವ ಪರಿಸ್ಥಿತಿ ಇಲ್ಲವಾಗಿದೆ. ಭಾರತೀಯ ಬ್ಯಾಂಕರರ ಸಂಸ್ಥೆಯಾಗಲಿ, ರಿಸರ್ವ್ ಬ್ಯಾಂಕ್ ಆಗಲಿ ಈ ಸಂಬಂಧದಲ್ಲಿ ನೀಡುವ ನಿಬಂಧನೆಗಳು ಕೇವಲ ಅನೌಪ ಚಾರಿಕವಾಗಿವೆ. ಹಿಂದಿನ ಪ್ರಕರಣಗಳ ತೀರ್ಪು ಮುಂದಿನ ಪ್ರಕರಣ ಗಳಿಗೆ ನಿಶ್ಚಿತವಾದ ಬುನಾದಿಯಾಗದಿರುವುದರಿಂದ ಪಾಸ್ ಪುಸ್ತಕ ನಮೂದುಗಳ ವಾಜ್ಯಗಳು ಹೆಚ್ಚಿವೆ. ಹೀಗಿರುವಾಗ ಬ್ಯಾಂಕರ್ ಮತ್ತು ಗ್ರಾಹಕ ಇಬ್ಬರೂ ಈ ಕೆಲವು ಸಾಮಾನ್ಯ ಕಟ್ಟುಪಾಡು ಗಳನ್ನು ಅನುಸರಿಸುವುದು ವಿಹಿತವಾಗಿದೆ:

1 ಬ್ಯಾಂಕರ್ ಪಾಸ್ ಪುಸ್ತಕದಲ್ಲಿ ನಮೂದು ಹಾಕಿ, ಅದನ್ನು ದೃಢೀಕರಿಸಿ, ಸಾಧ್ಯವಾದಷ್ಟೂ ಬೇಗ ಗ್ರಾಹಕನಿಗೆ ಹಿಂತಿರು ಗಿಸಬೇಕು. ತನ್ನಲ್ಲೇ ಅದನ್ನು ದೀರ್ಘಕಾಲ ಉಳಿಸಿಕೊಳ್ಳು ವುದರಿಂದ ಗ್ರಾಹಕನಿಗೆ ಪಾಸ್ ಪುಸ್ತಕವನ್ನು ಪರಿಶೀಲಿಸುವ ಅವಕಾಶವನ್ನು ತಪ್ಪಿಸಿದಂತಾಗುತ್ತದೆ.

2 ಪಾಸ್ ಪುಸ್ತಕ ಕಳೆದುಹೋದುದನ್ನು ಗ್ರಾಹಕ ಬ್ಯಾಂಕರನ ಗಮನಕ್ಕೆ ತಂದಾಗ, ಪೂರ್ಣ ಪರಿಶೀಲನೆ ನಡೆಸಿ, ದಂಡಶುಲ್ಕ ಪಡೆದು 'ನಕಲು' ಪಾಸ್ ಪುಸ್ತಕವನ್ನು ನೀಡಬೇಕು ಮತ್ತು ಆ ಮಾಹಿತಿಯನ್ನು ಖಾತೆಯಲ್ಲಿ ಗುರುತು ಮಾಡಿಕೊಳ್ಳ ಬೇಕು.

3 ಗ್ರಾಹಕನಿಗೆ ನಮೂದು ಮಾಡಿದ ಪಾಸ್ ಪುಸ್ತಕವನ್ನು ಹಿಂತಿರುಗಿಸುವಾಗ ಇಂತಹ ದಿನಾಂಕದ ವರೆಗೆ ಪಾಸ್ ಪುಸ್ತಕ ಬರೆದಿದೆ ಎಂಬುದನ್ನೂ ಖಾತೆಯಲ್ಲಿ ಬರೆಯಬೇಕು.

4 ಗ್ರಾಹಕ ಕಾಲಕಾಲಕ್ಕೆ ಪಾಸ್ ಪುಸ್ತಕವನ್ನು ನಮೂದು ಮಾಡಲು ಹಾಜರುಪಡಿಸಬೇಕು. ಯಾವ ಕಾರಣಕ್ಕೂ ಅದು ಬ್ಯಾಂಕಿನಲ್ಲೇ ಕೊಳೆಯಲು ಬಿಡಬಾರದು.

5 ಪಾಸ್ ಪುಸ್ತಕ ಕಳೆದುದನ್ನು ಗ್ರಾಹಕ ತಕ್ಷಣ ಬ್ಯಾಂಕಿಗೆ ತಿಳಿಸಬೇಕು. ಏಕೆಂದರೆ ಅಪರಿಚಿತನೊಬ್ಬ ಪಾಸ್ ಪುಸ್ತಕ ವನ್ನು ಹಿಂಪಡೆತ ಚೀಟಿಯೊಂದಿಗೆ ನೀಡಿ ಹಣ ಪಡೆಯಲು ಸಾಧ್ಯ.

6 ಗ್ರಾಹಕ ಪಾಸ್ ಪುಸ್ತಕದಲ್ಲಿ ಏನನ್ನೂ ಬರೆಯಕೂಡದು. ಹಾಗೆ ಮಾಡುವುದರಿಂದ ಪಾಸ್ ಪುಸ್ತಕ ವಸ್ತುಸ್ಥಿತಿ ತಿಳಿಸುವ ಮಹತ್ವದ ಗುಣವನ್ನು ಕಳೆದುಕೊಳ್ಳುತ್ತದೆ.

7 ಗ್ರಾಹಕ ತನ್ನ ಬ್ಯಾಂಕ್ ಖಾತೆಯ ವ್ಯವಹಾರಗಳನ್ನು ಪ್ರತ್ಯೇಕವಾಗಿ ಗುರುತು ಮಾಡಿಕೊಂಡಿದ್ದು, ಪಾಸ್ ಪುಸ್ತಕದ ನಮೂದುಗಳೊಡನೆ ಅವುಗಳನ್ನು ತಾಳೆನೋಡುವ ಅಭ್ಯಾಸ ಬೆಳೆಸಿಕೊಳ್ಳಬೇಕು. ಇದರಿಂದ ತಪ್ಪು ನಮೂದು, ಸ್ಪಷ್ಟನೆ, ವಂಚನೆ ಮುಂತಾದವು ತಕ್ಷಣ ಬೆಳಕಿಗೆ ಬರಲು ಸಾಧ್ಯ.

ಈ ಕ್ರಮಗಳು ಪಾಸ್ ಪುಸ್ತಕ ಬ್ಯಾಂಕರ್-ಗ್ರಾಹಕ ಸಂಬಂಧದಲ್ಲಿ ಭದ್ರವಾದ ಕೊಂಡಿಯೆನಿಸಲು ಸಹಾಯ ಮಾಡುತ್ತದೆ. ಕಾನೂನಿನ ಗೋಜಿನಿಂದ ತಪ್ಪಿಸುತ್ತದೆ.



## ಒಟ್ಟಿನಲ್ಲಿ ಹೇಳುವುದಾದರೆ....

ಒಟ್ಟಿನಲ್ಲಿ ಹೇಳುವುದಾದರೆ, ಪಾಸ್ ಪುಸ್ತಕಕ್ಕೆ ಸಂಬಂಧಿಸಿದಂತೆ ಬ್ಯಾಂಕರ್, ಗ್ರಾಹಕ ಇಬ್ಬರ ಮೇಲೂ ಜವಾಬ್ದಾರಿ ಇರುತ್ತದೆ. ಸರಿಯಾದ ನಮೂದುಗಳನ್ನೇ ಮಾಡಬೇಕಾದ್ದು ಬ್ಯಾಂಕರನ ಜವಾಬ್ದಾರಿಯಾದರೆ, ಅವನು ಮಾಡಿರುವ ನಮೂದುಗಳನ್ನು ಪರೀಕ್ಷಿಸಬೇಕಾದ್ದು ಮತ್ತು ಆಗಿಂದಾಗ್ಯೆ ಪಾಸ್ ಪುಸ್ತಕವನ್ನು ಬ್ಯಾಂಕಿಗೆ ಕಳುಹಿಸಿ ನಮೂದುಗಳನ್ನು ಹಾಕಿಸಿಕೊಳ್ಳ ಬೇಕಾದ್ದು ಗ್ರಾಹಕನ ಕರ್ತವ್ಯವಾಗುತ್ತದೆ. ತಪ್ಪು ನಮೂದುಗಳಿರುವ ಸಂದರ್ಭಗಳಲ್ಲಿ ಅದನ್ನು ಮೊದಲು ಗಮನಿಸುವ ವ್ಯಕ್ತಿ ಮತ್ತೊಬ್ಬನಿಗೆ ತಿಳಿಸಬೇಕು, ಹಾಗೂ ಬ್ಯಾಂಕರ್ ಅದನ್ನು ಸರಿಪಡಿಸಬೇಕು. ಎಲ್ಲ ನಮೂದುಗಳನ್ನು ಬ್ಯಾಂಕಿನ ಅಧಿಕಾರಿಯೊಬ್ಬ ಪರೀಕ್ಷಿಸಿ ಅದರ ನಿಜಾಂಶವನ್ನು ಪ್ರಮಾಣೀಕರಿಸಿ ತನ್ನ ಆದ್ಯಕ್ಷರ ಹಾಕಬೇಕು. ಒಂದು ಪಾಸ್ ಪುಸ್ತಕ ಕಳೆದು ಹೋದಾಗ ಮತ್ತೊಂದನ್ನು ಗ್ರಾಹಕನಿಗೆ ನೀಡಿ ಅದರ ಮೇಲೆ 'ದ್ವಿಪ್ರತಿ' ಎಂದು ಗುರುತು ಹಾಕುವುದು ಒಳ್ಳೆಯದು. ಲೆಕ್ಕಪತ್ರಗಳನ್ನಿಡುವ ಕಾರ್ಯ ಯಾಂತ್ರಿಕೀಕರಣವಾಗುತ್ತಿರುವ ಇತ್ತೀಚಿನ ವರ್ಷಗಳಲ್ಲಿ ಪಾಸ್ ಪುಸ್ತಕದ ಬದಲು ಬಿಡಿ ಹಾಳೆಗಳ ರೂಪದಲ್ಲಿ ಗ್ರಾಹಕನಿಗೆ ಬ್ಯಾಂಕರನಿಂದ ಇವರಿಬ್ಬರ ನಡುವಣ ವ್ಯವಹಾರಗಳ ವಿವರಗಳು ಬರುತ್ತಿವೆ.

—ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ

# ಬಾಕಿ ವಸೂಲಿಯ ಹೊಸ ತಂತ್ರವ್ಯೂಹಗಳು

**ರಾಜೇಶ್ವರಿ ಭಾರತಿ**

ಹಿಂದೆಲ್ಲ ಬ್ಯಾಂಕುಗಳಲ್ಲಿ ಸಾಲ ನೀಡುವಾಗ ಜಾಮೀನು ಮತ್ತು ಭದ್ರತೆಗೆ ಹೆಚ್ಚಿನ ಪ್ರಾಮುಖ್ಯ ನೀಡುತ್ತಿದ್ದುದರಿಂದ ಬಡವರಿಗೆ ಬ್ಯಾಂಕಿನಿಂದ ಹೆಚ್ಚಿನ ನೆರವು ದೊರೆಯುತ್ತಿರಲಿಲ್ಲ. ಬಡವರಿಗೆ, ದುರ್ಬಲ ವರ್ಗದವರಿಗೆ ನೆರವು ನೀಡಲು, ಅವರನ್ನು ಬಡತನದ ರೇಖೆಯಿಂದ ಮೇಲೆತ್ತಲು ಅನೇಕ ಉಪಯುಕ್ತ ಯೋಜನೆಗಳನ್ನು ಜಾರಿಗೆ ತರಲಾಗಿದೆ. ಆದರೆ ದುರಂತದ ಸಂಗತಿಯೆಂದರೆ, ಭಾರತದಲ್ಲಿ ಯಾವುದೇ ಉತ್ತಮ ಯೋಜನೆಯಾದರೂ ಕಾರ್ಯರೂಪಕ್ಕೆ ತಂದಾಗ ವಿಫಲವಾಗುತ್ತದೆ. ಇದಕ್ಕೆ ಮುಖ್ಯ ಕಾರಣ, ಸಾಲ ತೆಗೆದುಕೊಳ್ಳುವವರು ಹಾಗೂ ಕೆಲವೊಮ್ಮೆ ಸಾಲ ಕೊಡುವವರು ಯೋಜನೆಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿರುವುದು ಹಾಗೂ ಮುಕ್ಕಾಲು ಪಾಲು ಜನರಲ್ಲಿ ತೆಗೆದುಕೊಂಡ ಸಾಲವನ್ನು ಸರಿಯಾಗಿ ಉಪಯೋಗಿಸಿಕೊಂಡು ಅಭಿವೃದ್ಧಿ ಹೊಂದಬೇಕೆಂಬ ಮನೋಭಾವ ಇಲ್ಲದಿರುವುದು.

ಬ್ಯಾಂಕುಗಳು ಜನರಿಗೆ ಸಾಲ ನೀಡುವುದು ಎಷ್ಟು ಮುಖ್ಯವೋ, ನೀಡಿದ ಸಾಲ ಸರಿಯಾದ ಸಮಯದಲ್ಲಿ ವಸೂಲಾಗುವುದೂ ಅಷ್ಟೇ ಮುಖ್ಯ. ದಿನದಿಂದ ದಿನಕ್ಕೆ ಹೆಚ್ಚುತ್ತಿರುವ ಜನರ ಸಾಲದ ಅಗತ್ಯವನ್ನು (ಕ್ರೆಡಿಟ್ ನೀಡ್ಸ್) ಪೂರೈಸಲು ಬ್ಯಾಂಕುಗಳು ವಸೂಲಾದ ಸಾಲಗಳಿಂದ ನಿಧಿಯ ಪುನರ್‌ಭರಣ ಮಾಡಬೇಕು. ಸಾಲ ವಸೂಲಿ ಸರಿಯಾಗಿ ಆಗದಿದ್ದರೆ ನಿಧಿಯ ಪುನರ್‌ಭರಣಕ್ಕೆ (ರೀಸೈಕ್ಲಿಂಗ್) ಅಡಚಣೆ ಉಂಟಾಗುತ್ತದೆ. ಅಲ್ಲದೆ ಅಭಿವೃದ್ಧಿ ಯೋಜನೆಗಳಿಗಾಗಿ ವಿಶ್ವ ಬ್ಯಾಂಕಿನಿಂದ ದೊರೆಯುತ್ತಿರುವ ನೆರವಿನಲ್ಲಿ ಕಡಿತವಾಗುತ್ತದೆ. ಇದರಿಂದಾಗಿ ಸಾಲ ನೀಡುವಿಕೆಯ ಪ್ರಮಾಣ ಕಡಿಮೆಯಾಗುತ್ತದೆ. ಸಾಲ ವಸೂಲಿಯಾಗದಿರುವುದು ಬ್ಯಾಂಕಿನ ಮೇಲೆ ನೇರವಾಗಿ ಹಾಗೂ ಜನರ ಮೇಲೆ ಪರೋಕ್ಷವಾಗಿ ದುಷ್ಪರಿಣಾಮ ಬೀರುತ್ತದೆ.

1983ರ ಕೊನೆಗೆ 23,800 ಅಸ್ವಸ್ಥ ಕೈಗಾರಿಕಾ ಘಟಕಗಳಿದ್ದು, ರೂ. 1,600 ಕೋಟಿ ಬ್ಯಾಂಕ್ ನಿಧಿಯನ್ನು ಸ್ಥಗಿತಗೊಳಿಸಿದ್ದವು. ಕರ್ನಾಟಕ ರಾಜ್ಯದಲ್ಲಿ ಸಹಕಾರಿ ಸಾಲಗಳೇ ರೂ. 50 ಕೋಟಿಗೂ ಹೆಚ್ಚು ಬಾಕಿಯಿದ್ದು, ವಸೂಲಿ ಪ್ರಮಾಣ ಕಳೆದ ಫೆಬ್ರುವರಿ ವರೆಗೆ ಶೇಕಡ 19·91ರಷ್ಟು ಮಾತ್ರ ಆಗಿತ್ತು. ನಮ್ಮ ಭಾರತದಲ್ಲಿ ಸಾಲಗಳ ವಸೂಲಿ ಪ್ರಮಾಣ ಶೇ. 50ಕ್ಕಿಂತಲೂ ಕಡಿಮೆ. ಇತ್ತೀಚಿನ ವರ್ಷಗಳಲ್ಲಿ ಸಾಲ ವಸೂಲಿ ಒಂದು ಗಂಭೀರ ಸಮಸ್ಯೆಯಾಗಿದ್ದು, ತುರ್ತು ಪರಿಹಾರ ಕಂಡುಕೊಳ್ಳುವುದು ಅತ್ಯಗತ್ಯವಾಗಿದೆ.

ಬಾಕಿದಾರರಲ್ಲೂ ಉದ್ದೇಶಪೂರ್ವಕ ಬಾಕಿದಾರರು ಹಾಗೂ ಪರಿಸ್ಥಿತಿಯಿಂದಾಗಿ ಬಾಕಿದಾರರಾಗಿರುವವರು ಇರುತ್ತಾರೆ. ಉದ್ದೇಶಪೂರ್ವಕವಾಗಿ ಸುಸ್ತಿದಾರರಾಗಿರುವುದರಿಂದ ಸಹಕಾರಿ ಸಾಲಗಳನ್ನು ಸರ್ಕಾರ ಯಾವುದೇ ಮುಲಾಜಿಗೆ ಒಳಗಾಗದೆ, ಎಲ್ಲ ರೀತಿಯ ಬಲವಂತ ವಿಧಾನಗಳನ್ನು ಬಳಸಿ ವಸೂಲಿ ಮಾಡಲಾಗುವುದು ಎಂದು ಕರ್ನಾಟಕ ಸರ್ಕಾರ ಪ್ರಕಟಿಸಿತು. ಆದರೆ ಇದಕ್ಕೆ ಪ್ರತಿಯಾಗಿ ರೈತ ಸಂಘ ಬಾಕಿ ವಸೂಲಿಗಾಗಿ ಬರುವ ಅಧಿಕಾರಿಗಳನ್ನು ಹಳ್ಳಿ ಪ್ರವೇಶಿಸದಂತೆ ತಡೆಯುವಂತೆ ರೈತರಿಗೆ ಆದೇಶ ನೀಡಿತು. ರೈತ ಸಂಘಟನೆ ಬ್ಯಾಂಕುಗಳ ಸಾಲ ವಸೂಲಾತಿಯಲ್ಲಿ ದೊಡ್ಡ ತೊಡಕಾಗಿ ಪರಿಣಮಿಸಿದೆ. ಸಾಲ ವಾಪಸ್ಸು ನೀಡದಿರುವಿಕೆಯಲ್ಲಿ ಜನ ಹೆಚ್ಚು ಸಂಘಟಿತರಾಗಿದ್ದಾರೆ. ಬಾಕಿ ವಸೂಲಿಗಾಗಿ ಹೋಗುವ ಬ್ಯಾಂಕ್ ಅಧಿಕಾರಿಗಳಿಗೆ ಯಾವುದೇ ರಕ್ಷಣೆ ಇಲ್ಲ.

ಗ್ರಾಮಾಂತರ ಪ್ರದೇಶಗಳಲ್ಲಿ ದೊಡ್ಡ, ಮಧ್ಯಮ, ಸೀಮಾಂತ ಮತ್ತು ಭೂರಹಿತ ಕೃಷಿಕಾರರಿಗೆ ಹಾಗೂ ಕೃಷಿೇತರ ಚಟುವಟಿಕೆಗಳಿಗೆ ಬ್ಯಾಂಕುಗಳು ಸಾಲ ನೀಡುತ್ತಿವೆ. ಕೈಗಾರಿಕಾ ವಲಯದಲ್ಲಿ ದೊಡ್ಡ ಕೈಗಾರಿಕೆ, ಸಣ್ಣ ಕೈಗಾರಿಕೆಗಳಿಗೆ ಸಾಲ ನೀಡುತ್ತಿವೆ. ಕೃಷಿಗಾಗಲಿ, ಕೈಗಾರಿಕೆಗಾಗಲಿ, ಗ್ರಾಮಾಂತರ ಪ್ರದೇಶದಲ್ಲಾಗಲಿ, ನಗರಪ್ರದೇಶದಲ್ಲೇ ಆಗಲಿ ಸಾಲ ನೀಡುವಾಗ ಅನುಸರಿಸಬೇಕಾದ ಕೆಲವು ಮೂಲ ಕ್ರಮಗಳಿವೆ. ಅವೆಂದರೆ ಸಾಲಗಾರನ ನಡತೆ, ಸಾಮರ್ಥ್ಯ, ಬಂಡವಾಳಗಳನ್ನು ಗಮನಿಸಿ ಸರಿಯಾದ ಫಲಾನುಭವಿಗಳನ್ನು ಗುರುತಿಸುವುದು. ನಮ್ಮ ಬ್ಯಾಂಕುಗಳು ಈ ಮೂಲ ಕ್ರಮಗಳನ್ನು ಸರಿಯಾಗಿ ಅನುಸರಿಸಲು ಆಗುತ್ತಿಲ್ಲವಾದ್ದರಿಂದ ಬಾಕಿ ವಸೂಲಿ ಕಷ್ಟವಾಗಿದ್ದು, ಅದಕ್ಕಾಗಿ ತಂತ್ರವ್ಯೂಹಗಳನ್ನೇ ರಚಿಸಬೇಕಾದ ಪರಿಸ್ಥಿತಿ ಮೂಡಿದೆ.

ಇತ್ತೀಚಿನ ವರ್ಷಗಳಲ್ಲಿ ಬ್ಯಾಂಕಿಂಗ್ ತೀವ್ರಗತಿಯಲ್ಲಿ ವಿಸ್ತರಣೆ ಆಗಿರುವುದರಿಂದ, ಜನರ ಸಾಲದ ಅಗತ್ಯವೂ ತೀವ್ರಗತಿಯಲ್ಲಿ ಹೆಚ್ಚಾಗುತ್ತಲೇ ಇದ್ದು, ಬ್ಯಾಂಕುಗಳು ಹೆಚ್ಚಿನ ಒತ್ತಡಕ್ಕೆ ಒಳಗಾಗುತ್ತಿವೆ. "ಕಡಿಮೆ ಸಮಯದಲ್ಲಿ ಹೆಚ್ಚು ಸಾಲ"ಗಳನ್ನು ನೀಡಬೇಕಾಗಿದ್ದು, ಅದಕ್ಕೆ ಅಗತ್ಯವಿರುವ ಅಧೋರಚನೆ ಮಾತ್ರ ಬ್ಯಾಂಕುಗಳಲ್ಲಿ ಇಲ್ಲವಾಗಿದೆ. ಸಾಲ ನೀಡುವಿಕೆಯ ಸಮಯದಲ್ಲಿ ಅನೇಕ ವೇಳೆ ಬ್ಯಾಂಕುಗಳ ಮೇಲೆ ಒತ್ತಡ ತರುವ ಸರ್ಕಾರ ಬಾಕಿ ವಸೂಲಾತಿಯ ಸಮಯದಲ್ಲಿ ಸಕ್ರಿಯ ಸಹಕಾರ ನೀಡುತ್ತಿಲ್ಲ. ಹೊರಗಿನ ಒತ್ತಡದಿಂದಾಗಿ ಹಾಗೂ ಒಟ್ಟೊಟ್ಟಿಗೆ ಐವತ್ತು, ನೂರು ಜನರಿಗೆ ಸಾಲ ನೀಡುತ್ತಿರುವುದರಿಂದ ಸಮಯದ ಅಭಾವದಿಂದಾಗಿ ಮತ್ತು ಸಿಬ್ಬಂದಿಯ ಕೊರತೆಯಿಂದಾಗಿ ಬ್ಯಾಂಕುಗಳ ನಿಯಮಗಳನ್ನು ಸರಿಯಾಗಿ ಅನುಸರಿಸಲು ಕಷ್ಟವಾಗುತ್ತಿದೆ. ಸಾಲ ಕೊಡುವುದೇ ಕಷ್ಟದ ಕೆಲಸವಾಗಿರುವಾಗ ಇನ್ನು ಸಾಲವನ್ನು ಅನುಗಮನ ಮಾಡುವುದಕ್ಕಾಗಲಿ ವಸೂಲಿ ಮಾಡಲಾಗಲಿ ಸಮಯವೆಲ್ಲಿರುತ್ತದೆ? ಬ್ಯಾಂಕಿನಿಂದ ತೆಗೆದುಕೊಂಡ ಸಾಲವನ್ನು ಉತ್ಪಾದನ ಉದ್ದೇಶಗಳಿಗೆ ಉಪಯೋಗಿಸಿಕೊಳ್ಳದೆ ಭಿನ್ನೋದ್ದೇಶಕ್ಕಾಗಿ ಬಳಸುವವರೇ ಹೆಚ್ಚು. ಇದರಿಂದಾಗಿ ಗಳಿಕೆಯಲ್ಲಿ ಯಾವುದೇ ಹೆಚ್ಚಳವಿರುವುದಿಲ್ಲವಾದ್ದರಿಂದ ಸಾಲ ತೀರಿಸುವುದು ಕಷ್ಟವಾಗುತ್ತದೆ.

---

ರಾಜೇಶ್ವರಿ ಭಾರತಿ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಇಟ್ಟಿಗೆಗೂಡು ಶಾಖೆ, ಮೈಸೂರು

ರಾಜಕೀಯ ವ್ಯಕ್ತಿಗಳೂ ಪಕ್ಷಗಳೂ ಬ್ಯಾಂಕುಗಳ ಮೇಲೆ ಒತ್ತಡ ತರುತ್ತಿದ್ದಾರೆ. ಸಾಲಮೇಳಗಳೇ ನಡೆಯುತ್ತಿವೆ. ಜನ ಸಾಲ ತೆಗೆದುಕೊಳ್ಳುವುದೂ ತಮ್ಮ ಹಕ್ಕೇ ಎಂದು ತಿಳಿದುಕೊಂಡಿದ್ದಾರೆ. ಕೆಲವೇ ದಿನಗಳ ಹಿಂದೆ ಜನರ ದೊಡ್ಡ ಗುಂಪೇ ರೇಷನ್ ಕಾರ್ಡ್ ಹಿಡಿದುಕೊಂಡು ಬಂದು ಅದರ ಆಧಾರದ ಮೇಲೆ ಸಾಲ ಕೇಳಿದ್ದು ನೆನಪಿಸಿಕೊಳ್ಳಬಹುದು. ಒತ್ತಡದಿಂದಾಗಿ ಸಾಲ ನೀಡುತ್ತಲೇ ಹೋಗುವ ಬ್ಯಾಂಕುಗಳಿಗೆ ಸಾಲಗಳನ್ನು ಅನುಗಮನ ಮಾಡುವುದು, ಸಾಲ ವಸೂಲಿ ಮಾಡುವುದು ಅಸಾಧ್ಯವಾಗುತ್ತಿದೆ.

ವರಮಾನ ತೆರಿಗೆಯವರಿಗಾಗಲಿ ಮಾರಾಟ ತೆರಿಗೆ ಅಧಿಕಾರಿಗಳಿಗಾಗಲಿ ಇರುವ ಹಾಗೆ ಅಧಿಕಾರ ಬ್ಯಾಂಕಿನ ಅಧಿಕಾರಿಗಳಿಗೆ ಇಲ್ಲ. ಬಹಳಷ್ಟು ಪ್ರಸಂಗಗಳಲ್ಲಿ ಬ್ಯಾಂಕುಗಳು ನ್ಯಾಯಾಲಯದಲ್ಲಿ ಸಾಲಗಾರರ ಮೇಲೆ ಮೊಕದ್ದಮೆ ಹೂಡಬೇಕು. ವರಮಾನ ತೆರಿಗೆ, ಮಾರಾಟ ತೆರಿಗೆ ಅಧಿಕಾರಿಗಳು ಬಾಕಿ ವಸೂಲಿಗಾಗಿ ಯಾವುದೇ ನೋಟೀಸ್ ನೀಡದೆಯೂ ಪ್ರತಿಭೂತಿಯನ್ನು ವಶಪಡಿಸಿಕೊಳ್ಳಬಹುದು. ಆದರೆ ಬ್ಯಾಂಕ್ ಅಧಿಕಾರಿಗಳು ಬಾಕಿ ವಸೂಲಿಗಾಗಿ ಸಾಧಾರಣ ಸಿವಿಲ್ ದಾವೆಯನ್ನೇ ಹೂಡಬೇಕು. ಮೊಕದ್ದಮೆಗಳು ಇತ್ಯರ್ಥವಾಗಲು ಬಹಳ ಸಮಯ ತೆಗೆದುಕೊಳ್ಳುವುದರಿಂದ ಬ್ಯಾಂಕುಗಳಿಗೆ ಎರಡು ರೀತಿಯಲ್ಲಿ ತೊಂದರೆಯಾಗುತ್ತಿದೆ : (ಅ) ಸಾಲವನ್ನು ತಕ್ಷಣ ವಸೂಲಿ ಮಾಡಲಾಗುವುದಿಲ್ಲವಾದ್ದರಿಂದ ನಿಧಿಯ ಪುನರ್ ಭರಣಕ್ಕೆ ಅಡಚಣೆ ಉಂಟಾಗುತ್ತದೆ. ಅಲ್ಲದೆ ಬಡ್ಡಿಯಿಂದಾಗಿ ಬಾಕಿಯ ಮೊತ್ತವೂ ಹೆಚ್ಚಾಗುತ್ತಾ ಹೋಗುತ್ತದೆ. (ಆ) ಆಧಾರಗಳನ್ನು ಮಾರಾಟ ಮಾಡಲು ಯಥೇಷ್ಟ ಸಮಯಾವಕಾಶವಿರುವುದರಿಂದ ಕೊನೆಗೆ ತೀರ್ಪು ಬ್ಯಾಂಕಿನ ಕಡೆಗೆ ಆದರೂ, ಆಧಾರವೇ ಇಲ್ಲದಿದ್ದರೆ ಪ್ರಯೋಜನವೇನು ? ಇತ್ತೀಚಿನ ರೈತ ಚಳವಳಿಯಿಂದಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಬಾಕಿ ವಸೂಲಿಗಾಗಿ ವಶಪಡಿಸಿಕೊಂಡ ಭದ್ರತೆಗಳನ್ನು ಕೊಂಡುಕೊಳ್ಳುವವರೇ ಸಿಗದೆ ಅವುಗಳನ್ನು ಮಾರಾಟ ಮಾಡಲು ಬ್ಯಾಂಕುಗಳಿಗೆ ತೊಂದರೆಯಾಗಿದೆ.

ಬಂಡವಾಳದ ಕೊರತೆ, ತಂತ್ರಜ್ಞಾನದ ಕೊರತೆ, ನೌಕರರ ಮುಷ್ಕರ, ಬೀಗಮುದ್ರೆ, ವಿದ್ಯುಚ್ಛಕ್ತಿ ಅಭಾವ, ಉತ್ಪಾದಿತ ವಸ್ತುವಿಗೆ ಬೇಡಿಕೆ ಇಲ್ಲದಿರುವುದು ಮುಂತಾದ ಯಾವುದೇ ಕಾರಣಗಳಿಂದಾಗಿ ಅಸ್ವಸ್ಥ ಕೈಗಾರಿಕಾ ಘಟಕಗಳ ಸಂಖ್ಯೆ ಹೆಚ್ಚುತ್ತಲೇ ಹೋಗುತ್ತಿದೆ. 1982ರ ಜೂನ್‌ನಲ್ಲಿ ಅಸ್ವಸ್ಥ ಘಟಕಗಳು ರೂ. 2,300 ಕೋಟಿ ಬ್ಯಾಂಕ್ ನಿಧಿಯನ್ನು ಸ್ಥಗಿತಗೊಳಿಸಿದ್ದವು. ಅಸ್ವಸ್ಥ ಕೈಗಾರಿಕಾ ಘಟಕಗಳ ಪುನರುಜ್ಜೀವನಕಾರ್ಯವನ್ನು ಈಗಾಗಲೇ ಬ್ಯಾಂಕುಗಳು ಸಾಕಷ್ಟು ನಡೆಸುತ್ತಿವೆ.

ನಮ್ಮ ಗ್ರಾಮಾಂತರ ಪ್ರದೇಶಗಳಲ್ಲಿ ಮಾರುಕಟ್ಟೆ ವ್ಯವಸ್ಥೆ ಸರಿಯಿಲ್ಲ. ದೂರದ ಪಟ್ಟಣಗಳಿಗೆ ಉತ್ಪನ್ನಗಳನ್ನು ತೆಗೆದುಕೊಂಡು ಹೋಗಲು ಸರಿಯಾದ ಸಾರಿಗೆ ವ್ಯವಸ್ಥೆ ಇಲ್ಲ ಮತ್ತು ಸಾರಿಗೆ ಬಹಳ ದುಬಾರಿ. ಆದ್ದರಿಂದ ವ್ಯವಸಾಯಗಾರರು ಸ್ಥಳೀಯವಾಗಿ ಮಾರುತ್ತಿರುವುದರಿಂದ ಅವರ ಉತ್ಪನ್ನಕ್ಕೆ ಸರಿಯಾದ ಬೆಲೆ ಸಿಗುತ್ತಿಲ್ಲ. ಇದರಿಂದಾಗಿ ಅವರಿಗೆ ಸಾಲಗಳನ್ನು ತೀರಿಸಲು ಕಷ್ಟವಾಗುತ್ತಿದೆ. ಎಷ್ಟೋ ರೀತಿಯ ಸಾಲಗಳಲ್ಲಿ ಬ್ಯಾಂಕುಗಳು ಶೇ. 75 ಅಥವಾ ಶೇ. 90ನ್ನು ಕೊಟ್ಟು ಉಳಿದ ಭಾಗವನ್ನು ಸಾಲಗಾರರೇ ಹಾಕಬೇಕಾಗುತ್ತದೆ. ಕಡು ಬಡವರೇ ಹೆಚ್ಚಾಗಿರುವ ನಮ್ಮ ಭಾರತದಲ್ಲಿ ಭಾಗಾಂಶದ ಹಣ (ಮಾರ್ಜಿನ್) ಬಹಳಷ್ಟು ಜನರಲ್ಲಿ ಇರುವುದಿಲ್ಲವಾದ್ದರಿಂದ ಸಾಲವನ್ನು ಉದ್ದೇಶಿತಕ್ಕೆ ಉಪಯೋಗಿಸಿಕೊಳ್ಳದೆ ಬೇರೆ ಖರ್ಚುಗಳಿಗೆ ಉಪಯೋಗಿಸಿಕೊಳ್ಳುವವರೇ ಹೆಚ್ಚು. ಇದರಿಂದಾಗಿ ಸಾಲ ವಾಪಸಾತಿ ಮಾಡಲು ತೊಂದರೆಯಾಗುತ್ತದೆ.

ಬ್ಯಾಂಕಿನವರು ನೀಡುತ್ತಿರುವ ಸಾಲಗಳಲ್ಲಿ ಸಿಂಹಪಾಲು ಮಧ್ಯವರ್ತಿಗಳಿಗೇ ಸೇರುತ್ತಿದೆ. ಹಣವನ್ನು ಹೊಡೆಯುತ್ತಿರುವುದರ ಜೊತೆಗೆ ಈ ಮಧ್ಯವರ್ತಿಗಳು ಸಾಲಗಾರರಿಗೆ ತಪ್ಪು ತಿಳಿವಳಿಕೆಗಳನ್ನು ನೀಡಿ ಬ್ಯಾಂಕುಗಳಿಗೆ ಬಾಕಿ ವಸೂಲಿ ಮಾಡುವುದು ಬಹಳ ಕಷ್ಟವಾಗಿದೆ. ಬಹಳಷ್ಟು ಸಾಲಗಾರರಿಗೆ ಸಾಲ ಏತಕ್ಕಾಗಿ ಕೊಟ್ಟಿದ್ದು, ಎಷ್ಟು ಕೊಟ್ಟಿದ್ದಾರೆ ಎಂದು ಸಹ ತಿಳಿದಿರುವುದಿಲ್ಲ. ಎಷ್ಟೋ ವೇಳೆ ಅವರುಗಳಿಗೆ ತಾವು ತೆಗೆದುಕೊಂಡಿರುವುದು ಸಾಲ ಎಂದೇ ತಿಳಿದಿರುವುದಿಲ್ಲ. ಏಕೆಂದರೆ ಮಧ್ಯವರ್ತಿಗಳು ಆ ಹಣ ಸರ್ಕಾರ ಬ್ಯಾಂಕಿನಿಂದ ಬಡವರಿಗೆ ಸಹಾಯವಾಗಿ ಹಂಚಿಸುತ್ತಿರುವುದು ಎಂದೆಲ್ಲಾ ಅಪಪ್ರಚಾರ ಮಾಡುತ್ತಿದ್ದಾರೆ.

ಬ್ಯಾಂಕಿನವರು ಲಂಚ ತೆಗೆದುಕೊಂಡು ಅನರ್ಹ ವ್ಯಕ್ತಿಗಳಿಗೂ ಸಾಲ ನೀಡುತ್ತಿರುವುದು ಈಗೀಗ ಹೆಚ್ಚಾಗಿದೆ. ಬ್ಯಾಂಕುಗಳಲ್ಲಿನ ಈ ಅನಿಷ್ಟಕಾರಿ ಬೆಳವಣಿಗೆಯ ಬಗ್ಗೆ ಭಾರತೀಯ ರಿಸರ್ವ್ ಬ್ಯಾಂಕ್ ಆತಂಕ ವ್ಯಕ್ತಪಡಿಸಿದೆ. ಸರ್ಕಾರದ ಯೋಜನೆಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿರುವ ಬ್ಯಾಂಕ್ ನೌಕರ, ಸರ್ಕಾರಿ ನೌಕರ ಅಥವಾ ಪ್ರಯೋಜನದಾರರ ಮೇಲೆ ಕಾನೂನು ಕ್ರಮ ಕೈಗೊಳ್ಳಲು ಅವಕಾಶವಾಗುವಂತೆ 'ಕರಾರು ಕಾನೂನಿ'ಗೆ ತಿದ್ದುಪಡಿ ತರುವ ಬಗ್ಗೆ ಕರ್ನಾಟಕ ಸರ್ಕಾರ ಪರಿಶೀಲಿಸುತ್ತಿದೆ.

ಪದೇಪದೇ ಅಧಿಕಾರಿಗಳನ್ನು ವರ್ಗ ಮಾಡುತ್ತಿರುತ್ತಾರೆ. ಬೇರೆ ಕಡೆಯಿಂದ ವರ್ಗವಾಗಿ ಬರುವ ಅಧಿಕಾರಿಗಳಿಗೆ ಪ್ರಾದೇಶಿಕ ಭಾಷೆ ತಿಳಿದಿರುವುದಿಲ್ಲ. ಅಲ್ಲದೆ ಸಾಲದ ಅರ್ಜಿಗಳು ಸಾಮಾನ್ಯವಾಗಿ ಇಂಗ್ಲಿಷ್ ಭಾಷೆಯಲ್ಲಿ ಮಾತ್ರವಿರುತ್ತವೆ. ಪ್ರಾದೇಶಿಕ ಭಾಷೆಯಲ್ಲಿ ಇರುವುದಿಲ್ಲವಾದ್ದರಿಂದ ಗ್ರಾಮಾಂತರ ಪ್ರದೇಶಗಳಲ್ಲಂತೂ ಜನರಿಗೆ ಬಹಳ ತೊಂದರೆಯಾಗುತ್ತಿದೆ. ಸಾಲ ವಸೂಲಾತಿಯ ತೊಂದರೆಯಲ್ಲಿ ಇವೂ ಪರೋಕ್ಷ ಕಾರಣಗಳು.

ಬಾಕಿ ವಸೂಲಾತಿಯಲ್ಲಿನ ತೊಂದರೆಗಳನ್ನು ನಿವಾರಿಸಲು ಅನೇಕ ತಂತ್ರಗಳನ್ನು ಉಪಯೋಗಿಸಬಹುದು :

1 ಪ್ರಯೋಜನದಾರರನ್ನು ಗುರುತಿಸುವಲ್ಲಿ ಬ್ಯಾಂಕಿನವರಿಗೆ ಪೂರ್ಣ ಸ್ವಾತಂತ್ರ್ಯ ಇರಬೇಕು. ಸರ್ಕಾರವಾಗಲಿ, ರಾಜಕೀಯ ವ್ಯಕ್ತಿಗಳಾಗಲಿ ಅನವಶ್ಯ ಒತ್ತಡವನ್ನು ಬ್ಯಾಂಕಿನವರ ಮೇಲೆ ತರಬಾರದು. ಸಾಲ ನೀಡುವುದಕ್ಕೆ ಮುಂಚೆ ಆ ವ್ಯಕ್ತಿಯ ಪ್ರಾಮಾಣಿಕತೆ, ಸಾಲ ಅವರಿಗೆ ಆವಶ್ಯಕವೇ, ಸಾಲ ಅವಶ್ಯವಿದ್ದರೆ ಎಷ್ಟು ಆವಶ್ಯಕ, ಸಾಲ ಕೊಡುವುದರಿಂದ ಆತನ ಗಳಿಕೆ ಹೆಚ್ಚುವುದೇ, ಎಂದೆಲ್ಲಾ ಪರಿಶೀಲಿಸುವುದು ಅತ್ಯವಶ್ಯ. ಹೊರಗಿನ ಒತ್ತಡಕ್ಕೆ ಮಣಿಯದೆ. ವ್ಯಕ್ತಿ ಸಾಲ ಪಡೆಯುಲು ಅರ್ಹನಾಗಿದ್ದರೆ ಮಾತ್ರ ಆತನಿಗೆ ಸಾಲ ನೀಡಬೇಕು.

2 ಕ್ಷೇತ್ರಾಧಿಕಾರಿಗಳು ಇಲ್ಲದಿರುವ ಸ್ಥಳಗಳಲ್ಲಿ ಸಾಲ ವಸೂಲಾತಿಗೇ ಬೇರೆ ಸಿಬ್ಬಂದಿಯನ್ನು ನೇಮಿಸಿ ಅವರಿಗೆ ಇಂತಿಷ್ಟು ಶಾಖೆಗಳೆಂದು ವಹಿಸಿಕೊಡಬೇಕು. ಅಲ್ಲದೆ ಯಾವುದೇ ಪ್ರದೇಶದಲ್ಲಿ ಬಾಕಿ ವಸೂಲಿ ಶೇಕಡ ಐವತ್ತಕ್ಕಿಂತ ಹೆಚ್ಚು ಆಗಿರದಿದ್ದರೆ, ಅಂತಹ ಸ್ಥಳಗಳಿಗೆ ಬಾಕಿ ವಸೂಲಾತಿಗೆಂದೇ ಬೇರೆ ಸಿಬ್ಬಂದಿಯನ್ನು ನೇಮಿಸಲು ಭಾರತೀಯ ರಿಸರ್ವ್ 'ಬ್ಯಾಂಕ್ ಸಲಹೆಯನ್ನು ನೀಡಿದೆ.

3. ಸಾಲ ಕೊಟ್ಟಾಕ್ಷಣ ಬ್ಯಾಂಕಿನವರ ಜವಾಬ್ದಾರಿ ಮುಗಿಯುವುದಿಲ್ಲ. ಕೊಟ್ಟ ಸಾಲ ಸರಿಯಾಗಿ ಉಪಯೋಗವಾಗುತ್ತಿದೆಯೇ ಎಂಬುದನ್ನು ಗಮನಿಸುತ್ತಲೇ ಇರುವುದಲ್ಲದೆ ಬೇಕಾದ ನೆರವು ನೀಡಬೇಕು. ಇದರಿಂದಾಗಿ ಸಾಲಗಾರರು ಸಾಲವನ್ನು ದುರುಪಯೋಗಪಡಿಸಿಕೊಳ್ಳುವ ಸಾಧ್ಯತೆ ಕಡಿಮೆಯಾಗುವುದಲ್ಲದೆ, ಅವರಿಗೆ ಲಾಭ ಹೆಚ್ಚು ಬಂದರೆ ನಮಗೆ ವಸೂಲಿಯೂ ಸುಲಭವಾಗುತ್ತದೆ. ಬ್ಯಾಂಕಿನವರು ಸಾಲಗಾರರಿಗೆ ಉಪಯುಕ್ತ ಸಲಹೆ, ಸೂಚನೆಗಳನ್ನು ನೀಡುತ್ತಿರಬೇಕು. ಸಾಲಗಾರರಿಗೆ ತಿಳಿವಳಿಕೆ ನೀಡುವುದರಲ್ಲಿ ಸ್ಥಳೀಯ ವಿಜ್ಞಾನಿಗಳ, ತಂತ್ರಜ್ಞರ ಸಹಾಯವನ್ನು ಪಡೆಯಬೇಕು. ಈಗೀಗ ಬ್ಯಾಂಕುಗಳು ಸಣ್ಣ ಕೈಗಾರಿಕೆಗಳ ಸಾಲ ನೀಡುವಾಗ ಮುಂಚೆ ಅವರಿಗೆ ತರಬೇತಿ ಸಹ ನೀಡುತ್ತಿವೆ. ಇದು ಉಪಯುಕ್ತ.

4. ಬ್ಯಾಂಕುಗಳು ಮತ್ತು ಸಾಲಗಾರರ ನಡುವಿನ ಮಧ್ಯವರ್ತಿಗಳನ್ನು ದೂರಮಾಡುವ ತನಕ ನಮ್ಮ ಯಾವುದೇ ಯೋಜನೆಗಳೂ ಖಂಡಿತ ಸಫಲವಾಗುವುದಿಲ್ಲ. ಆದ್ದರಿಂದ ಬ್ಯಾಂಕಿಗೂ, ಗ್ರಾಹಕರಿಗೂ ನೇರ ಸಂಪರ್ಕ ಇರುವುದು ಅತ್ಯವಶ್ಯ.

5. ಮಧ್ಯವರ್ತಿಗಳನ್ನು ದೂರಮಾಡಬೇಕಾದರೆ ಬ್ಯಾಂಕಿನ ರೀತಿ, ನೀತಿ, ಸಾಲಯೋಜನೆಗಳ ಬಗ್ಗೆ ಗ್ರಾಹಕರಿಗೆ ತಿಳಿವಳಿಕೆ ನೀಡುವುದು ಅತ್ಯವಶ್ಯ. ಇದಕ್ಕಾಗಿ ಬ್ಯಾಂಕಿನ ಸಾಲಯೋಜನೆಗಳ ಬಗ್ಗೆ, ನೀತಿನಿಯಮಗಳ ಬಗ್ಗೆ ಬ್ಯಾಂಕಿನವರು ಗ್ರಾಹಕರಿಗೆ ಸರಳ ಭಾಷೆಯಲ್ಲಿ, ಅವರಿಗೆ ಅರ್ಥವಾಗುವಂತೆ ತಿಳಿಸಿಕೊಡಬೇಕು.

6. ಸಾಲದ ಅರ್ಜಿಗಳನ್ನು ಪ್ರಾದೇಶಿಕ ಭಾಷೆಯಲ್ಲೂ ಮುದ್ರಿಸಬೇಕು. ಪ್ರಾದೇಶಿಕ ಭಾಷೆಯನ್ನು ಬಲ್ಲ ಅಧಿಕಾರಿಗಳನ್ನೇ ಆಯಾ ಪ್ರದೇಶಕ್ಕೆ ವರ್ಗ ಮಾಡಿದರೆ ಉತ್ತಮ. ಇಲ್ಲವಾದಲ್ಲಿ ವರ್ಗವಾಗಿ ಬಂದ ಅಧಿಕಾರಿಗಳು ಕಡ್ಡಾಯವಾಗಿ ಪ್ರಾದೇಶಿಕ ಭಾಷೆ ಕಲಿಯಬೇಕು ಎಂಬ ನಿಯಮ ಜಾರಿಗೆ ತರಬೇಕು.

7. ಸಾಲ ಯೋಜನೆಗಳ ಬಗ್ಗೆ ಗ್ರಾಹಕರಿಗೆ ತಿಳಿವಳಿಕೆ ನೀಡಲು ಹಾಗೂ ವಾಪಸಾತಿಯ ಅಗತ್ಯದ ಬಗ್ಗೆ ಜನರಲ್ಲಿ ಅರಿವು ಮೂಡಿಸಿ, ಸಾಲ ವಸೂಲಾತಿಯ ಪ್ರಮಾಣ ಹೆಚ್ಚುವಂತೆ ಮಾಡಲು ಸ್ಥಳೀಯ ನಿರುದ್ಯೋಗಿ ಯುವಕರನ್ನು ಕಾರ್ಯಕರ್ತರನ್ನಾಗಿ ನೇಮಿಸಬಹುದು. ಮತ್ತು ಈ ದಿಸೆಯಲ್ಲಿ ಸಮೂಹ ಮಾಧ್ಯಮಗಳನ್ನು ಉಪಯೋಗಿಸಿಕೊಳ್ಳಬೇಕು.

8. ಸಾಲಗಾರರೊಡನೆಯಲ್ಲದೆ, ಸ್ಥಳೀಯ ಜನರೊಡನೆಯೂ ಬ್ಯಾಂಕಿನವರು ಸಂಪರ್ಕವನ್ನಿಟ್ಟುಕೊಳ್ಳಬೇಕು. ಪ್ರತಿಯೊಬ್ಬ ಸಾಲಗಾರನನ್ನೂ ಪದೇಪದೇ ಭೇಟಿ ಮಾಡುವುದು ಅಸಾಧ್ಯ. ಆದ್ದರಿಂದಲೇ ಜನ ಹೆಚ್ಚಾಗಿ ಸೇರುವ ಕಡೆಗಳಿಗೆ ಹೋಗುತ್ತಿದ್ದರೆ, ಒಂದೇ ಕಡೆಯಲ್ಲಿ ಬಹಳಷ್ಟು ಜನರನ್ನು ಭೇಟಿಮಾಡಬಹುದು. ಹಾಗೂ ಮಾಹಿತಿ ಮತ್ತು ವಿಷಯಗಳನ್ನು ಸಂಗ್ರಹಿಸಬಹುದು. ಇವು ಸಾಲ ನೀಡುವ ಸಮಯದಲ್ಲಿಯೂ, ವಸೂಲಿ ಸಮಯದಲ್ಲಿಯೂ ಬಹಳ ಸಹಾಯವಾಗುತ್ತದೆ. ಆದರೆ, ಪ್ರಸಕ್ತ ಪರಿಸ್ಥಿತಿಯಲ್ಲಿ ಬ್ಯಾಂಕ್ ಮತ್ತು ಜನರ ನಡುವೆ ಮಧುರ ಸಂಬಂಧವಿರಲು ಬೇಕಾದ ವಾತಾವರಣವಿಲ್ಲದೆ, ಅಧಿಕಾರಿಗಳಿಗೆ ರಕ್ಷಣೆಯೇ ಇರುವುದಿಲ್ಲವಾದ್ದರಿಂದ ಅವರಿಗೆ ಸಂಪರ್ಕ ಇಟ್ಟುಕೊಳ್ಳಲು ಕಷ್ಟವಾಗುತ್ತದೆ. ಅವರಿಗೆ ಸೂಕ್ತ ರಕ್ಷಣೆ ನೀಡಬೇಕು.

9. ಗ್ರಾಮಾಂತರ ಪ್ರದೇಶಗಳಲ್ಲಿ ಹೆಚ್ಚು ಹೆಚ್ಚು ಮಾರುಕಟ್ಟೆ ಸೌಲಭ್ಯವನ್ನು ಮಾಡಿಕೊಡಬೇಕು.

10. ಸಾಲಗಳನ್ನು ಸೂಕ್ತ ಸಮಯದಲ್ಲಿ ಬಿಡುಗಡೆ ಮಾಡಬೇಕು.

11. ನ್ಯಾಯಾಲಯಗಳಲ್ಲಿ ಸಾಲ ವಸೂಲಾತಿಯ ಮೊಕದ್ದಮೆಗಳು ಶೀಘ್ರವಾಗಿ ಇತ್ಯರ್ಥವಾಗಬೇಕು. ಸಾಲ ವಸೂಲಾತಿಯ ಮೊಕದ್ದಮೆಗಳಿಗಾಗಿಯೇ ಬೇರೆ ನ್ಯಾಯಾಲಯ ಸ್ಥಾಪನೆಯಾದರೆ ಒಳ್ಳೆಯದು. ಪ್ರತಿ ಪಟ್ಟಣದಲ್ಲಿಯೂ ಸಾಧ್ಯವಿಲ್ಲವಾದರೆ, ಜಿಲ್ಲಾ ಕೇಂದ್ರಗಳಲ್ಲಾದರೂ ಸ್ಥಾಪನೆಯಾಗಬೇಕು.

12. ಸಾಲಗಾರ ಪ್ರಾಮಾಣಿಕ ವ್ಯಕ್ತಿಯಾಗಿದ್ದು ಉದ್ದೇಶಪೂರ್ವಕ ಬಾಕಿದಾರನಾಗಿರದೆ ಪರಿಸ್ಥಿತಿಯ ವಿಕೋಪದಿಂದಾಗಿ ಬಾಕಿದಾರನಾಗಿದ್ದರೆ, ಅಂತಹ ಸಮಯದಲ್ಲಿ ಮಾನವೀಯ ದೃಷ್ಟಿಯಿಂದ ಆತನಿಗೆ ಪುನಃ ಸಾಲ ನೀಡಿ ಆತನ ಆರ್ಥಿಕ ಚೇತರಿಕೆಗೆ ಸಹಾಯ ಮಾಡಿ ನಂತರ ನಮ್ಮ ಬಾಕಿಯನ್ನು ವಸೂಲಿ ಮಾಡಬಹುದು.

13. ಅಸ್ವಸ್ಥ ಕೈಗಾರಿಕಾ ಘಟಕಗಳ ಪುನರುಜ್ಜೀವನ ಮಾಡುವುದು.

14. ಗ್ರಾಮಾಂತರ ಪ್ರದೇಶಗಳಲ್ಲಿ ಅನೇಕ ಬ್ಯಾಂಕುಗಳಿರುವ ಕಡೆಗಳಲ್ಲಿ ಒಂದೊಂದು ಬ್ಯಾಂಕಿಗೂ ಇಂತಿಷ್ಟು ಹಳ್ಳಿಗಳನ್ನು ವಹಿಸಿಕೊಡಬೇಕು ಎಂಬ ಸೂಚನೆಗಳು ಬರುತ್ತಿವೆ. ಇದರಿಂದಾಗಿ ಒಬ್ಬ ವ್ಯಕ್ತಿಯೇ ಅನೇಕ ಬ್ಯಾಂಕುಗಳಲ್ಲಿ ಸಾಲ ತೆಗೆದುಕೊಳ್ಳುವುದು ತಪ್ಪುತ್ತದೆ. ಅಲ್ಲದೆ ಸಂಪರ್ಕ, ಅನುಗಮನ ಸುಲಭವಾಗುತ್ತದೆ.

15. ಅಭಿವೃದ್ಧಿ ಯೋಜನೆಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿರುವ ಸರ್ಕಾರಿ ಅಧಿಕಾರಿಗಳ ಮೇಲಾಗಲಿ ಅದಕ್ಕಿಂತ ಮುಖ್ಯವಾಗಿ ಬ್ಯಾಂಕಿನವರ ಮೇಲಾಗಲಿ ಕಠಿಣ ಕ್ರಮವನ್ನು ಕೈಗೊಳ್ಳಬೇಕು.

16. ವರಮಾನ ತೆರಿಗೆ ಹಾಗೂ ಮಾರಾಟ ತೆರಿಗೆ ಅಧಿಕಾರಿಗಳಿಗೆ ನೀಡುವ ರೀತಿಯಲ್ಲಿ ಬ್ಯಾಂಕ್ ಅಧಿಕಾರಿಗಳಿಗೂ ಅಧಿಕಾರ ನೀಡಬೇಕು.

17. ಸರಳ ಸಮಾರಂಭಗಳನ್ನು ಏರ್ಪಡಿಸಿ ಸಾಲ ಸರಿಯಾಗಿ ಪಾವತಿ ಮಾಡಿದ ಜನರಿಗೆ ಪ್ರಶಸ್ತಿ ಪತ್ರವನ್ನೂ, ಸಣ್ಣಸಣ್ಣ ಕಾಣಿಕೆಗಳನ್ನೂ ನೀಡಿದರೆ ಸಾಲ ಸರಿಯಾಗಿ ಪಾವತಿ ಮಾಡಲು ಜನರಲ್ಲಿ ಉತ್ಸುಕತೆ ಮೂಡುತ್ತದೆ. ಇತ್ತೀಚೆಗೆ ಮೈಸೂರು ಬ್ಯಾಂಕಿನವರು ಹುಣಸೂರು ತಾಲ್ಲೂಕಿನಲ್ಲಿ ಕೈಗೊಂಡ 'ಆಸ್ತಿ ಸಂರಕ್ಷಣಾ ಯೋಜನೆ' ಯಶಸ್ವಿಯಾಯಿತೆಂದು ತಿಳಿದುಬಂದಿದೆ.

ಜನರಲ್ಲಿ ತಾವು ಯೋಜನೆಗಳನ್ನು ದುರುಪಯೋಗಪಡಿಸಿಕೊಳ್ಳದೆ ಸರಿಯಾಗಿ ಉಪಯೋಗಿಸಿಕೊಂಡು ಮುಂದೆ ಬರಬೇಕು, ಬ್ಯಾಂಕಿನ ಸಾಲವನ್ನು ತೀರಿಸಬೇಕು ಎಂಬ ಮನೋಭಾವ ಬರುವ ತನಕ ಬ್ಯಾಂಕಿನವರು ಬಾಕಿ ವಸೂಲಿಗಾಗಿ ಯಾವುದೇ ತಂತ್ರವ್ಯೂಹಗಳನ್ನು ರಚಿಸಿದರೂ, ಅದು ಪ್ರಯತ್ನವಾಗುತ್ತದೆಯೇ ವಿನಾ ಸಂಪೂರ್ಣ ಸಫಲತೆ ಸಾಧ್ಯವಿಲ್ಲ.



# ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಮತ್ತು ಬ್ಯಾಂಕುಗಳು

ರ. ಲಕ್ಷ್ಮೀನಾರಾಯಣ

ಸ್ವಾತಂತ್ರ್ಯಪೂರ್ವದಿಂದಲೂ ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿಯನ್ನು ಕುರಿತ ಚಿಂತನೆ ನಡೆಯುತ್ತಲೇ ಇದೆ. ಭಾರತ ಬಡದೇಶವಾಗಿರುವುದೂ ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇಕಡ 80ರಷ್ಟು ಜನರು ಗ್ರಾಮಪ್ರದೇಶದಲ್ಲೇ ವಾಸವಾಗಿರುವುದೂ ಮುಖ್ಯವಾಗಿ ಕೃಷಿಯನ್ನೇ ಅವಲಂಬಿಸಿರುವುದೂ ಇದಕ್ಕೆ ಮುಖ್ಯ ಕಾರಣ. ದೇಶದ ಇವತ್ತಿನ ಒಟ್ಟು ವರಮಾನದಲ್ಲಿ ಶೇ. 50ರಷ್ಟು ಬರುವುದು ಕೃಷಿಯಿಂದಲೇ. ಸಾತಂತ್ರ್ಯಪೂರ್ವದಲ್ಲಿ ಹಾಕಿಕೊಂಡ ಕೆಲವು ಯೋಜನೆಗಳೆಂದರೆ ಮಾರ್ತಾಂಡ ಯೋಜನೆ (1921), ಗ್ರಾಮೀಣ ಪುನರ್ ನಿರ್ಮಾಣ ಯೋಜನೆ (1932), ಫಿರ್ಕಾ ಅಭಿವೃದ್ಧಿ ಯೋಜನೆ (1946).

ಸ್ವಾತಂತ್ರ್ಯ ಬಂದ ಮೇಲೆ ಗ್ರಾಮೀಣ ಅಭಿವೃದ್ಧಿಗೆ ಹೆಚ್ಚಿನ ಮಹತ್ವ ದೊರಕಿತು. ರಾಷ್ಟ್ರೀಯ ವಿಸ್ತರಣ ಯೋಜನೆ 1952ರಲ್ಲಿ ಜಾರಿಗೆ ಬಂತು. ಅನಂತರ 1960–61ರಲ್ಲಿ ಜಿಲ್ಲಾ ಸಾಂದ್ರ ಕೃಷಿ ಯೋಜನೆ ಜಾರಿಗೆ ಬಂತು. ಅನಂತರ ಬಂದ ಯೋಜನೆಗಳೆಂದರೆ ಸಣ್ಣ ರೈತರ ಅಭಿವೃದ್ಧಿ ಯೋಜನೆ, ಸಣ್ಣ ರೈತರ ಮತ್ತು ಕೃಷಿ ಕಾರ್ಮಿಕರ ಅಭಿವೃದ್ಧಿ ಯೋಜನೆ, ಅಭಾವ ಪರಿಹಾರ ಯೋಜನೆ (ಡಿ.ಪಿ.ಎ.ಪಿ). ಈ ಎಲ್ಲ ಯೋಜನೆಗಳ ಗುರಿಯೂ ಗ್ರಾಮೀಣ ಅಭಿವೃದ್ಧಿಯೇ ಆಗಿದ್ದು ಕೆಲವು ಯೋಜನೆಗಳು ತಮ್ಮ ಗುರಿಯನ್ನು ಸಾಧಿಸುವಲ್ಲಿ ಸ್ವಲ್ಪಮಟ್ಟಿಗೆ ಸಫಲವಾಗಿದೆ.

ಈ ಎಲ್ಲ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದಾಗ್ಯೂ ದೇಶದಲ್ಲಿ ಬಡತನ ಕಡಿಮೆಯಾಗಿಲ್ಲ. ಇದಕ್ಕೆ ಮೂಲ ಕಾರಣವನ್ನು ಹುಡುಕುವುದು ಅತ್ಯಗತ್ಯ. ದೇಶದಲ್ಲಿ ಇರುವ ಒಟ್ಟು ಆರು ಲಕ್ಷ ಗ್ರಾಮಗಳಲ್ಲಿ ವಾಸವಾಗಿರುವ ಶೇ. 80ರಷ್ಟು ಜನರ ಹಿಡುವಳಿಯ ವಿವರಗಳು ಹೀಗಿವೆ :

| ಹಿಡುವಳಿಯ ಗಾತ್ರ | ಒಟ್ಟು ಹಿಡುವಳಿ | ಒಟ್ಟು ಹಿಡುವಳಿಯಲ್ಲಿ ಶೇಕಡಾವಾರು |
|---|---|---|
| 1 ಹೆಕ್ಟೇರಿಗಿಂತ ಕಡಿಮೆ | 44·53 | 54·6 |
| 1–2 ಹೆಕ್ಟೇರು | 14·70 | 18 |
| | 59·23 | 72·6 |

ಅಂದರೆ ಸೇ. 72.6ರಷ್ಟು ಹಳ್ಳಿಗರು 1–2 ಹೆಕ್ಟೇರಿನಷ್ಟು ಜಮೀನು ಹೊಂದಿರುತ್ತಾರೆ. ಇವರೆಲ್ಲರೂ ಹೆಚ್ಚಾಗಿ ಕೃಷಿಗಾಗಿ ಮಳೆಯನ್ನೇ ಅವಲಂಬಿಸಿರುತ್ತಾರೆ. ಬಡತನ ಒಂದು ದುಷ್ಟಚಕ್ರ. ಅದನ್ನು ಈ ರೀತಿ ತೋರಿಸಬಹುದು :

ಬಂಡವಾಳ ರೂಪಣೆಯ ಕೆಳಮಟ್ಟ
ಕಡಿಮೆ ಉಳಿತಾಯ
ಕಡಿಮೆ ಉತ್ಪಾದಕತೆ
ಕಡಿಮೆ ವರಮಾನ
ಕಡಿಮೆ ಉತ್ಪಾದನೆ

ಈ ಚಿತ್ರವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಬಡತನ ಭಾರತೀಯ ಗ್ರಾಮಸ್ಥನ ಬೆನ್ನಿಗೆ ಅಂಟಿಕೊಂಡೇ ಇರುವುದು ಗೊತ್ತಾಗುತ್ತದೆ. ಈ ಯಾವ ಒಂದು ಹಂತದಲ್ಲಾದರೂ ಭೇದಿಸಿದರೆ ಮಾತ್ರ ಬಡತನವನ್ನು ಹೋಗಲಾಡಿಸಲು ಸಾಧ್ಯ. ಈ ದೃಷ್ಟಿಯಿಂದ ಭಾರತ ಸರ್ಕಾರ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ನು ಕಾರ್ಯರೂಪಕ್ಕೆ ತಂದಿದೆ. ಈ ಯೋಜನೆಯನ್ನು ಅಳವಡಿಸುವಲ್ಲಿ ಬ್ಯಾಂಕುಗಳು ಮಹತ್ತರ ಪಾತ್ರ ವಹಿಸಬೇಕಾಗಿದೆ.

### ಯೋಜನೆಯ ಗುರಿ, ವ್ಯಾಪ್ತಿ

1980ರ ಅಕ್ಟೋಬರ್ 2ರಂದು ಮಹಾತ್ಮಾ ಗಾಂಧೀಜಿಯವರ ಹುಟ್ಟುಹಬ್ಬದಂದು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಜಾರಿಗೆ ಬಂದಿತು. ಐದು ವರ್ಷಗಳ ಈ ಯೋಜನೆ 1980–1985ರ ವರೆಗೆ ಜಾರಿಯಲ್ಲಿರುತ್ತದೆ. ಈ ಐದು ವರ್ಷಗಳ ಅವಧಿಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಗುರುತಿಸಲ್ಪಟ್ಟ 15 ದಶಲಕ್ಷ ಬಡವರಲ್ಲಿ ಬಡ ಕುಟುಂಬಗಳನ್ನು ಆರ್ಥಿಕ, ತಾಂತ್ರಿಕ ಮತ್ತು ಇತರ ಸಹಾಯದಿಂದ ಬಡತನದ ರೇಖೆಯಿಂದ ಮೇಲೆ ತರುವುದೇ ಮುಖ್ಯ ಗುರಿ. ದೇಶದಲ್ಲಿನ ಒಟ್ಟು 5,011 ಬ್ಲಾಕ್‌ಗಳೆಲ್ಲವೂ ಈ ಯೋಜನೆಯ ವ್ಯಾಪ್ತಿಯಲ್ಲಿವೆ.

ಬಡವರಲ್ಲಿ ಬಡವರೆಂದರೆ, ಒಂದು ಕುಟುಂಬದಲ್ಲಿ ಸರಾಸರಿ ಐದು ಮಂದಿ ದುಡಿಯುವ ವ್ಯಕ್ತಿಗಳಿದ್ದು ಅವರ ಮಾಸಿಕ ವರಮಾನ ತಲಾ ರೂ. 76 ಇದ್ದು ಕುಟುಂಬದ ಒಟ್ಟು ವಾರ್ಷಿಕ ವರಮಾನ ರೂ. 4,560 ಇರುವಂತಹ ಕುಟುಂಬಗಳನ್ನು ಸರಕಾರದವರು ಗುರುತಿಸಿ ಅವರಿಗೆ ಯೋಗ್ಯವಾದ ಕಸುಬಿಗೆ, ಅಂದರೆ ಕೃಷಿ ಪಶು ಸಂಗೋಪನೆ, ಸಣ್ಣ ವ್ಯಾಪಾರ, ಸಣ್ಣ ಕೈಗಾರಿಕೆ, ಇತ್ಯಾದಿ ಯೋಜನೆಗಳಿಗೆ, ಬ್ಯಾಂಕಿನಿಂದ ಆರ್ಥಿಕ ಸಹಾಯ ಒದಗಿಸಿಕೊಡುವುದು ಮತ್ತು

ಸರ್ಕಾರದಿಂದ ಒದಗುವ ಸಹಾಯಧನವನ್ನು ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯಿಂದ ಪ್ರಯೋಜನದಾರರಿಗೆ ಕೊಡಿಸುವುದು.

**ಬ್ಯಾಂಕುಗಳ ಪಾತ್ರ**

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಅಭ್ಯುದಯದ ಬುನಾದಿ ಬ್ಯಾಂಕುಗಳು. ಯೋಜನೆ ಸಾಫಲ್ಯವನ್ನು ಹೊಂದಬೇಕಾದರೆ ಬ್ಯಾಂಕುಗಳ ಪಾತ್ರ ಪವಿತ್ರವಾದದ್ದು ಮತ್ತು ಮಹತ್ವವಾದದ್ದು. ಪ್ರಾರಂಭದಲ್ಲಿ ಯೋಜನೆಯನ್ನು ಅಳವಡಿಸಿಕೊಳ್ಳುವಲ್ಲಿ ಬ್ಯಾಂಕುಗಳು ಬಹಳ ಹಿಂಜರಿದರೂ ಇತ್ತೀಚಿನ ಒತ್ತಡಕ್ಕೂ ಪ್ರಸ್ತುತ ಪರಿಸ್ಥಿತಿಗೂ ಒಗ್ಗಿಕೊಂಡಿವೆ. ಎಲ್ಲಾ ಬ್ಯಾಂಕುಗಳು ಅಲ್ಲದಿದ್ದರೂ ಕೆಲವು ಪ್ರಮುಖ ಬ್ಯಾಂಕುಗಳು ಪ್ರಶಂಸನೀಯವಾದ ರೀತಿಯಲ್ಲಿ ಭಾಗವಹಿಸುತ್ತಿರುವುದು ಶ್ಲಾಘನೀಯ.

ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಬ್ಯಾಂಕುಗಳು ಮುಖ್ಯವಾಗಿದ್ದರೂ, ಕೇವಲ ಬ್ಯಾಂಕುಗಳಿಂದಲೇ ಎಲ್ಲಾ ಸಾಧಿಸಬಹುದೆಂದು ತಿಳಿಯುವುದು ತಪ್ಪು. ಈ ದಿಶೆಯಲ್ಲಿ ಬ್ಯಾಂಕುಗಳಲ್ಲದೆ ಸರ್ಕಾರದ ವಿವಿಧ ಇಲಾಖೆಗಳ—ರೆವಿನ್ಯೂ, ಪಶುಸಂಗೋಪನೆ, ಕೃಷಿ, ಭೂಜಲ ವಿಭಾಗ, ತೋಟಗಾರಿಕೆ, ಲೋಕೋಪಯೋಗಿ ಇಲಾಖೆ, ನೀರಾವರಿ ಇಲಾಖೆ, ಕ್ಷೇತ್ರಾಭಿವೃದ್ಧಿ ಸಂಸ್ಥೆ, ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಇತ್ಯಾದಿ ಇಲಾಖೆಗಳ—ಪಾತ್ರವೂ ಬ್ಯಾಂಕಿನಷ್ಟೇ ಮುಖ್ಯ. ಅಲ್ಲದೆ ಕೇವಲ ಬ್ಯಾಂಕುಗಳೇ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಸಾಧಿಸುವುವು ಮತ್ತು ಬ್ಯಾಂಕಿನ ಸಾಲದಿಂದಷ್ಟೆ ಗ್ರಾಮೀಣ ಅಭಿವೃದ್ಧಿ ಸಾಧ್ಯ ಎನ್ನುವುದು ಕಲ್ಪನೆ. ಅಂತಹ ಯೋಜನೆ ವಿಫಲವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಗ್ರಾಮೀಣ ಪ್ರದೇಶದ ಸರ್ವತೋಮುಖ ಅಭಿವೃದ್ಧಿ ಕೇವಲ ಸಾಲ ಕೊಡುವುದರಿಂದ ಆಗುವುದಿಲ್ಲ, ಸಾಲದ ಜೊತೆಗೆ ಅಧೋರಚನೆಯನ್ನೂ (ಇನ್‌ಫ್ರಾಸ್ಟ್ರಕ್ಚರ್) ಒದಗಿಸಿಕೊಡಬೇಕು.

ಯೋಜನೆಯನ್ನು ಕಾರ್ಯರೂಪಕ್ಕೆ ತರುವಲ್ಲಿ ಬ್ಯಾಂಕುಗಳು ಜವಾಬ್ದಾರಿ ಹೊಂದಿವೆ. ಅರ್ಜಿದಾರರನ್ನು ಗುರುತಿಸುವುದರಿಂದ ಹಿಡಿದು ಯೋಜನೆಯ ಒಟ್ಟು ಆವಶ್ಯಕತೆಯನ್ನು ಪೂರೈಸುವ ಮತ್ತು ಉತ್ಪನ್ನಕ್ಕೆ (ಪ್ರಾಡ್ಯೂಸ್) ಮಾರುಕಟ್ಟೆಯನ್ನು ಒದಗಿಸುವ ವರೆಗೆ ಎಲ್ಲಾ ಹಂತಗಳಲ್ಲಿಯೂ ಸೂಕ್ಷ್ಮವಾಗಿ ಯೋಜಿಸಬೇಕು. ಯಾವುದೇ ಹಂತದಲ್ಲಿ ಆಯ ತಪ್ಪಿದರೂ ಯೋಜನೆ ವಿಫಲವಾಗುತ್ತದೆ ಎಂಬುದರಲ್ಲಿ ಯಾವುದೇ ಸಂದೇಹವೂ ಇಲ್ಲ.

**ಬ್ಯಾಂಕಿನ ಸಾಲಕ್ಕೆ ಆಧಾರ**

ಯೋಜನೆಯ ವಿವಿಧೋದ್ದೇಶಗಳಿಗೆ ಬ್ಯಾಂಕಿನಿಂದ ಒದಗಿಸುವ ಆರ್ಥಿಕ ಸಹಾಯಕ್ಕೆ ರೂ. 5,000ದ ವರೆಗೆ ಯಾವ ಆಧಾರವನ್ನಾಗಲಿ ಜಾಮೀನನ್ನಾಗಲಿ ತೆಗೆದುಕೊಳ್ಳಬಾರದು. ಸಾಲದಿಂದ ಒದಗಿಸಿಕೊಡುವ ವಸ್ತುವನ್ನೇ ಪ್ರಾಥಮಿಕ ಆಧಾರವಾಗಿ ತೆಗೆದುಕೊಂಡು ಸಾಲವನ್ನು ಮಂಜೂರು ಮಾಡಬೇಕು.

**ಶೇತ**

ಯೋಜನೆಯಲ್ಲಿ ಒದಗಿಸುವ ಆರ್ಥಿಕ ಸೌಲಭ್ಯಕ್ಕೆ ಶೇತವನ್ನೂ ಹಾಕಿಸಲು ಪ್ರಯತ್ನಿಸಬಾರದು. ಸರ್ಕಾರದಿಂದ ಒದಗುವ ಸಹಾಯಧನವನ್ನೇ ಶೇತವಾಗಿ ತೆಗೆದುಕೊಳ್ಳಬೇಕು.

**ಮರುಪಾವತಿ**

ಇದು ಯೋಜನೆಯ ಇನ್ನೊಂದು ಕಡೆಯ ಮುಖ್ಯವಾದ ಅಂಶ. ಯೋಜನೆಯನ್ನು ಕಾರ್ಯರೂಪಕ್ಕೆ ತರುವಲ್ಲಿ ಈ ಹಿಂದೆ ಹೇಳಿದ ಎಲ್ಲಾ ಅಂಶಗಳನ್ನೂ ಸರಿಯಾಗಿ ರಚಿಸಿದಲ್ಲಿ ಮಾತ್ರ ಬ್ಯಾಂಕಿನ ಸಾಲಗಳು ಮರುಪಾವತಿಯಾಗುತ್ತವೆ. ಅಲ್ಲದೆ ಪ್ರಯೋಜನದಾರರಿಗೆ ಯೋಜನೆಯಿಂದ ಉತ್ಪನ್ನದ ಹೆಚ್ಚಳವೆಷ್ಟು ಎಂಬುದನ್ನು ಗಮನದಲ್ಲಿಟ್ಟುಕೊಂಡು ಸೂಕ್ತವಾದ ಹಾಗೂ ಸರಳವಾದ ಕಂತುಗಳನ್ನು ನಿಗದಿಪಡಿಸಬೇಕು. ಇಷ್ಟಲ್ಲದೆ, ಯೋಜನೆಯ ಎಲ್ಲಾ ಹಂತಗಳಲ್ಲಿಯೂ ಬ್ಯಾಂಕಿನ ಮತ್ತು ಇತರ ಇಲಾಖೆಗಳ ಉಸ್ತುವಾರಿಯನ್ನೂ ಮಾಡಿ ಸೂಕ್ತವಾದ ಸಲಹೆಗಳನ್ನೂ ಮಾಹಿತಿಗಳನ್ನೂ ಪ್ರಯೋಜನದಾರರಿಗೆ ಒದಗಿಸಿಕೊಡಬೇಕು. ಇದರಿಂದ ಬ್ಯಾಂಕಿನ ಮತ್ತು ಪ್ರಯೋಜನದಾರನ ಸಂಬಂಧ ಬಲವಾಗುತ್ತದೆ ಮತ್ತು ಮರುಪಾವತಿ ಸರಳವಾಗುತ್ತದೆ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಒಂದು ರಾಷ್ಟ್ರೀಯ ಯೋಜನೆ. ಗ್ರಾಮೀಣ ಪ್ರದೇಶಗಳ ಸರ್ವತೋಮುಖ ಅಭಿವೃದ್ಧಿ ಇದರ ಮುಖ್ಯ ಗುರಿ. ಇದರಿಂದ ಎಷ್ಟೋ ಜನರು ಬಡತನದ ರೇಖೆಯನ್ನು ದಾಟಿ ಮೇಲೆ ಬರಲು ಸಾಧ್ಯವಿದೆ. ಬ್ಯಾಂಕುಗಳು ಹೆಚ್ಚಿನ ಜವಾಬ್ದಾರಿಯನ್ನು ವಹಿಸಿ ಯೋಜನೆಯಲ್ಲಿ ಸಕ್ರಿಯವಾಗಿ ಪಾತ್ರ ವಹಿಸಬೇಕು ಮತ್ತು ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಆರ್ಥಿಕ ಸಹಾಯವನ್ನು ವಿಸ್ತರಿಸಿದಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಸಫಲವಾಗುವುದು.



## ವಿಫಲ ಸಾಹಸ

ದುರ್ಬಲ ವರ್ಗಗಳಿಗೆ ಸಾಲ ನೀಡಿಕೆ ಎಂಬುದು, ಉತ್ತರೋತ್ತರದಲ್ಲಿ ವಜಾ ಮಾಡಲಾಗುವಂಥ ಸಾಲಗಳ ರೂಪದಲ್ಲಿ ಹಣದ ವರ್ಗಾವಣೆ ಮಾಡುವ ಸರಳ ಸಾಧನ ಆಗಬಾರದು. ಇದು ತುಂಬ ಅವಿವೇಕದ ಕೆಲಸ. ಬ್ಯಾಂಕುಗಳ ನಿರಂತರತೆ, ಜೀವಂತಿಕೆ, ಸಾರ್ವಜನಿಕ ನೈತಿಕತೆ ಇವೆಲ್ಲದರ ಮೇಲೂ ಇದರಿಂದಾಗುವ ಪರಿಣಾಮ ಬಲು ತೀವ್ರ. ಇದನ್ನು ತಡೆಯದಿದ್ದರೆ ಅಂತಿಮವಾಗಿ ಕರಾರಿನ ಬದ್ಧತೆಯ ಪ್ರಶ್ನೆಯೇ ಮಸುಕಾಗಿಬಿಡುತ್ತದೆ. ಇಡೀ ವಾಣಿಜ್ಯ ಚಟುವಟಿಕೆಯೇ ಕ್ರಮೇಣ ಕಷ್ಟತರವಾಗುತ್ತ ಹೋಗುತ್ತದೆ, ಕೊನೆಗೆ ಅಸಾಧ್ಯವೇ ಆಗುತ್ತದೆ. ದುರ್ಬಲ ವರ್ಗಗಳಿಗೆ ಉದರಿಯನ್ನು ಹೆಚ್ಚು ಹೆಚ್ಚಾಗಿ ಹಂಚುವುದರ ಜೊತೆಜೊತೆಗೇ ಅವುಗಳ ಉತ್ಪಾದಕತೆ ಹಾಗೂ ವರವಮಾನಗಳೂ ಅಧಿಕವಾಗುವಂತೆ ಆದಾಗಲೇ ಪುನರ್ವಿತರಣಾ ಸಾಧನವಾಗಿ ಉದರಿಗೆ ಸಿಂಧುತ್ವ ಪ್ರಾಪ್ತವಾಗುತ್ತದೆ ಎಂಬುದು ಸ್ಪಷ್ಟ. ಈ ದೃಷ್ಟಿಯಿಂದ ನೋಡಿದಾಗ ಉದರಿ ನೀಡಿಕೆಯಷ್ಟೇ ಸಾಲದು. ಅದು ವಿಫಲವೇ ಆಗಿ ಪರಿಣಮಿಸಿದೆ.

—ಸುಧಾಂಶು ರಾನಡೆ

# ಜಿಲ್ಲಾ ಕೈಗಾರಿಕಾ ಕೇಂದ್ರ

ಶ್ರೀಧರ್ ರಾಯಸಂ

ಸಣ್ಣ ಹಾಗೂ ಗ್ರಾಮೀಣ ಉದ್ಯಮಗಳ ಅಭಿವೃದ್ಧಿಗೆ ಸರಕಾರ ಹೊಸ ನೀತಿಯನ್ನು ರೂಪಿಸಿ ಕೈಗಾರಿಕಾ ಕ್ರಾಂತಿಯ ಸಾಧನೆಗೆ ಅವಕಾಶಮಾಡಿಕೊಡುವ ಜಿಲ್ಲಾ ಕೈಗಾರಿಕಾ ಕೇಂದ್ರಗಳನ್ನು 1977ರಲ್ಲಿ ಸ್ಥಾಪಿಸಿತು. ವಿವಿಧ ಪ್ರದೇಶಗಳಲ್ಲಿ ಕೈಗಾರಿಕಾ ಅಸಮಾನತೆಯನ್ನು ತೊಡೆದುಹಾಕಲು ಮತ್ತು ಹೊಸ ಕೈಗಾರಿಕಾ ಕೇಂದ್ರಗಳನ್ನು ನಿರ್ಮಾಣಮಾಡಲು ಹಾಗೂ ಹಾಲಿ ಇರುವ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸಲು ಎಲ್ಲಾ ಹಣ ಸಹಾಯವನ್ನು, ಮಾಹಿತಿಯನ್ನು ನೀಡುವ ಉದ್ದೇಶದಿಂದ ಈ ಕೇಂದ್ರಗಳು ಸ್ಥಾಪಿತವಾದುವು. ಪ್ರಮುಖವಾಗಿ ವಿವಿಧ ವರ್ಗಗಳ ಜನತೆಯ ನಡುವೆ ಅಸಮಾನತೆ ತೊಡೆದುಹಾಕುವುದು ಹಾಗೂ ನಿರುದ್ಯೋಗಿ ವಿದ್ಯಾವಂತ ಯುವಕರಿಗೆ ಸ್ವಾವಲಂಬನೆಯ ಮೂಲಕ ಬದುಕನ್ನು ಹಸನಾಗಿಸಿಕೊಳ್ಳುವ ಪ್ರಯತ್ನಕ್ಕೆ ಪೂರಕವಾಗಿ ಧನಸಹಾಯ, ಮಾರ್ಗದರ್ಶನ, ನಿವೇಶನ, ವಿದ್ಯುಚ್ಛಕ್ತಿ, ಕಟ್ಟಡದ ವ್ಯವಸ್ಥೆ, ಕಚ್ಚಾ ಸಾಮಗ್ರಿ ಸೌಲಭ್ಯ, ಉತ್ಪಾದನೆಯಾದ ವಸ್ತುಗಳ ಮಾರಾಟ ಮುಂತಾದ ರೀತಿಯ ಸಹಾಯ ನೀಡುವುದು ಜಿಲ್ಲಾ ಕೈಗಾರಿಕಾ ಕೇಂದ್ರದ ಧ್ಯೇಯೋದ್ದೇಶ. ಸರ್ಕಾರ ಈ ಹೊಸ ನೀತಿಯನ್ನು ಜಾರಿಗೆ ತರುವ ಮೊದಲು ಗ್ರಾಮೀಣ ಕೈಗಾರಿಕೆಗಳ ಯೋಜನೆಯ ಅಡಿಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಸೀಮಿತ ಪ್ರಮಾಣದಲ್ಲಿ ಹಣ ಸಹಾಯ ನೀಡುತ್ತಿತ್ತು. ಕೇವಲ 5,000 ಜನಸಂಖ್ಯೆಯ ಗ್ರಾಮದಲ್ಲಿ ಗುಡಿ ಕೈಗಾರಿಕೆಗೆ, ಕೃಷೀತರ ಉಪಕರಣಗಳ ತಯಾರಿಕೆಗೆ ಹಣ ಸಹಾಯ ದೊರಕುತ್ತಿತ್ತು. ಆದರೆ ಈ ಹೊಸ ನೀತಿಯಿಂದ ಅತಿ ಹೆಚ್ಚಿನ ಜನರಿಗೆ ಹಣದ ನೆರವು ದೊರಕುವುದಲ್ಲದೆ ನಿರುದ್ಯೋಗವನ್ನು ನಿವಾರಿಸಲು ಇದು ಸಹಾಯಕವಾಗಿದೆ.

ಜಿಲ್ಲಾ ಕೈಗಾರಿಕಾ ಕೇಂದ್ರಗಳು ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯ ಹತೋಟಿಗೆ ಒಳಪಟ್ಟು ಕಾರ್ಯವನ್ನು ನಡೆಸುತ್ತವೆ. ಆದರೂ ಧನಸಹಾಯ ಮಾಡುವುದರಲ್ಲಿ, ಮಾರ್ಗದರ್ಶನ ನೀಡುವುದರಲ್ಲಿ, ನಿರುದ್ಯೋಗಿ ವಿದ್ಯಾವಂತ ಯುವಕರ ಹೆಸರುಗಳನ್ನು ಸಾಲಕ್ಕಾಗಿ ಬ್ಯಾಂಕುಗಳಿಗೆ ಶಿಫಾರಸು ಮಾಡುವುದರಲ್ಲಿ ಈ ಕೇಂದ್ರಗಳು ಸಂಪೂರ್ಣ ಸ್ವಾಯತ್ತತೆ ಪಡೆದಿವೆ. ಜಿಲ್ಲಾ ಕೈಗಾರಿಕಾ ಕೇಂದ್ರಗಳಿಗೆ ಯಾವ ವಿದೇಶಿ ಹಣದ ನೆರವೂ ದೊರಕುವುದಿಲ್ಲ. ಕೈಗಾರಿಕಾ ತರಬೇತಿ ಕೇಂದ್ರದಲ್ಲಿ ತರಬೇತಿ ಪಡೆದ ಯುವಕರು ಸ್ವಯಂ ಉದ್ಯೋಗ ಅಥವಾ ಕೈಗಾರಿಕೆಗಳನ್ನು ಹೊಸದಾಗಿ ಸ್ಥಾಪಿಸುವ ಸಂದರ್ಭದಲ್ಲಿ ಜಿಲ್ಲಾ ಕೈಗಾರಿಕಾ ಕೇಂದ್ರಗಳು ಅವರಿಗೆ ಅನೇಕ ವೇಳೆ ಪುನಃ ತರಬೇತಿ ನೀಡುವುವು. ಗುಜರಾತ್ ಮತ್ತು ಪಂಜಾಬ್ ರಾಜ್ಯಗಳಲ್ಲಿ ಜಿಲ್ಲಾ ಕೈಗಾರಿಕಾ ಕೇಂದ್ರಗಳು ಬಹಳ ಮಟ್ಟಿನ ಮುನ್ನಡೆ ಸಾಧಿಸಿವೆ.

ಜಿಲ್ಲಾ ಕೈಗಾರಿಕಾ ಕೇಂದ್ರಗಳು ಜಿಲ್ಲೆಯಲ್ಲಿ ಕಾರ್ಯೋನ್ಮುಖವಾಗುವುದಲ್ಲದೆ ತಾಲ್ಲೂಕು ಮಟ್ಟದಲ್ಲೂ ಕೆಲಸ ಮಾಡುತ್ತವೆ. ಕೈಗಾರಿಕಾ ವಿಭಾಗಾಧಿಕಾರಿಯವರಿಂದ ಸಾಲ ಸೌಲಭ್ಯಗಳು ಗುಡಿ ಕೈಗಾರಿಕೆಗಳಿಗೆ, ಕುಶಲಕರ್ಮಿಗಳಿಗೆ, ವ್ಯವಸಾಯದ ಉಪಕರಣಗಳಿಗೆ ದೊರಕುವುವು. ಜಿಲ್ಲಾ ಕೈಗಾರಿಕಾ ಕೇಂದ್ರದ ಮಹಾಕಾರ್ಯನಿರ್ವಾಹಕರ ನೇತೃತ್ವದಲ್ಲಿ ವಿವಿಧ ಕ್ಷೇತ್ರಗಳಲ್ಲಿ ನುರಿತ ಕಾರ್ಯನಿರ್ವಾಹಕರು ಕಾರ್ಯಪ್ರವೃತ್ತರಾಗುತ್ತಾರೆ.

ಶ್ರೀಧರ್ ರಾಯಸಂ, ಮೈಸೂರು ಬ್ಯಾಂಕ್, ಬಳ್ಳಾರಿ

### ವಲಯಗಳು

ಕೈಗಾರಿಕಾ ಬೆಳವಣಿಗೆಗಾಗಿ ರಾಜ್ಯವನ್ನು ನಾಲ್ಕು ವಲಯಗಳನ್ನಾಗಿ ವಿಂಗಡಿಸಲಾಗಿದೆ :

ಮೊದಲನೆಯ ವಲಯ : ಹೆಚ್ಚು ಕೈಗಾರಿಕೆ ಅಭಿವೃದ್ಧಿ ಹೊಂದಿರುವ ಪ್ರದೇಶ.

ಎರಡನೆಯ ವಲಯ ; ಕೈಗಾರಿಕೆಯಲ್ಲಿ ಕಡಿಮೆ ಅಭಿವೃದ್ಧಿ ಹೊಂದಿರುವ ಪ್ರದೇಶ.

ಮೂರನೆಯ ವಲಯ : ಕೈಗಾರಿಕಾ ಬೆಳವಣಿಗೆಗಾಗಿ ರಾಜ್ಯ ಸರ್ಕಾರ ಗುರುತಿಸಿರುವ ಪ್ರದೇಶಗಳು.

ನಾಲ್ಕನೆಯ ವಲಯ : ಕೈಗಾರಿಕೆಯಲ್ಲಿ ಹಿಂದುಳಿದ ಪ್ರದೇಶಗಳೆಂದು ಕೇಂದ್ರ ಸರ್ಕಾರ ಘೋಷಿಸಿರುವ ಪ್ರದೇಶಗಳು.

ಮೊದಲನೆಯ ವಲಯದಲ್ಲಿ ಕೈಗಾರಿಕೆಗಳು ಹೆಚ್ಚು ಅಭಿವೃದ್ಧಿ ಹೊಂದಿರುವುದರಿಂದ ಅಲ್ಲಿ ಸ್ಥಾಪಿಸುವ ಕೈಗಾರಿಕೆಗಳಿಗೆ ಸರಕಾರದಿಂದ ಯಾವ ಸಹಾಯಧನವೂ ದೊರೆಯುವುದಿಲ್ಲ.

ಎರಡನೆಯ ವಲಯಕ್ಕೆ ಸೇರಿದ ತಾಲ್ಲೂಕುಗಳಲ್ಲಿ ಹೂಡಿದ ಸ್ಥಿರ ಬಂಡವಾಳದ ಮೇಲೆ ಸೇ. 10ರಷ್ಟು ಸಹಾಯಧನ ದೊರೆಯುವುದು.

ಮೂರನೆಯ ವಲಯಕ್ಕೆ ಸೇರಿದ ತಾಲ್ಲೂಕುಗಳಲ್ಲಿ ಹೂಡಿದ ಸ್ಥಿರ ಬಂಡವಾಳದ ಮೇಲೆ ಸೇ. 15ರಷ್ಟು ಸಹಾಯಧನ ದೊರೆಯುತ್ತದೆ.

ನಾಲ್ಕನೆಯ ವಲಯದಲ್ಲಿ, ಎಂದರೆ ಕೇಂದ್ರ ಸರ್ಕಾರ ಸಹಾಯಧನಕ್ಕಾಗಿ ಗುರುತಿಸಿರುವ ಹಿಂದುಳಿದ ಪ್ರದೇಶಗಳಲ್ಲಿ ಸ್ಥಿರಾಸ್ತಿಯ ಮೇಲೆ ಸೇ. 15ರಷ್ಟು ನೆರವು ನೀಡಲಾಗುವುದು.

### ಕೈಗಾರಿಕೆಗಳ ವರ್ಗೀಕರಣ

ಕೈಗಾರಿಕೆಗಳನ್ನು ಈ ರೀತಿ ವಿಂಗಡಣೆ ಮಾಡಲಾಗುತ್ತದೆ : (i) ಅತಿ ಚಿಕ್ಕ ಕೈಗಾರಿಕೆ, (ii) ಸಣ್ಣ ಕೈಗಾರಿಕೆ, (iii) ಮಧ್ಯಮ ಮತ್ತು ದೊಡ್ಡ ಕೈಗಾರಿಕೆ.

50,000 ಜನಸಂಖ್ಯೆಯನ್ನು ಹೊಂದಿರುವ ಪಟ್ಟಣ ಅಥವಾ ಗ್ರಾಮಾಂತರ ಪ್ರದೇಶದಲ್ಲಿ ರೂ. 2 ಲಕ್ಷಕ್ಕೆ ಮೀರದಂತೆ (ಯಂತ್ರೋಪಕರಣಗಳಲ್ಲಿ) ಬಂಡವಾಳ ಹೂಡಿ ಪ್ರಾರಂಭಿಸಿದ ಕೈಗಾರಿಕಾ ಘಟಕವನ್ನು ಅತಿ ಚಿಕ್ಕ ಕೈಗಾರಿಕೆ ಎಂದು ಕರೆಯಲಾಗಿದೆ. ರೂ. 2 ಲಕ್ಷದಿಂದ ರೂ. 20 ಲಕ್ಷದ ವರೆಗೆ ಯಂತ್ರೋಪಕರಣಗಳಲ್ಲಿ ಬಂಡವಾಳವನ್ನು ತೊಡಗಿಸಿ ಪ್ರಾರಂಭಿಸಿದ ಘಟಕ ಸಣ್ಣ ಕೈಗಾರಿಕೆ. ಯಂತ್ರೋಪಕರಣಗಳಲ್ಲಿ 25 ಲಕ್ಷ ರೂಪಾಯಿಗೂ

ಮೀರದಂತೆ ಬಂಡವಾಳ ಹೂಡಿ, ಉತ್ಪಾದಿಸಿದ ಸರಕು ಅಥವಾ ಒಟ್ಟು ಸೇವೆಯಲ್ಲಿ ಸೇ. 50ರಷ್ಟಕ್ಕೆ ಮೇಲ್ಪಟ್ಟು ಭಾಗವನ್ನು ಬೇರೆ ಕೈಗಾರಿಕೆಗೆ ಸರಬರಾಜು ಮಾಡಿದಲ್ಲಿ ಅದು ಪೂರೈಕೆಯ ಘಟಕವೆನಿಸುವುದು.

ಕೈಗಾರಿಕಾ ಕೇಂದ್ರಗಳಿಂದ ದೊರೆಯುವ ಸೌಲಭ್ಯಗಳು ಇವು :

1 ಅಂಗವಿಕಲರಿಗೆ ಕನಿಷ್ಠ ಬಡ್ಡಿದರದಲ್ಲಿ ಸಾಲ.
2 ರಾಜ್ಯ ಸರ್ಕಾರ ಚರ್ಮ ಅಭಿವೃದ್ಧಿ ನಿಗಮದಿಂದ ಚಮ್ಮಾರರಿಗೆ ರಸ್ತೆ ಬದಿಯ ಪೆಟ್ಟಿಗೆಗಳು ಮತ್ತು ಉಪಕರಣಗಳಿಗಾಗಿ ಸೇ. 60ರಷ್ಟು ಸಹಾಯಧನ ಒದಗಿಸುವುದು.
3 ಅತಿ ಸಣ್ಣ ಕೈಗಾರಿಕೆಯ ಸ್ಥಾಪನೆಗಾಗಿ ಪಡೆದ ಸಾಲದ ಮೇಲೆ ಬಡ್ಡಿಯಲ್ಲಿ ರಿಯಾಯತಿ ದೊರೆಯುವುದು.
4 ಅತಿ ಸಣ್ಣ ಕೈಗಾರಿಕೆಗೆ 5 ವರ್ಷಗಳ ವರೆಗೆ ವಾಣಿಜ್ಯ ತೆರಿಗೆ ವಿನಾಯಿತಿ ಇರುವುದು.
5 ಅತಿ ಸಣ್ಣ ಕೈಗಾರಿಕೆಗಳು ಭಾರತೀಯ ಮಾನಕ ಸಂಸ್ಥೆ ಮತ್ತು ಪ್ರವರ್ತನ ಮಂಡಲಿಯಲ್ಲಿ ನೊಂದಾಯಿಸಲು ತಗಲುವ ಖರ್ಚು ಕೊಡಲಾಗುವುದು.
6 ಹೊಸದಾಗಿ ಸ್ಥಾಪಿತವಾಗುವ ಅತಿ ಸಣ್ಣ, ಹಾಗೂ ಸಣ್ಣ ಕೈಗಾರಿಕೆಗಳಿಗೆ 3 ವರ್ಷಗಳ ವರೆಗೆ ವಿದ್ಯುಚ್ಛಕ್ತಿ ದರದ ಮೇಲೆ ರಿಯಾಯ್ತಿ ಮತ್ತು 3ರಿಂದ 5 ವರ್ಷಗಳ ವರೆಗೆ ತೆರಿಗೆ ರಿಯಾಯಿತಿ.
7 ಸಣ್ಣ ಕೈಗಾರಿಕೆಯ ವಿದ್ಯುಚ್ಛಕ್ತಿ ಉತ್ಪಾದನ ಯಂತ್ರಗಳನ್ನು ಕೊಳ್ಳಲು ಸಹಾಯಧನ.
8 ಕೈಗಾರಿಕೆಗಳು ತಂತ್ರಜ್ಞಾನ ಪಡೆಯಲು ಸಹಾಯಧನ.
9 ಸರ್ಕಾರದ ಕಛೇರಿಗಳೂ ಸರ್ಕಾರದ ಅಧೀನದಲ್ಲಿರುವ ಸಂಸ್ಥೆಗಳೂ ಸರಕುಗಳನ್ನು ಕೊಳ್ಳುವಾಗ ಅತಿ ಚಿಕ್ಕ ಹಾಗೂ ಸಣ್ಣ ಕೈಗಾರಿಕೆಗಳು ಉತ್ಪಾದಿಸಿದ ಸರಕುಗಳಿಗೆ ಆದ್ಯತೆ ನೀಡಲಾಗುವುದು.
10 ಹೊಸ ಕೈಗಾರಿಕೆಗಳು ಪಡೆಯುವ ಸಾಲದ ಮೇಲೆ ವಿಧಿಸುವ ಸ್ಟಾಂಪ್ ಶುಲ್ಕವನ್ನು ಮನ್ನಾ ಮಾಡಲಾಗುವುದು ಮತ್ತು ನೋಂದಣಿಗಾಗಿ ನೀಡುವ ದರದಲ್ಲಿ ರೂ. 1,000ಕ್ಕೆ ರೂ. 1ರಂತೆ ರಿಯಾಯಿತಿ ಕೊಡಲಾಗುವುದು.
11 ಕೈಗಾರಿಕೆಯನ್ನು ಸ್ಥಾಪಿಸುವ ಸಲುವಾಗಿ ಕೃಷಿ ಭೂಮಿಯನ್ನು ಕೃಷೀತರ ಭೂಮಿಯಾಗಿ ಪರಿವರ್ತಿಸಲು ಪರಿವರ್ತನಶುಲ್ಕದಲ್ಲಿ ರಿಯಾಯತಿ ನೀಡಲಾಗುವುದು.
12 ಸಣ್ಣ, ಮಧ್ಯಮ ಹಾಗೂ ದೊಡ್ಡ ಕೈಗಾರಿಕೆಗಳಿಗೆ ಬಡ್ಡಿರಹಿತ ದೀರ್ಘಾವಧಿ ಅಭಿವೃದ್ಧಿ ಸಾಲ ನೀಡಲಾಗುವುದು.
13 ಸಣ್ಣ, ಮಧ್ಯಮ ಮತ್ತು ದೊಡ್ಡ ಪ್ರಮಾಣದ ಕೈಗಾರಿಕೆಗಳಿಗೆ ಬಡ್ಡಿರಹಿತ ದುಡಿಯುವ ಬಂಡವಾಳ ಸಾಲವನ್ನು ನೀಡಲಾಗುವುದು.
14 ಕೈಗಾರಿಕೆಗಳು 3 ವರ್ಷಗಳೊಳಗೆ ತಮ್ಮ ಸಿಬ್ಬಂದಿ ವರ್ಗದವರಿಗೆ ವಾಸದ ಕಟ್ಟಡಗಳನ್ನು ನಿರ್ಮಿಸಿದಲ್ಲಿ ಅವರಿಗೂ ಸಹಾಯಧನ ದೊರೆಯುವುದು.
15 ನಾಲಾ ಮತ್ತು ನದಿಗಳಿಂದ ಉಪಯೋಗಿಸುವ ನೀರಿನ ಮೇಲೆ ವಿಧಿಸುವ ನೀರಿನ ದರವನ್ನು ಮೂರು ವರ್ಷಗಳ ಕಾಲ ಮನ್ನಾ ಮಾಡಲಾಗುವುದು.
16 ಸಣ್ಣ ಕೈಗಾರಿಕೆಗಳು ಯಂತ್ರಗಳ ಮಾದರಿಗಳನ್ನು ಆಮದು ಮಾಡಿಕೊಳ್ಳಲು ಆಗುವ ವೆಚ್ಚದಲ್ಲಿ ಸಹಾಯಧನ ದೊರೆಯುವುದು.
17 ಅನುಸೂಚಿತ ಜಾತಿ ಹಾಗೂ ಪಂಡಗಳವರಿಗೆ ಸುಲಭ ಬಡ್ಡಿದರದಲ್ಲಿ ಸಾಲ ನೀಡಲಾಗುವುದು.

**ನೆರವಿಗೆ ಒಳಪಡದ ಉದ್ಯಮಗಳು**

ಸರ್ಕಾರ ನೀಡುವ ರಿಯಾಯಿತಿ ಮತ್ತು ಪ್ರೋತ್ಸಾಹ ಕ್ರಮಗಳಿಗೆ ಒಳಪಡದ ಕೈಗಾರಿಕೆಗಳು ಇವು :

1 ಉರುಳೆ ಹಿಟ್ಟಿನ ಗಿರಣಿ (ರೋಲಿಂಗ್ ಮಿಲ್)
2 ಸ್ಥಾಯೀಕಾರಕ (ಸ್ಟೆಬಿಲೈಸರ್) ಹೊಂದಿರುವ ಗಿರಣಿಗಳನ್ನು ಬಿಟ್ಟು ಇತರ ಅಕ್ಕಿ ಗಿರಣಿ
3 ಮರದ ಪೀಠೋಪಕರಣಗಳ ಕೈಗಾರಿಕೆ
4 ಸಣ್ಣ ಉಕ್ಕಿನ ಕಾರ್ಖಾನೆ
5 ಕಬ್ಬಿಣದ ಹಾಳೆಗಳನ್ನು ತಯಾರಿಸುವ ಕಾರ್ಖಾನೆ
6 ಹತ್ತು ಕೋಟಿ ರೂಪಾಯಿಗಳಿಗೂ ಹೆಚ್ಚು ಬಂಡವಾಳದ ಭಾರೀ ಸಿಮೆಂಟ್ ಕಾರ್ಖಾನೆ
7 ಐದು ಕೋಟಿ ರೂಪಾಯಿಗಳಿಗೂ ಹೆಚ್ಚು ಬಂಡವಾಳದ ಭಾರೀ ಕಾಗದ ಕಾರ್ಖಾನೆ
8 ಗಣಿ ಕೈಗಾರಿಕೆ
9 ಸಕ್ಕರೆ ಕಾರ್ಖಾನೆ
10 ಖಂಡಸಾರಿ ಕಾರ್ಖಾನೆ
11 ಮದ್ಯ ತಯಾರಿಕೆ ಘಟಕ
12 ಮದ್ಯಸಾರ ಪಾನೀಯ ಘಟಕ
13 ಪ್ಲೈವುಡ್ ಕಾರ್ಖಾನೆ
14 ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಸ್ವಾಮ್ಯದ ಕಾರ್ಖಾನೆಗಳು.
15 ಸಾಮ್ಯ ಬಂಡವಾಳ ಅಥವಾ ಷೇರು ಬಂಡವಾಳದ ಸೇ. 25ಕ್ಕಿಂತ ಹೆಚ್ಚು ಭಾಗ ಸರ್ಕಾರದ್ದಾಗಿರುವ ಸಹಕಾರಿ ಉದ್ಯಮ.
16 ರೂ. 50 ಕೋಟಿಗೂ ಹೆಚ್ಚು ಬಂಡವಾಳದ ಯಾವುದೇ ಕೈಗಾರಿಕೆ.

**ಸಾಮರಸ್ಯ ಸಾಧನೆ**

ಬ್ಯಾಂಕುಗಳು ಮತ್ತು ಜಿಲ್ಲಾ ಕೈಗಾರಿಕಾ ಕೇಂದ್ರಗಳು ಒಂದೇ ನಾಣ್ಯದ ಎರಡು ಮುಖಗಳಂತೆ ಕಾರ್ಯಗಳನ್ನು ಹಮ್ಮಿಕೊಂಡು ನಿರುದ್ಯೋಗ ವಿದ್ಯಾವಂತ ಯುವಕರನ್ನು ಸ್ವಾವಲಂಬಿಗಳನ್ನಾಗಿ ಮಾಡಲು ಶ್ರಮಿಸುತ್ತಿವೆ. ರಾಷ್ಟ್ರದ ಆರ್ಥಿಕ ಮಟ್ಟ ಸುಧಾರಿಸುವುದಲ್ಲದೆ, ವಿದ್ಯಾವಂತ ಯುವಕರು ಸ್ವಯಂ ಉದ್ಯೋಗದಲ್ಲಿ ತೊಡಗಲು ಪೂರಕವಾಗಿ ಪರಸ್ಪರ ಸಾಮರಸ್ಯದಿಂದ ಬ್ಯಾಂಕ್ ಮತ್ತು ಜಿಲ್ಲಾ ಕೈಗಾರಿಕಾ ಕೇಂದ್ರಗಳು ಕೆಲಸಮಾಡುತ್ತಿವೆ. ವಿದ್ಯಾವಂತ ಯುವಕರು ಸರ್ಕಾರಿ ಕೆಲಸಗಳಿಗೆ ಕಾಯದೆ, ಸ್ವಶಕ್ತಿಯಿಂದ ಬದುಕುವ ಸಾಮರ್ಥ್ಯವನ್ನು ಪಡೆಯಲು ಬ್ಯಾಂಕ್ ಮತ್ತು ಜಿಲ್ಲಾ ಕೈಗಾರಿಕಾ ಕೇಂದ್ರಗಳು ಸುಲಭ ಬಡ್ಡಿ ವಿಧಿಸಿ, ಸಹಾಯ ಧನ ನೀಡಿ ದೇಶದ ಕೈಗಾರಿಕಾ ಕ್ರಾಂತಿಗಾಗಿ ಪ್ರಯತ್ನಿಸುತ್ತಿವೆ. ಸೇ. 12ರಷ್ಟು ಗರಿಷ್ಠ ಬಡ್ಡಿಯ ದರದಲ್ಲಿ ರೂ. 25,000 ಗರಿಷ್ಠ ಮೊತ್ತದ 3ರಿಂದ 7 ವರ್ಷಗಳ ವರೆಗಿನ ಅವಧಿಯ ದೀರ್ಘಾವಧಿ ಸಾಲವನ್ನು ಬ್ಯಾಂಕುಗಳು ನೀಡುತ್ತಿವೆ.

ದೇಶ ಪ್ರಗತಿಪಥದಲ್ಲಿ ನಡೆಯಲು, ಕೈಗಾರಿಕಾ ಕ್ರಾಂತಿ ಸಾಧಿಸಲು ಬ್ಯಾಂಕುಗಳು ಜಿಲ್ಲಾ ಕೈಗಾರಿಕಾ ಕೇಂದ್ರಗಳ ಮೂಲಕ ಹಲವಾರು ಪ್ರದರ್ಶನಗಳನ್ನೇರ್ಪಡಿಸಿ, ಉತ್ಪಾದನೆಯಾದ ಸರಕುಗಳನ್ನು ಮಾರಾಟ ಮಾಡಲು ನೆರವಾಗುತ್ತಿವೆ.



# ಬ್ಯಾಂಕರನ ದೃಷ್ಟಿಯಲ್ಲಿ ಗಾರ್ನಿಷಿ ಆದೇಶ

ಕೆ. ಎಸ್. ನರಸಿಂಹಮೂರ್ತಿ

1908ರ ಸಿವಿಲ್ (ವ್ಯವಹಾರ) ಪ್ರಕ್ರಿಯಾ ಸಂಹಿತೆಯ 46ನೆಯ ಆದೇಶ 21ರ ಅನ್ವಯ ಹೊರಡಿಸಲಾದ ನ್ಯಾಯಾಲಯದ 'ಗಾರ್ನಿಷಿ ಆದೇಶ' (ಗಾರ್ನಿಷಿ ಆರ್ಡರ್) ಬ್ಯಾಂಕರನ ಮೇಲೆ ಜಾರಿಯಾದಾಗ ಸಂಬಂಧಿಸಿದ ಗ್ರಾಹಕನ ಚೆಕ್ಕುಗಳನ್ನು ಅವನು ಆದರಿಸಬೇಕಾಗಿಲ್ಲ. ಈ ಆದೇಶವನ್ನು ಸ್ವೀಕರಿಸಿದ ಅನಂತರ ಅದರಲ್ಲಿ ನಮೂದಿಸಿರುವಷ್ಟು ಮೊಬಲಗಿನ ವರೆಗೆ ಬ್ಯಾಂಕರನೊಡನೆ ಇರುವ ಗ್ರಾಹಕನ ಖಾತೆ ಅಮಾನತುಗೊಳ್ಳುತ್ತದೆ. ಆದ್ದರಿಂದ ಗಾರ್ನಿಷಿ ಆದೇಶ ಹೊರಡಿಸಿದ ಅನಂತರ ಆ ಗ್ರಾಹಕನ ಖಾತೆಯಿಂದ ಯಾವುದೇ ಹಣ ಪಾವತಿ ಮಾಡುವಂತಿಲ್ಲ.

ತನಗೆ ಕೊಡಬೇಕಾಗಿರುವ ಸಾಲವನ್ನು ಮರುಪಾವತಿ ಮಾಡಲು ಸಾಲಗಾರ (ಋಣಿ, ಡೆಟರ್) ತಪ್ಪಿದಲ್ಲಿ ಸಾಲಿಗ (ಧನಿ, ಕ್ರೆಡಿಟರ್) ತನ್ನ ಸಾಲಗಾರನ ಬ್ಯಾಂಕರನ ಮೇಲೆ 'ಗಾರ್ನಿಷಿ ಆದೇಶ'ವನ್ನು ಹೊರಡಿಸುವಂತೆ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಆ ಸಾಲಗಾರನ ಖಾತೆಯಿಂದ ಯಾವುದೇ ಹಣ ಪಾವತಿ ಮಾಡದಂತೆ ತಡೆಗಟ್ಟ ಬಹುದು.

ಗಾರ್ನಿಷಿ ಆದೇಶದ ಭಾಗಿಗಳು ಇವರು : (1) ತೀರ್ಪು ಸಾಲಿಗ (ಜಡ್ಜ್‌ಮೆಂಟ್ ಕ್ರೆಡಿಟರ್), ಎಂದರೆ ಯಾರ ಕೋರಿಕೆಯ ಮೇಲೆ ಗಾರ್ನಿಷಿ ಆದೇಶ ಹೊರಡಿಸಲಾಗುತ್ತದೆಯೋ ಅವನು; (2) ತೀರ್ಪು ಸಾಲಗಾರ (ಜಡ್ಜ್‌ಮೆಂಟ್ ಡೆಟರ್), ಎಂದರೆ ಯಾರ ಹಣವನ್ನು ಗಾರ್ನಿಷಿ ಆದೇಶದ ಮೂಲಕ ಪಾವತಿ ಮಾಡದಂತೆ ತಡೆಯಲಾಗುತ್ತದೆಯೋ ಅವನು ; (3) ಬ್ಯಾಂಕರ್ ಅಥವಾ ಗಾರ್ನಿಷಿ, ಎಂದರೆ ಯಾರು ತೀರ್ಪು ಸಾಲಗಾರನಿಗೆ ಋಣಿಯಾಗಿರುತ್ತಾನೋ ಅವನು.

ಗಾರ್ನಿಷಿ ಆದೇಶವನ್ನು ಎರಡು ಹಂತಗಳಲ್ಲಿ ಹೊರಡಿಸಲಾಗುತ್ತದೆ. ಮೊದಲನೆಯ ಹಂತದಲ್ಲಿ ತೀರ್ಪುಸಾಲಗಾರನ ಖಾತೆಯಿಂದ ಪಾವತಿಮಾಡುವುದನ್ನು ನಿಲ್ಲಿಸುವಂತೆ ನ್ಯಾಯಾಲಯ ಬ್ಯಾಂಕರನಿಗೆ ಆದೇಶ ನೀಡುತ್ತದೆ. ಇದನ್ನು ಪ್ರಾರಂಭದ ಆದೇಶ (ಆರ್ಡರ್ ನಿಸಿ) ಎಂದು ಕರೆಯಲಾಗುತ್ತದೆ. ಈ ಮೂಲಕ ತೀರ್ಪು ಸಾಲಗಾರ ತೀರ್ಪುಸಾಲಿಗನಿಗೆ ಕೊಡಬೇಕಾಗಿರುವ ಸಾಲದ ಮರುಪಾವತಿಗಾಗಿ ಆ ಬ್ಯಾಂಕಿನ ಖಾತೆಯಲ್ಲಿ ತೀರ್ಪುಸಾಲಗಾರ ಇಟ್ಟಿರುವ ಹಣವನ್ನು ಏಕೆ ಉಪಯೋಗಿಸಿಕೊಳ್ಳಬಾರದು ಎಂದು ನ್ಯಾಯಾಲಯ ಬ್ಯಾಂಕರನ ಸ್ಪಷ್ಟೀಕರಣವನ್ನು ಅಪೇಕ್ಷಿಸುತ್ತದೆ. ಆದ್ದರಿಂದ ಪ್ರಾರಂಭಿಕ ಆದೇಶ ತಲುಪಿದ ಕೂಡಲೇ ಬ್ಯಾಂಕರ್ ತನ್ನ ಗ್ರಾಹಕನ ಖಾತೆಯಿಂದ ಹಣ ಪಾವತಿಮಾಡುವುದನ್ನು ನಿಲ್ಲಿಸಿ ನ್ಯಾಯಾಲಯದ ಆದೇಶವನ್ನು ತಿಳಿಸಬೇಕು. ಆದ್ದರಿಂದ ಆ ಗ್ರಾಹಕ ಕೊಡುವ ಚೆಕ್ಕುಗಳು ಅನಾದರಣೆಗೊಳ್ಳುವುದನ್ನು ನಿಲ್ಲಿಸಬಹುದು. ಸ್ಪಷ್ಟೀಕರಣದ ಅಗತ್ಯವಿದ್ದಲ್ಲಿ ಪ್ರಾರಂಭಿಕ ಆದೇಶಕ್ಕೆ ಬ್ಯಾಂಕರ್ ಉತ್ತರ ನೀಡಬೇಕಾಗುತ್ತದೆ.

ಎರಡನೆಯ ಹಂತದಲ್ಲಿ ಬ್ಯಾಂಕರನ ಮೇಲೆ ನ್ಯಾಯಾಲಯ ನಿರುಪಾಧಿಕ ಆದೇಶ (ಆರ್ಡರ್ ಆಬ್ಸಲ್ಯೂಟ್) ಎಂಬ ಅಂತಿಮ ಆದೇಶವನ್ನು ಹೊರಡಿಸುತ್ತದೆ. ನಿರುಪಾಧಿಕ ಆದೇಶದಲ್ಲಿ ನಿರ್ದಿಷ್ಟ ಮೊಬಲಗನ್ನು ನಮೂದಿಸಿಲ್ಲದಿದ್ದರೆ ಗಾರ್ನಿಷಿ ಆದೇಶ ಗ್ರಾಹಕನ ಖಾತೆಯಲ್ಲಿನ ಪೂರ್ತಿ ಸಿಲ್ಕಿಗೆ ಅನ್ವಯವಾಗುತ್ತದೆ. ನಿರ್ದಿಷ್ಟ ಮೊಬಲಗನ್ನು ನಮೂದಿಸಿದ್ದಾಗ, ಅಷ್ಟನ್ನು ಬಿಟ್ಟು ಉಳಿದ ಹಣವನ್ನು ಗ್ರಾಹಕ ಉಪಯೋಗಿಸಿಕೊಳ್ಳಬಹುದು. ಗಾರ್ನಿಷಿ ಆದೇಶದ ಮೇರೆಗೆ ತಡೆಹಿಡಿಯಲಾದ ಮೊಬಲಗನ್ನು ತೀರ್ಪುಸಾಲಿಗನಿಗೆ ಸಲ್ಲಿಸಿದ ಅನಂತರ ಗ್ರಾಹಕನ ಖಾತೆ ಪುನಃ ಊರ್ಜಿತವಾಗುತ್ತದೆ.

ಸಾಮಾನ್ಯವಾಗಿ ಗಾರ್ನಿಷಿ ಆದೇಶ ಜಾರಿಯಾದ ಅನಂತರ ಬ್ಯಾಂಕರ್ ಆದೇಶದಲ್ಲಿ ನಿಗದಿಪಡಿಸಿರುವಷ್ಟು ಮೊಬಲಗನ್ನು ಬೇರೊಂದು ಖಾತೆಗೆ ವರ್ಗಾಯಿಸಿ ಉಳಿದ ಮೊಬಲಗಿನಿಂದ ಖಾತೆಯನ್ನು ನಡೆಸಿಕೊಂಡು ಹೋಗಲು ಅನುಮತಿ ನೀಡುವುದು ಅಥವಾ ಗಾರ್ನಿಷಿ ಆದೇಶ ಜಾರಿಯಾದ ಅನಂತರ ಆ ಖಾತೆಯನ್ನು ಅಮಾನತುಗೊಳಿಸಿ ಗ್ರಾಹಕನ ಅನುಕೂಲಕ್ಕಾಗಿ ಹೊಸ ಖಾತೆಯೊಂದನ್ನು ತೆರೆಯುವುದು ಜಾರಿಯಲ್ಲಿದೆ.

ಈ ಮುಂದೆ ಕಾಣಿಸಿದ ಬ್ಯಾಂಕ್ ಖಾತೆಯ ಮೊಬಲಗುಗಳನ್ನು ಗಾರ್ನಿಷಿ ಆದೇಶದಿಂದ ತಡೆಗಟ್ಟುವಂತಿಲ್ಲ :

1 'ಪಾವತಿಗೆ ಯೋಗ್ಯವಾಗಿದೆ' (ಗುಡ್ ಫಾರ್ ಪೇಮೆಂಟ್) ಎಂದು ಗುರುತು ಹಾಕಿಕೊಟ್ಟಿರುವ ಚೆಕ್ಕುಗಳ ಮೊಬಲಗು. ಏಕೆಂದರೆ ಈ ಕ್ರಿಯೆಯಲ್ಲಿ ಆ ಚೆಕ್ಕುಗಳಿಗೆ ಪಾವತಿ ಮಾಡಲು ಬ್ಯಾಂಕರ್ ಕರಾರುಬದ್ಧನಾಗಿರುತ್ತಾನೆ.

2 ವಸೂಲಿಗಾಗಿ (ಕಲೆಕ್ಷನ್) ಕಳುಹಿಸಿರುವ ಅಥವಾ ಇನ್ನೂ ಪಾವತಿ ಪಡೆಯದಿರುವ ಡ್ರಾಫ್ಟ್, ಚೆಕ್ಕು ಮುಂತಾದವುಗಳ ಮೊಬಲಗು ಗಾರ್ನಿಷಿ ಆದೇಶ ಜಾರಿಯಾಗುವವರೆಗೂ ವಸೂಲಾಗಿರದಿದ್ದರೆ ಅಂಥ ಮೊಬಲಗು.

3 ಗಾರ್ನಿಷಿ ಆದೇಶ ಜಾರಿಯಾದ ಅನಂತರ ಗ್ರಾಹಕನ ಪ್ರತಿಭೂತಿಗಳ (ಸೆಕ್ಯೂರಿಟಿ) ಬಿಕರಿಯಿಂದ ಬರುವ ಲಾಭ.

4 ಗಾರ್ನಿಷಿ ಆದೇಶ ಜಾರಿಯಾದ ಅನಂತರ ಗ್ರಾಹಕನ ಖಾತೆಗೆ ಜಮಾ ಆಗುವ ಮೊಬಲಗು.

5 ಗಾರ್ನಿಷಿ ಆದೇಶ ಜಾರಿಮಾಡುವ ಮುಂಚೆ ಬ್ಯಾಂಕರ್ ಪಾವತಿ ಮಾಡಿದ ಗ್ರಾಹಕನ ಚೆಕ್ಕಿನ ಮೊಬಲಗು.

6 ತೀರ್ಪುಸಾಲಗಾರ ವಿದೇಶದಲ್ಲಿ ಇಟ್ಟಿರುವ ಹಣ.

7 ಗ್ರಾಹಕ ಭದ್ರಸುಪರ್ದಿಗಾಗಿ ಬ್ಯಾಂಕಿನಲ್ಲಿ ಇಟ್ಟಿರುವ ಪ್ರತಿಭೂತಿಗಳ ಮೊಬಲಗು.

ನ್ಯಾಯಾಲಯ ಬ್ಯಾಂಕರನ ಮೇಲೆ ಪ್ರಾರಂಭಿಕ ಆದೇಶವನ್ನು

---

ಕೆ. ಎಸ್. ನರಸಿಂಹಮೂರ್ತಿ, ಅಧಿಕಾರಿ (ಕಾನೂನು), ಇಂಡಿಯನ್ ಓವರ್‌ಸೀಸ್ ಬ್ಯಾಂಕ್, ಬೆಂಗಳೂರು

ಜಾರಿಮಾಡಿದ ವೇಳೆಯಲ್ಲಿ ಗ್ರಾಹಕನ (ತೀರ್ಪುಸಾಲಗಾರ) ಖಾತೆಯಲ್ಲಿರುವ ವಾಸ್ತವಿಕ ಸಿಲ್ಕು ಹಣವನ್ನು ಮಾತ್ರ ತಡೆಹಿಡಿಯಬಹುದು. ಗಾರ್ನಿಷಿ ಆದೇಶ ಜಾರಿಯಾದ ಅನಂತರ ತೀರ್ಪುಸಾಲಗಾರನ ಖಾತೆಗೆ ಜಮಾ ಆಗುವ ಹಣವನ್ನು ಆದೇಶದ ಮೂಲಕ ತಡೆ ಹಿಡಿಯಲಾಗುವುದಿಲ್ಲ.

ಗ್ರಾಹಕನ ಖಾತೆಯಲ್ಲಿ ಮೀರೆಳೆತ (ಓವರ್‌ಡ್ರಾಫ್ಟ್) ಇದ್ದರೆ ನ್ಯಾಯಾಲಯದ ಆದೇಶ ಪರಿಣಾಮ ಬೀರುವುದಿಲ್ಲ. ಒಪ್ಪಂದದ ಪ್ರಕಾರ ನಿಗದಿಪಡಿಪಡಿಸಿದ ಮಿತಿಯಷ್ಟು ಹಣವನ್ನು ಮೀರೆಳೆತ ಖಾತೆಯಲ್ಲಿ ಗ್ರಾಹಕ ಪಡೆದಿರದಿದ್ದರೂ ಗಾರ್ನಿಷಿ ಆದೇಶದ ಮೂಲಕ ಆ ಮೊಬಲಗನ್ನು ತಡೆಹಿಡಿಯಲು ಸಾಧ್ಯವಿಲ್ಲ. ಗ್ರಾಹಕನಿಂದ ಬರಬೇಕಾದ ವಾಸ್ತವಿಕ ಹೊಣೆಯ (ಆ್ಯಕ್ಚುಯಲ್ ಲಯಬಿಲಿಟಿ) ಪಾವತಿಗಾಗಿ ಗಾರ್ನಿಷಿ ಆದೇಶ ಅನ್ವಯವಾಗಬೇಕಾದ ಮೊಬಲಗಿಗೆ ಬ್ಯಾಂಕರ್ ಉತ್ತಾರ (ಸೆಟ್-ಅಫ್) ಹಾಕಿಕೊಳ್ಳುವ ಹಕ್ಕು ಪಡೆದಿರುತ್ತಾನೆ. ಆದರೆ ಆ ಬಾಕಿ ವಾಸ್ತವಿಕ ಹೊಣೆ (ಆ್ಯಕ್ಚುಯಲ್ ಲಯಬಿಲಿಟಿ)ಯಾಗಿರಬೇಕೇ ವಿನಾ ಆಕಸ್ಮಿಕ ಹೊಣೆ (ಕಂಟಿಂಜೆಂಟ್ ಲಯಬಿಲಿಟಿ) ಆಗಿರಬಾರದು. ಅದು ಕೇವಲ ಆಕಸ್ಮಿಕ ಹೊಣೆಯಾಗಿದ್ದರೆ ಬ್ಯಾಂಕರ್ ಉತ್ತಾರ ಹಾಕಿಕೊಳ್ಳಲು ಸಾಧ್ಯವಿಲ್ಲ. ಉದಾಹರಣೆಗೆ 'ಅ' ಎಂಬ ತೀರ್ಪುಸಾಲಗಾರ ಬ್ಯಾಂಕಿನಲ್ಲಿ ಒಂದು ಹುಂಡಿಯನ್ನು ವಟಾಯಿಸಿದ್ದರೆ (ಡಿಸ್ಕೌಂಟೆಡ್) ದೇಯ ದಿನಾಂಕದಂದು (ಡ್ಯೂ ಡೇಟ್) ಅದರ ಸಮ್ಮತಿದಾರ ಹುಂಡಿಯನ್ನು ಆದರಿಸದೆ ಹೋಗುವ ಪಕ್ಷದಲ್ಲಿ 'ಅ'ನಿಂದ ಬ್ಯಾಂಕಿಗೆ ಆಕಸ್ಮಿಕ ಹೊಣೆ ಉಂಟಾಗುತ್ತದೆ. ಇದೇ ರೀತಿ 'ಬ' ಎಂಬವನು ಪಡೆದ ಸಾಲಕ್ಕೆ 'ಅ' ಎಂಬವನು ಜಾಮೀನು ನೀಡಿದ್ದರೆ, 'ಬ' ಎಂಬವನು ಆ ಸಾಲವನ್ನು ಹಿಂದಿರುಗಿಸಲು ತಪ್ಪಿಸುವ ವರೆಗೂ ಜಾಮೀನುದಾರನಾಗಿರುವ 'ಅ'ನ ಖಾತೆಯ ಹಣವನ್ನು ಗಾರ್ನಿಷಿ ಆದೇಶದಿಂದ ತಡೆಹಿಡಿಯಲಾಗುವುದಿಲ್ಲ. ಇದೇ ಅಧಿಕಾರದಿಂದ ಗ್ರಾಹಕನ ಹೆಸರಿನಲ್ಲಿನ ಎರಡು ಖಾತೆಗಳನ್ನು ಒಂದುಗೂಡಿಸಲು ಬ್ಯಾಂಕರನಿಗೆ ಅರ್ಹತೆ ಇರುತ್ತದೆ. ಅಂದರೆ ಗ್ರಾಹಕ ಎರಡು ಖಾತೆಗಳನ್ನು ಹೊಂದಿದ್ದು ಒಂದು ಧನಿ ಸಿಲ್ಕು (ಕ್ರೆಡಿಟ್ ಬ್ಯಾಲನ್ಸ್) ಮತ್ತು ಇನ್ನೊಂದು ಋಣಿ ಸಿಲ್ಕು (ಡೆಬಿಟ್ ಬ್ಯಾಲನ್ಸ್) ತೋರಿಸುತ್ತಿದ್ದರೆ, ಇವೆರಡರ ಕೂಡುವಿಕೆಯಿಂದ ಬರುವ ನಿವ್ವಳ ಸಿಲ್ಕನ್ನು (ನೆಟ್ ಬ್ಯಾಲೆನ್ಸ್) ಗಮನಿಸಬೇಕಾಗುತ್ತದೆ.

ವಸೂಲಿಗಾಗಿ ಕಳುಹಿಸಿರುವ ಚೆಕ್ಕುಗಳ ಮೊಬಲಗಿಗೆ ಗಾರ್ನಿಷಿ ಆದೇಶ ಅನ್ವಯವಾಗುವುದಿಲ್ಲವಾದರೂ ಆ ಚೆಕ್ಕುಗಳ ಮೊಬಲಗನ್ನು ಗ್ರಾಹಕನ ಖಾತೆಗೆ ಮುಂಚೆಯೇ ಧನಿಸಿದ್ದರೆ (ತೀರುವೆಗೆ ಮೊದಲು) ಆ ಮೊಬಲಗಿಗೂ ಗಾರ್ನಿಷಿ ಆದೇಶ ಅನ್ವಯವಾಗುತ್ತದೆ.

ಗಾರ್ನಿಷಿ ಆದೇಶವನ್ನು ಜಾರಿಮಾಡಿದ ಅವಧಿಯಲ್ಲಿ ಗ್ರಾಹಕನ ಖಾತೆಯಲ್ಲಿರುವ ನಿಗದಿತ ಮೊಬಲಗಿಗೆ ಮಾತ್ರ ಅದು ಅನ್ವಯವಾಗುವುದರಿಂದ, ಖಾತೆಗೆ ಅನಂತರ ಜಮಾ ಆಗುವ ಹಣಕ್ಕೆ ಗಾರ್ನಿಷಿ ಆದೇಶ ಅನ್ವಯವಾಗುವುದಿಲ್ಲ. ಅದರಂತೆ ಗಾರ್ನಿಷಿ ಆದೇಶ ಭಾವೀ ವಹಿವಾಟುಗಳಿಗೆ ಅನ್ವಯಿಸುವುದಿಲ್ಲ. ಸಾಧಾರಣವಾಗಿ ಅಂಥ ಸಂದರ್ಭಗಳಲ್ಲಿ ಬ್ಯಾಂಕರ್ ತನ್ನ ಗ್ರಾಹಕನ ಪ್ರತ್ಯೇಕ ಖಾತೆಯೊಂದನ್ನು ತೆರೆಯುವುದು ಒಳ್ಳೆಯದು.

ಗಾರ್ನಿಷಿ ಆದೇಶ ತಲಪುವ ಮುಂಚೆ ಬ್ಯಾಂಕರ್ ಮಾಡಿರುವ ಪಾವತಿಯ ಮೇಲೆ ಗಾರ್ನಿಷಿ ಆದೇಶ ಪರಿಣಾಮ ಬೀರುವುದಿಲ್ಲ. ಆದರೆ ಒಂದು ಚೆಕ್ಕನ್ನು ಪಾವತಿಗಾಗಿ ಹಾಜರುಪಡಿಸಿದ್ದು ಪಾವತಿಗಾಗಿ ಸಮ್ಮತಿ ನೀಡಿದ್ದರೂ, ಹಣವನ್ನು ಪಾವತಿ ಮಾಡುವ ಮುಂಚೆ ಗಾರ್ನಿಷಿ ಆದೇಶ ತಲಪಿದ್ದರೆ ಆ ಚೆಕ್ಕನ್ನು ಪಾವತಿ ಮಾಡದೆ ತಡೆಹಿಡಿಯಬೇಕಾಗುತ್ತದೆ. ಇದೇ ರೀತಿ ಗ್ರಾಹಕ ತನ್ನ ಖಾತೆಯಿಂದ ಇನ್ನೊಬ್ಬರ ಖಾತೆಗೆ ನಿರ್ದಿಷ್ಟ ಮೊಬಲಗನ್ನು ವರ್ಗ ಮಾಡಲು ಸೂಚನೆ ನೀಡಿದ್ದು, ಬ್ಯಾಂಕರ್ ತತ್ಸಂಬಂಧಿ ನಮೂದುಗಳನ್ನು ತನ್ನ ಪುಸ್ತಕಗಳಲ್ಲಿ ಮಾಡಿದ್ದರೂ ಇನ್ನೊಬ್ಬ ಗ್ರಾಹಕನಿಗೆ ವರ್ಗಾವಣೆ ವಿಷಯ ತಿಳಿಸುವಷ್ಟರಲ್ಲಿ ಜಾರಿಯಾಗುವ ಗಾರ್ನಿಷಿ ಆದೇಶವನ್ನು ಗೌರವಿಸಬೇಕಾಗುತ್ತದೆ.

ತೀರುವೆ ಮನೆಯ ಮೂಲಕ ಚೆಕ್ಕುಗಳನ್ನು ಹಾಜರುಪಡಿಸಿದಾಗ, ಅನಾದರಿತ ಚೆಕ್ಕುಗಳನ್ನು ಗೊತ್ತುಪಡಿಸಿದ ನಿರ್ದಿಷ್ಟ ಅವಧಿಯಲ್ಲಿ ಹಿಂದಿರುಗಿಸಬೇಕೆಂಬ ನಿಯಮ ಇದೆ. ಆದರಿಂದ ಆ ನಿರ್ದಿಷ್ಟ ಅವಧಿಯ ಮೊದಲು ಜಾರಿಯಾಗುವ ಆದೇಶವನ್ನು ಮಾನ್ಯಮಾಡಿ ಮೊಬಲಗನ್ನು ತಡೆಹಿಡಿಯಬೇಕಾಗುತ್ತದೆ.

ಗಾರ್ನಿಷಿ ಆದೇಶವನ್ನು ಬ್ಯಾಂಕಿನ ಮುಖ್ಯ ಕಛೇರಿಗೆ ಕಳುಹಿಸಿಕೊಟ್ಟರೂ ಅದಕ್ಕೆ ಸಂಬಂಧಿಸಿದ ಶಾಖೆಗಳಿಗೂ ಯುಕ್ತ ತಿಳವಳಿಕೆ ನೀಡಿದಂತೆ ಭಾವಿಸಲಾಗುತ್ತದೆ. ಆದರೆ ಶಾಖಾ ಕಛೇರಿಗೆ ಆ ಗಾರ್ನಿಷಿ ಆದೇಶ ತಲುಪುವ ಮುಂಚೆ ಮಾಡುವ ಪಾವತಿಗೆ ಅದು ಅನ್ವಯವಾಗುವುದಿಲ್ಲ.

**ಗಾರ್ನಿಷಿ ಆದೇಶ ಅನ್ವಯವಾಗುವ ವಿವಿಧ ರೀತಿಯ ಖಾತೆಗಳು**

**1** ಜಂಟಿ ಖಾತೆಗಳು(ಜಾಯಿಂಟ್‌ಅಕೌಂಟ್ಸ್): ಜಂಟಿ ಖಾತೆಯನ್ನು ಇಬ್ಬರು ಅಥವಾ ಇಬ್ಬರಿಗಿಂತ ಹೆಚ್ಚು ಜನರು ಕೂಡಿಕೊಂಡು ತಮ್ಮೆಲ್ಲರ ಹೆಸರಿನಲ್ಲಿ ತೆರೆಯಬಹುದು. ಅವರುಗಳಲ್ಲಿ ಒಬ್ಬ ಮಾತ್ರ ತೀರ್ಪು ಸಾಲಗಾರನಾಗಿದ್ದರೆ ಜಂಟಿ ಖಾತೆಯಲ್ಲಿಯ ಮೊಬಲಗನ್ನು ತಡೆಹಿಡಿಯಲಾಗುವುದಿಲ್ಲ. ಆದರೆ ಜಂಟಿ ಖಾತೆಯನ್ನು ಹೊಂದಿರುವ ಪ್ರತಿಯೊಬ್ಬರೂ ಸಂಯುಕ್ತವಾಗಿ ತೀರ್ಪು ಸಾಲಗಾರರಾಗಿದ್ದರೆ ಅಂಥ ಜಂಟಿಖಾತೆಯಲ್ಲಿಯ ಮೊಬಲಗನ್ನು ಗಾರ್ನಿಷಿ ಆದೇಶದ ಮೂಲಕ ತಡೆಗಟ್ಟಬಹುದು. ಉದಾಹರಣೆಗೆ 'ಅ' ಎಂಬವನು 'ಬ' ಎಂಬವವನಿಗೆ ವೈಯಕ್ತಿಕವಾಗಿ ರೂ. 1,000ನ್ನು ಹಿಂದಿರುಗಿಸಬೇಕಾಗಿದ್ದಾಗ, 'ಅ' ಮತ್ತು 'ಕ' ಎಂಬವರ ಹೆಸರಿನಲ್ಲಿಯ ಜಂಟಿಖಾತೆಯ ಮೊಬಲಗನ್ನುಗಾರ್ನಿಷಿ ಆದೇಶದ ಮೂಲಕ ತಡೆಯಲು ಸಾಧ್ಯವಿಲ್ಲ. ಆದರೆ 'ಅ' ಮತ್ತು 'ಕ' ಇಬ್ಬರೂ ಸಂಯುಕ್ತವಾಗಿ ಸಾಲಗಾರರಾಗಿದ್ದರೆ ಅವರಿಬ್ಬರ ಹೆಸರಿನಲ್ಲಿರುವ ಜಂಟಿ ಖಾತೆಯ ಮೊಬಲಗನ್ನು ತಡೆಗಟ್ಟಬಹುದು.

ಇದಲ್ಲದೆ, ಇಬ್ಬರು ಅಥವಾ ಇಬ್ಬರಿಗಿಂತ ಹೆಚ್ಚು ಜನರು ಒಟ್ಟಾಗಿ ಪಡೆದ ಸಾಲಕ್ಕೆ ಅವರ ವೈಯಕ್ತಿಕ ಹೆಸರಿನಲ್ಲಿರುವ ಬ್ಯಾಂಕ್ ಖಾತೆಯ ಮೊಬಲಗನ್ನು ತಡೆಗಟ್ಟುವ ಗಾರ್ನಿಷಿ ಆದೇಶದಿಂದ ಅವರೆಲ್ಲರೂ ಒಟ್ಟಾಗಿಯೂ ಪ್ರತ್ಯೇಕವಾಗಿಯೂ ಹೊಣೆಗಾರರಾಗಿರುತ್ತಾರೆ.

**2** ಪಾಲುದಾರಿಕೆ ಖಾತೆಗಳು : ಭಾರತದ 1932ರ ಪಾಲುದಾರಿಕೆ ಅಧಿನಿಯಮದ ಪ್ರಕಾರ ಪ್ರತಿಯೊಬ್ಬ ಪಾಲುದಾರನೂ ಒಟ್ಟಾಗಿಯೂ ಪ್ರತ್ಯೇಕವಾಗಿಯೂ ಹೊಣೆಯಾಗಿರುತ್ತಾನೆ. ಆದ್ದರಿಂದ ಸಂಸ್ಥೆಯ ಹೆಸರಿನಲ್ಲಿ ಪಡೆದ ಸಾಲಕ್ಕೆ, ಸಂಸ್ಥೆಯ ಹೆಸರಿನಲ್ಲಿಯ ಖಾತೆಯ ಜೊತೆಗೆ ಪಾಲುದಾರರ ವೈಯಕ್ತಿಕ ಬ್ಯಾಂಕ್

ಖಾತೆಯ ಮೊಬಲಗನ್ನು ಗಾರ್ನಿಷಿ ಆದೇಶದ ಮೂಲಕ ತಡೆಗಟ್ಟಬಹುದು. ಅವನು ತೀರ್ಪು ಸಾಲಗಾರನಾಗಿದ್ದರೆ ಅವನ ವೈಯಕ್ತಿಕ ಖಾತೆಯನ್ನು ಮಾತ್ರ ತಡೆಗಟ್ಟಬಹುದೇ ವಿನಾ ಪಾಲುದಾರಿಕೆ ಸಂಸ್ಥೆಯ ಹೆಸರಿನ ಖಾತೆ ಅಥವಾ ಇತರ ಪಾಲುದಾರರ ವೈಯಕ್ತಿಕ ಖಾತೆಗಳನ್ನು ತಡೆಗಟ್ಟಲು ಸಾಧ್ಯವಿಲ್ಲ.

3 ನ್ಯಾಸದ ಖಾತೆಗಳು (ಟ್ರಸ್ಟ್ ಅಕೌಂಟ್ಸ್) : ನ್ಯಾಸಧಾರಿ (ಟ್ರಸ್ಟಿ) ಬೇರೊಬ್ಬರ ಹಣ ಅಥವಾ ಆಸ್ತಿಯನ್ನು ಫಲಾನುಭವಿಯ (ಬೆನಿಫಿಷಿಯರಿ) ಹಿತಲಾಭಕ್ಕಾಗಿ (ಬೆನಿಫಿಟ್) ತನ್ನ ವಶದಲ್ಲಿ ಇಟ್ಟುಕೊಂಡಿರುತ್ತಾನೆ. ನ್ಯಾಸಧಾರಿಯಾಗಿ ಬ್ಯಾಂಕಿನಲ್ಲಿ ಖಾತೆಯನ್ನು ತೆರೆದಿದ್ದಾಗ ಈ ವಿಷಯವನ್ನು ಬ್ಯಾಂಕರ್ ಅರಿತಿದ್ದರೆ ಆ ನ್ಯಾಸದ ಖಾತೆಯನ್ನು ನ್ಯಾಸಧಾರಿಯ ವೈಯಕ್ತಿಕ ಹೊಣೆಗಾಗಿ ಜಾರಿಮಾಡುವ ಗಾರ್ನಿಷಿ ಆದೇಶದ ಮೂಲಕ ತಡೆಗಟ್ಟಲು ಸಾಧ್ಯವಿಲ್ಲ. ಅಂಥ ಸಂದರ್ಭಗಳಲ್ಲಿ ಗಾರ್ನಿಷಿ ಆದೇಶ ಜಾರಿಯಾದ ಕೂಡಲೇ ಬ್ಯಾಂಕರ್ ನ್ಯಾಸಧಾರಿಯ ಖಾತೆಯನ್ನು ಅವಮಾನತುಗೊಳಿಸಿ ನ್ಯಾಸಧಾರಿಗೆ ಸೂಚನೆ ಕೊಡುವುದರ ಜೊತೆಗೆ ನ್ಯಾಯಾಲಯಕ್ಕೂ ವಿಷಯ ತಿಳಿಸಬೇಕಾಗುತ್ತದೆ.

ತೀರ್ಪುಸಾಲಗಾರ ತನ್ನ ಖಾತೆಯಡಿ ಬ್ಯಾಂಕರನಲ್ಲಿ ಇಟ್ಟಿರುವ ಹಣವನ್ನು ಪಡೆಯಲು ತೀರ್ಪುಸಾಲಿಗ ಗಾರ್ನಿಷಿ ಆದೇಶದ ಮೂಲಕ ಹಕ್ಕು ಪಡೆಯುತ್ತಾನೆಯೇ ಹೊರತು, ತತ್‌ಕ್ಷಣವೇ ಆ ಹಣವನ್ನು ಪಡೆಯಲಾಗುವುದಿಲ್ಲ. ನ್ಯಾಯಾಲಯದ ಸ್ಥಿರ ಆದೇಶದ ಅನಂತರ ತೀರ್ಪುಸಾಲಿಗನಿಗೆ ಹಣ ದೊರೆಯುತ್ತದೆ. ಆದ್ದರಿಂದ ಗಾರ್ನಿಷಿ ಆದೇಶ ಜಾರಿಯಾದ ಕೂಡಲೇ ಬ್ಯಾಂಕರ್ ತನ್ನ ಗ್ರಾಹಕನಿಗೆ ಯುಕ್ತ ತಿಳುವಳಿಕೆ ನೀಡಿ ನ್ಯಾಯಾಲಯದ ಆದೇಶ ಪಾಲಿಸಬೇಕು.



## ನ್ಯಾಯಾಲಯ ನಿರ್ಣಯಗಳು

ಗಾರ್ನಿಷಿ ಆದೇಶಕ್ಕೆ ಸಂಬಂಧಿಸಿದಂತೆ ನ್ಯಾಯಾಲಯಗಳ ಮುಂದೆ ಅನೇಕ ಪ್ರಕರಣಗಳು ಬಂದಿವೆ. ಅವನ್ನು ವಿಚಾರಿಸಿ ನೀಡಲಾಗಿರುವ ತೀರ್ಪುಗಳು ಸ್ವಾರಸ್ಯವಾಗಿವೆ ಮಾತ್ರವಲ್ಲ, ಅವು ಈ ಆದೇಶದ ಸ್ವರೂಪದ ಬಗ್ಗೆ ಯಥೇಚ್ಛವಾಗಿ ಬೆಳಕು ಚೆಲ್ಲುತ್ತವೆ. ಉದಾಹರಣೆಗೆ, 'ಹರ್ಷಾನ್ ವಿರುದ್ಧ ಇವಾನ್' ವ್ಯಾಜ್ಯಕ್ಕೆ ಸಂಬಂಧಿಸಿದಂತೆ 1938ರಲ್ಲಿ ನೀಡಿದ ತೀರ್ಪನ್ನು ನೋಡಬಹುದು. ಗಂಡಹೆಂಡಿರು ಜಂಟಿಯಾಗಿ ಬ್ಯಾಂಕಿನಲ್ಲಿ ಖಾತೆ ತೆರೆದಿದ್ದರು. ತೀರ್ಪು ಸಾಲಿಗನೊಬ್ಬ ಗಂಡನ ವಿರುದ್ಧ ಮೊಕದ್ದಮೆಯಲ್ಲಿ ಸಾಲ ಪಾವತಿಗೆ ಡಿಕ್ರಿ ಪಡೆದು ಆ ಸಾಲಗಾರ ತನ್ನ ಹೆಂಡತಿಯೊಂದಿಗೆ ಬ್ಯಾಂಕಿನಲ್ಲಿ ಹೊಂದಿರುವ ಜಂಟಿಖಾತೆಯನ್ನು ತಡೆಗಟ್ಟಲು ನ್ಯಾಯಾಲಯದ ಆದೇಶ ಪಡೆಯಬಹುದೆ ? 'ಸಾಧ್ಯವಿಲ್ಲ' ಎನ್ನುತ್ತದೆ ನ್ಯಾಯಾಲಯ.

ಇನ್ನೊಂದು ವ್ಯಾಜ್ಯ ಪ್ಲಂಕೆಟ್ ಮತ್ತು ಬಾರ್ಕ್‌ಲೇಸ್ ಬ್ಯಾಂಕ್ ಲಿಮಿಟೆಡ್ ನಡುವಿನದು. ಇಸವಿ 1936. ಬಾರ್ಕ್‌ಲೇಸ್ ಬ್ಯಾಂಕಿನಲ್ಲಿ ಪ್ಲಂಕೆಟ್ ಎರಡು ಖಾತೆಗಳನ್ನು ತೆರೆದಿದ್ದರು. ಎರಡು ಖಾತೆಗಳೂ ಅವರ ಹೆಸರಿನಲ್ಲೇ ಇದ್ದುವು. ಆದರೆ ಎರಡನೆಯ ಖಾತೆಯನ್ನು ತನ್ನ ಹೆಸರಿನ ಕೊನೆಯಲ್ಲಿ 'ಕಕ್ಷಿಗಾರರ ಲೆಕ್ಕ' ಎಂದು ಸೇರಿಸಲಾಗಿತ್ತು, ಮೂರನೆಯ ವ್ಯಕ್ತಿಯೊಬ್ಬರಿಗೆ ಪಾವತಿಯಾಗುವಂತೆ ಅವರು ಎರಡನೆಯ ಖಾತೆಯ ಮೇಲೆ ಚೆಕ್ಕೊಂದನ್ನು ಬರೆದರು. ಆ ಚೆಕ್ಕಿನ ಪಾವತಿಯಾಗುವುದರೊಳಗೆ ಪ್ಲಂಕೆಟ್ಟರ ವಿರುದ್ಧ ಪಡೆದ ಡಿಕ್ರಿಗೆ ಸಂಬಂಧಿಸಿದಂತೆ ಬ್ಯಾಂಕಿಗೆ ಗಾರ್ನಿಷಿ ಆದೇಶವನ್ನು ಜಾರಿ ಮಾಡಲಾಯಿತು. ಎರಡೂ ಖಾತೆಗಳಿಗೆ ಅನ್ವಯಿಸುವಂತೆ ಆದೇಶದಲ್ಲಿ ಒಕ್ಕಣೆಯಿತ್ತು. ಆದ್ದರಿಂದ ಬ್ಯಾಂಕು ಆ ಚೆಕ್ಕನ್ನು ಅನಾದರಿಸಿತು. ಬ್ಯಾಂಕು ಅನಾದರಿಸಿದ್ದು ಸರಿಯಲ್ಲವೆಂದು ಪ್ಲಂಕೆಟ್ ನ್ಯಾಯಲಯದಲ್ಲಿ ವ್ಯಾಜ್ಯ ಹೂಡಿದರು. ಬ್ಯಾಂಕು ಮಾಡಿದ್ದು ಸರಿಯೆಂಬುದು ನ್ಯಾಯಾಲಯ ನೀಡಿದ ತೀರ್ಪು.

# ಬ್ಯಾಂಕ್ ಸೇವೆಗಳ ವೆಚ್ಚ ನಿರ್ಣಯ

ಕೆ. ಆರ್. ಶ್ರೀವತ್ಸ

ವಿವಿಧ ಸಂಸ್ಥೆಗಳು ಅನೇಕ ಪದಾರ್ಥಗಳನ್ನು ತಯಾರಿಸುತ್ತವೆ. ಕೆಲವು ಸಂಸ್ಥೆಗಳು ಸೇವೆ ಸಲ್ಲಿಸುತ್ತವೆ. ಪದಾರ್ಥಗಳ ಬೆಲೆಗಳು ಪರಿಣಾಮಕಾರಿಯಾಗಿರಬೇಕಾದರೆ ಅಥವಾ ಸಂಸ್ಥೆ ತನ್ನ ಲಾಭವನ್ನು ಹೆಚ್ಚಿಸಿಕೊಳ್ಳಬೇಕಾದರೆ ಅದರ ಪದಾರ್ಥದ, ಅದು ಸಲ್ಲಿಸುವ ಸೇವೆಗಳ ಆಳವಾದ ಅಧ್ಯಯನ ಅಗತ್ಯ. ಶಾಖೆಗಳ ಮುಖಾಂತರ ಬಹುಸ್ಥಾನೀಯ (ಮಲ್ಟಿ-ಲೊಕೇಷನ್ಸ್) ಹಾಗೂ ಬಹುವಿಧ (ಡೈವರ್ಸ್) ವಹಿವಾಟು ನಡಸುವ ಬ್ಯಾಂಕುಗಳಿಗೆ, ಆ ವಿವಿಧ ವಹಿವಾಟುಗಳಿಗೆ ಸಂಬಂಧಿಸಿದ ವೆಚ್ಚ ನಿರ್ಣಯ ಮಾಡಲು ಒಂದು ನಿಖರವಾದ ವ್ಯವಸ್ಥೆಯು ಅಗತ್ಯವಿದೆ. ಏಕೆಂದರೆ, ನಷ್ಟ ಅನುಭವಿಸುತ್ತಿರುವಾಗ ಸಾಧ್ಯವಿರುವೆಡೆ ಕೆಲವು ಸೇವೆಗಳನ್ನು ಸ್ಥಗಿತಗೊಳಿಸಬಹುದು. ಸಾಧ್ಯವಿಲ್ಲದೆಡೆ ವೆಚ್ಚಗಳನ್ನು ಕಡಿಮೆ ಮಾಡಲು ಪ್ರಯತ್ನಿಸಬಹುದು. ಉದಾಹರಣೆಗೆ ಕೆಲವು ಶಾಖೆಗಳಲ್ಲಿ ಭದ್ರಕಪಾಟಿನ ವ್ಯವಸ್ಥೆಯಿರಬಹುದು ಆದರೆ ಇದರ ಉಪಯೋಗವನ್ನು ಪಡೆದುಕೊಳ್ಳುವ ಜನರೇ ಇಲ್ಲವಾದಾಗ ಈ ವ್ಯವಸ್ಥೆಯನ್ನು ಸ್ಥಗಿತಗೊಳಿಸಬಹುದು. ಸಾರ್ವಜನಿಕರಿಂದ, ಕಂಪನಿ ಮತ್ತು ಇತರರಿಂದ ಠೇವಣಿಗಳನ್ನು ಅಂಗೀಕರಿಸುವುದು, ಡ್ರಾಫ್ಟ್‌ಗಳ ನೀಡಿಕೆ ಮತ್ತು ಪಾವತಿ ಮಾಡುವುದು, ವೈಯಕ್ತಿಕ ಹಾಗೂ ಆದ್ಯತಾ ಕ್ಷೇತ್ರಗಳಿಗೆ ಹಾಗೂ ಕಂಪನಿಗಳಿಗೆ ಸಾಲ ನೀಡುವುದು ಮುಂತಾದ ವಿವಿಧ ವ್ಯವಹಾರಗಳನ್ನು ಒಂದು ಬ್ಯಾಂಕ್ ಹೊಂದಿರಬಹುದು. ಠೇವಣಿ ಹಾಗೂ ಸಾಲಗಳ ನೀಡಿಕೆಯ ಅನುಕೂಲತೆಯ ಮಿಶ್ರಣವನ್ನು (ಆಪ್ಟಿಮಲ್ ಮಿಕ್ಸ್) ನಿರ್ಣಯಿಸುವುದಕ್ಕೆ, ಡ್ರಾಫ್ಟ್ ಮತ್ತು ವಸೂಲಿಗಳಿಗೆ ವಿಧಿಸಬಹುದಾದ ದರಗಳನ್ನು ನಿರ್ಣಯಿಸಲು, ವಿವಿಧ ಸೇವೆಗಳಿಗೆ ತಗಲುವ ವೆಚ್ಚಗಳ ತಿಳಿವಳಿಕೆ ಅಗತ್ಯ. ಸಾಮಾನ್ಯವಾಗಿ ಒಳ್ಳೆಯ ವೆಚ್ಚ ನಿರ್ಣಯ ಪದ್ಧತಿ ಈ ಮುಂದಿನ ಗುಣಗಳಿಂದ ಕೂಡಿರುತ್ತದೆ :

1 ಲಾಭಯೋಜನೆ,
2 ಬ್ಯಾಂಕಿಗೆ ನಷ್ಟವಾಗುತ್ತಿರುವ ಕ್ಷೇತ್ರಗಳನ್ನು ಗುರುತಿಸುವುದು,
3 ಅಂತರಶಾಖಾ ಹಾಗೂ ಸಾಧ್ಯವಿದ್ದಲ್ಲಿ ಅಂತರಬ್ಯಾಂಕ್ ಹೋಲಿಕೆ ಮಾಡುವುದು,
4 ಆದ್ಯತಾ ಕ್ಷೇತ್ರದಲ್ಲಿ ಸಾಲನೀಡಿಕೆಗೆ ಇರುವ ಅಡೆತಡೆಗಳನ್ನು ನಿವಾರಿಸಿ, ಸರಿಯಾದ ಮಿಶ್ರಣವನ್ನು (ಬಿಸನೆಸ್ ಮಿಕ್ಸ್) ಆಯೋಜಿಸುವುದು,
5 ಬೆಲೆ ಪರಿಣಾಮಕಾರಿಯಾಗಿರುವಂತೆ ಮಾಡಲು ಸಹಾಯಕವಾಗುವ ನಿರ್ದಿಷ್ಟ ವಹಿವಾಟುಗಳ ಆಳವಾದ ಅಧ್ಯಯನ ನಡೆಸುವುದು,
6 ಕೆಲವು ಬ್ಯಾಂಕುಗಳ ಅಥವಾ ಶಾಖೆಗಳ ವಿವಿಧ ವರ್ಷಗಳ ತೌಲನಿಕ ವಿಶ್ಲೇಷಣೆ ನಡೆಸುವುದು,
7 ಗರಿಷ್ಠ ಬೆಲೆಗಳನ್ನು ನಿರ್ಣಯಿಸಲು ಅನುಕೂಲವಾಗುವ ನಿರ್ಧಾರಗಳನ್ನು ತೆಗೆದುಕೊಳ್ಳುವುದು,
8 ಪ್ರಮುಖ ಗ್ರಾಹಕರ ಜೊತೆಯ ವ್ಯವಹಾರ ಸಂಬಂಧಗಳ ಲಾಭಪ್ರದತೆಯನ್ನು ವಿಶ್ಲೇಷಿಸುವುದು,
9 ಸಾಮಾಜಿಕ ಧ್ಯೇಯಗಳನ್ನು ಸಾಧಿಸುವುದರಲ್ಲಿ ಆದ ಖರ್ಚು ವೆಚ್ಚಗಳನ್ನು ಸರಕಾರ ಮತ್ತು ರಿಸರ್ವ್ ಬ್ಯಾಂಕಿನ ಮುಂದೆ ಮಂಡಿಸುವುದು,
10 ಸಂಗಮ ಸಾಲ ನೀಡಿಕೆ (ಕನ್ಸೋರ್ಷಿಯಮ್ ಲೋನ್ಸ್) ಮತ್ತು ದೊಡ್ಡ ಮೊತ್ತದ ಪ್ರಸ್ತಾವನೆಗಳ ಸಾಲ ನೀಡಿಕೆಗಳ ಬಗ್ಗೆ ನಿರ್ಧಾರ ತೆಗೆದುಕೊಳ್ಳಲು ಅನುಕೂಲವಾಗುವಂತೆ ಒಟ್ಟು ವೆಚ್ಚ ಹಾಗೂ ಅದರಿಂದ ಬರುವ ಪ್ರತಿಫಲವನ್ನು ಅಂದಾಜು ಮಾಡುವುದು.

ಬ್ಯಾಂಕುಗಳು ಸಾಮಾನ್ಯವಾಗಿ ಈ ಮುಂದೆ ಕಾಣಿಸಿದ ರೀತಿ ಒಂದು ವಹಿವಾಟಿಗೆ ಸಂಬಂಧಿಸಿದಂತೆ ತಗಲುವ ವೆಚ್ಚ ವಿಭಜನೆಯನ್ನು (ಕಾಸ್ಟ್ ಬ್ರೇಕ್–ಅಪ್) ತಿಳಿಯುವುದು ಅಗತ್ಯ :

1 ಶಾಖೆಯಲ್ಲಿಯ ಗುಮಾಸ್ತೆಗಳಿಗಾಗಿ ಖರ್ಚು,
2 ಶಾಖೆಯಲ್ಲಿಯ ಅಧಿಕಾರಿಗಳಿಗಾಗಿ ಖರ್ಚು,
3 ಶಾಖೆಯಲ್ಲಿಯ ಮೇಲ್ಖರ್ಚುಗಳು,
4 ಪ್ರಾದೇಶಿಕ ಕಛೇರಿಯ, ಮುಖ್ಯ ಕಛೇರಿಯ ಮೇಲ್ಖರ್ಚುಗಳು.

ವೆಚ್ಚಗಳನ್ನು ಕಡಿಮೆ ಮಾಡುವುದು ಹೆಚ್ಚು ಪರಿಣಾಮಕಾರಿಯಾಗಿರುವಂತೆ ಮಾಡಲು, ಅಧ್ಯಯನ ನಡೆಸಲು, ಮೇಲ್ಕಂಡ ಖರ್ಚುಗಳ ತಿಳಿವಳಿಕೆ ಅಗತ್ಯ. ವೆಚ್ಚ ನಿರ್ಣಯದ ಕೆಲಸವನ್ನು ಆರಂಭಿಸುವ ಮುಂಚೆ, ಯಾವ ಯಾವ ವಹಿವಾಟುಗಳ ವೆಚ್ಚ ನಿರ್ಣಯವಾಗಬೇಕು ಎಂಬುದನ್ನು ನಿರ್ಣಯಿಸಿಕೊಳ್ಳಬೇಕು.

ಸಾಮಾನ್ಯವಾಗಿ ಈ ಮುಂದಿನ ವಹಿವಾಟುಗಳ ಸೇವಾವೆಚ್ಚಗಳನ್ನು ಕಂಡುಹಿಡಿಯಬೇಕಾಗುತ್ತದೆ :

1 ಠೇವಣಿಗಳು

ಅ ಸಾವಧಿ ಠೇವಣಿಗಳು
ಆ ಚಾಲ್ತಿ ಠೇವಣಿಗಳು
ಇ ಉಳಿತಾಯ ಖಾತೆಗಳು

---

* ಕೆ. ಆರ್. ಶ್ರೀವತ್ಸ, ಭಾರತೀಯ ಸ್ಟೇಟ್ ಬ್ಯಾಂಕ್, ಪ್ರಾದೇಶಿಕ ಕಛೇರಿ, ಬೆಂಗಳೂರು

2 ಮುಂಗಡಗಳು

ಅ ವ್ಯಕ್ತಿಗಳಿಗೆ
ಆ ಸಣ್ಣ ಕೈಗಾರಿಕೆಗಳಿಗೆ
ಇ ವ್ಯವಸಾಯಕ್ಕೆ
ಈ ದೊಡ್ಡ ಮೊತ್ತದ ಸಾಲನೀಡಿಕೆ
ಉ ನಗದು ಉದರಿ
ಊ ಸಾವಧಿ ಸಾಲ

3 ಡ್ರಾಫ್ಟ್‌ಗಳು
4 ಚೆಕ್ಕುಗಳು
5 ಹುಂಡಿಗಳು
6 ತೀರುವಳಿ

ಮುಂಗಡಗಳ ವಿಚಾರದಲ್ಲಿ ಸಾಮಾನ್ಯವಾಗಿ ಪ್ರತಿ ನೂರು ರೂಪಾಯಿಗಳಿಗೆ ತಗಲುವ ವೆಚ್ಚವನ್ನು ನಿರ್ಣಯ ಮಾಡುವುದು ಅಗತ್ಯ. ಚಾಲ್ತಿ ಖಾತೆ, ಉಳಿತಾಯ ಖಾತೆ, ಸಾವಧಿ ಠೇವಣಿ, ನಗದು ಉದರಿ ಮತ್ತು ಸಾವಧಿ ಮುಂಗಡಗಳ ವಿಚಾರದಲ್ಲಿ ಪ್ರತಿ ವಹಿವಾಟಿಗೆ ತಗಲುವ ವೆಚ್ಚವನ್ನು ನಿರ್ಣಯಿಸಬೇಕಾಗುತ್ತದೆ (ಉದಾಹರಣೆ : ಚಾಲ್ತಿಖಾತೆಯ ಒಂದು ವೋಚರಿಗೆ ತಗಲುವ ಸೇವಾವೆಚ್ಚ, ಒಂದು ಸಾವಧಿ ಠೇವಣಿ ರಸೀತಿಗೆ ತಗಲುವ ಸೇವಾ ವೆಚ್ಚ, ಒಂದು ಚೆಕ್ಕನ್ನು ವಟಾಯಿಸಲು ಆಗುವ ವೆಚ್ಚ).

ವಿಧಾನ

ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ಬಳಸಲಾಗುತ್ತಿರುವ ವಿಧಾನ ಈ ರೀತಿ ಇದೆ :

ಉದ್ಯೋಗಿಗಳು ವಿವಿಧ ರೀತಿಯ ಕೆಲಸಗಳಿಗಾಗಿ ಉಪಯೋಗಿಸುವ ಕಾಲದ ಅನುಪಾತವನ್ನು ಈ ವಿಧಾನ ಅವಲಂಬಿಸಿದೆ. ಶಾಖೆಯ ಒಟ್ಟು ವೆಚ್ಚ ಈ ಅನುಪಾತಗಳ ಮೇಲೆ ಆಧಾರಿತವಾಗಿದ್ದು, ಆಡಳಿತ ಕಛೇರಿಗಳ ವೆಚ್ಚಗಳನ್ನು ಶಾಖೆಯ ವೆಚ್ಚಕ್ಕೆ ಸೇರಿಸಿ, ಒಟ್ಟು ವೆಚ್ಚವನ್ನು ನಿರ್ಣಯಿಸಲಾಗುತ್ತದೆ.

ಅದರ ವಿವರಗಳನ್ನು ಪುಟ 25ರಲ್ಲಿ ತೋರಿಸಲಾಗಿದೆ:

## ಬ್ಯಾಂಕ್ ಕಲಾಪಗಳ ವೆಚ್ಚ ನಿರ್ಣಯ

ವರ್ಷದಿಂದ ವರ್ಷಕ್ಕೆ ಬ್ಯಾಂಕುಗಳ ಲಾಭಪ್ರದತೆ ಇಳಿಯುತ್ತಲೇ ಇದೆ. ಈ ಪ್ರವೃತ್ತಿಯನ್ನು ನಿವಾರಿಸಲು ಕ್ರಮಗಳನ್ನೇನೋ ಕೈಗೊಳ್ಳಲಾಗುತ್ತಿದೆ. ಆದರೆ ಫಲವೇನೂ ಗಮನಾರ್ಹವಲ್ಲ.

ಇದಕ್ಕೆ ಒಂದು ಮುಖ್ಯ ಕಾರಣವೆಂದರೆ, ಬ್ಯಾಂಕಿಂಗಿನ ನಿತ್ಯಕಲಾಪಗಳಲ್ಲಿ ತೊಡಗಿರುವವರ ದಕ್ಷತೆಯ ಮಟ್ಟದಲ್ಲಿ ಇಳಿತ. 1969-70ರಲ್ಲಿ ಬ್ಯಾಂಕ್ ಗುಮಾಸ್ತೆಯೊಬ್ಬರು ದಿನಕ್ಕೆ 150 ವೋಚರುಗಳನ್ನು ವರ್ಗ ಪುಸ್ತಕಗಳಲ್ಲಿ ನಮೂದು ಮಾಡುತ್ತಿದ್ದರೆ, 1979-80ರ ವೇಳೆಗೆ ಈ ಸಂಖ್ಯೆ 50-60ಕ್ಕೆ ಇಳಿದಿತ್ತು. ಪ್ರತಿಯಾಗಿ ಬ್ಯಾಂಕುಗಳ ವೆಚ್ಚಗಳು ಏರುತ್ತಿವೆ. ವೆಚ್ಚಗಳು ಏರುತ್ತಿರುವ ದರದಲ್ಲೇ ವರಮಾನ ಹೆಚ್ಚುತ್ತಿಲ್ಲ. ಆದ್ದರಿಂದ, ಬ್ಯಾಂಕುಗಳು ಸಲ್ಲಿಸುತ್ತಿರುವ ಸೇವೆಗಳ, ಅವು ನಡಸುತ್ತಿರುವ ಕಲಾಪಗಳ ವೆಚ್ಚವನ್ನು ಕಂಡು ಹಿಡಿಯುವುದು ಅತ್ಯಂತ ಆವಶ್ಯಕವೆನಿಸಿದೆ.

ಬ್ಯಾಂಕುಗಳ ಕಲಾಪಗಳ ಸೇವೆಗಳ ವೆಚ್ಚದಲ್ಲಿ ಸೇರಿರುವ ಅಂಶಗಳು ಇವು : i ನಿಧಿಗಳ—ಎಂದರೆ ಧನದ—ವೆಚ್ಚ: ಠೇವಣಿಗಳ ಹಾಗೂ ಪಡೆದ ಸಾಲಗಳ ಮೇಲೆ ಪಾವತಿ ಮಾಡುವ ಬಡ್ಡಿ, ii ಸಿಬ್ಬಂದಿ ವ್ಯವಸ್ಥೆಯ ವೆಚ್ಚ ; iii ಪರಿಚಾಲನೆಯ ವೆಚ್ಚ—ಎಂದರೆ ಮೊದಲನೆಯ ಎರಡರ ಅಡಿಯಲ್ಲಿ ಬಾರದ ಉಳಿದ ಎಲ್ಲ ವೆಚ್ಚಗಳು.

ಬ್ಯಾಂಕಿನ ಆಂತರಿಕ ದಕ್ಷತೆಯನ್ನಳೆಯಲು ವೆಚ್ಚ ವಿಶ್ಲೇಷಣೆ ಒಂದು ಮುಖ್ಯ ವಿಧಾನ.

**ವಿವರಗಳು :**

| | ಒಟ್ಟು ವಹಿವಾಟುಗಳಿಗೆ | |
|---|---|---|
| ಉದ್ಯೋಗಿ ಒಂದು ವಹಿವಾಟಿಗೆ ತೆಗೆದು ಕೊಂಡ ಕಾಲದ ಅನುಪಾತ | ಶಾಖೆಯಲ್ಲಿ ಸಂಬಳ ಮತ್ತು ಭತ್ಯೆಗಳಿಗಾಗಿ ಮಾಡಿದ ವೆಚ್ಚ | ಎಲ್ಲ ಶಾಖೆಗಳಲ್ಲಿ ಆ ವಹಿವಾಟುಗಳಿಗೆ ಸಂಬಂಧಿಸಿದಂತೆ ಸಂಬಳ ಮತ್ತು ಭತ್ಯೆಗಳಿಗಾದ ವೆಚ್ಚ |
| ಇದೇ ವಹಿವಾಟಿಗೆ ಉದ್ಯೋಗಿಗೆ ಕೊಡಲು ಶಾಖೆಯಲ್ಲಿ ಖರ್ಚಾದ ಸಂಬಳ ಮತ್ತು ಭತ್ಯೆಗಳ ಅನುಪಾತ | ಶಾಖೆಯಲ್ಲಿನ ಮೇಲ್ವೆಚ್ಚಗಳ ವೆಚ್ಚ | ಎಲ್ಲ ಶಾಖೆಗಳ (ಓವರ್‌ಹೆಡ್ಸ್) ವೆಚ್ಚ |
| | | ಆಡಳಿತ ವಿಭಾಗಗಳಿಗೆ ತಗಲುವ ನೇರ ಖರ್ಚುಗಳು |
| | | ಪರೋಕ್ಷ ವೆಚ್ಚಗಳು |
| | | ಒಟ್ಟು ವೆಚ್ಚಗಳು |

ಒಟ್ಟು ವೆಚ್ಚಗಳನ್ನು ಒಟ್ಟು ವಹಿವಾಟುಗಳ ಸಂಖ್ಯೆಯಿಂದ ಭಾಗಿಸಿದರೆ, ಒಂದು ವಹಿವಾಟಿಗೆ ತಗಲುವ ವೆಚ್ಚ ಬರುತ್ತದೆ.

**ಉದಾಹರಣೆ**

ಉಳಿತಾಯ ಖಾತೆ (ಠೇವಣಿಗಳು)

ಶಾಖೆಯಲ್ಲಿನ ಒಟ್ಟು ವಹಿವಾಟುಗಳು ರೂ. 200/-
ಎಲ್ಲ ಶಾಖೆಗಳ ಒಟ್ಟು ವಹಿವಾಟುಗಳ ಸಂಖ್ಯೆ 25,000

| ಗುಮಾಸ್ತೆಗಳ ಖರ್ಚು<br>ಅಧಿಕಾರಿಗಳ ಖರ್ಚು | ಶಾಖೆಯಲ್ಲಿ<br>200 ವಹಿವಾಟುಗಳಿಗೆ | ಎಲ್ಲ ಶಾಖೆಗಳಲ್ಲಿ<br>ಒಟ್ಟು ವಹಿವಾಟುಗಳಿಗೆ |
|---|---|---|
| ಉದ್ಯೋಗಿ ಒಂದು ವಹಿವಾಟಿಗೆ ತೆಗೆದುಕೊಂಡ ಕಾಲ 3 ನಿಮಿಷ | ಸಂಬಳ ಮತ್ತು ಭತ್ಯಗಳಿಗಾದ ವೆಚ್ಚ ರೂ. 20 | 25,000 ವಹಿವಾಟುಗಳಿಗೆ ಸಂಬಳ ಮತ್ತು ಭತ್ಯಗಳಿಗಾಗಿ ಮಾಡಿದ ವೆಚ್ಚ ರೂ. 3,500 |
| ಒಂದು ವಹಿವಾಟಿಗಾಗಿ ಉದ್ಯೋಗಿಗೆ ಖರ್ಚಾದ/ಕೊಡಬೇಕಾದ ಸಂಬಳ ಮತ್ತು ಭತ್ಯಗಳು 10 ಪೈಸೆ | ಶಾಖೆಯಲ್ಲಿಯ ಮೇಲ್ವೆಚ್ಚಗಳು ರೂ. 10 | ಮೇಲ್ವೆಚ್ಚಗಳು ರೂ. 250 |
| | | ಆಡಳಿತ ವಿಭಾಗಗಳಿಗೆ/ಕಛೇರಿಗಳಿಗೆ ತಗಲುವ ನೇರ ವೆಚ್ಚಗಳು ರೂ. 500 |
| | | ಪರೋಕ್ಷ ವೆಚ್ಚಗಳು ರೂ. 750 |

ಗುಮಾಸ್ತರಿಗೆ ಆದ ಖರ್ಚು = ರೂ. 5,000
ಅಧಿಕಾರಿಗಳಿಗೆ ಆದ ಖರ್ಚು = ರೂ. 5,000

ಒಟ್ಟು ಖರ್ಚುಗಳು ರೂ. 5,000

$$\text{ಒಂದು ವಹಿವಾಟಿಗೆ ತಗಲುವ ಖರ್ಚು} = \frac{\text{ಒಟ್ಟು ಖರ್ಚುಗಳು}}{\text{ಒಟ್ಟು ವಹಿವಾಟುಗಳ ಸಂಖ್ಯೆ}}$$

$$= \frac{5000 + 5000}{25,000} = 40 \text{ ಪೈಸೆ}$$

ಶಾಖೆಯಲ್ಲಿನ ಪ್ರಸ್ತಾವನೆಗಳ ಮೊಬಲಗು = ರೂ. 10,000
ಎಲ್ಲ ಶಾಖೆಗಳ ಒಟ್ಟು ಪ್ರಸ್ತಾವನೆಗಳ ಮೊಬಲಗು = ರೂ. 1,00,000

ಗುಮಾಸ್ತೆಗಳಿಗೆ

ಎಲ್ಲಾ ಪ್ರಸ್ತಾವನೆಗಳಿಗೆ ತೆಗೆದು ಕೊಂಡ ಕಾಲ 5 ಗಂಟೆಗಳು

ಎಲ್ಲ ಪ್ರಸ್ತಾವನೆಗಳಿಗೆ ಶಾಖೆಯಲ್ಲಿ ಆದ ಸಂಬಳ ಮತ್ತು ಭತ್ಯಗಳ ಖರ್ಚು ರೂ. 300

ಶಾಖೆಯಲ್ಲಿನ ಮೇಲ್ಪಚ್ಚುಗಳು ರೂ. 150

| | ರೂ. |
|---|---|
| ಗುವಮಾಸ್ತರಿಗೆ = | 10,000 |
| ಅಧಿಕಾರಿಗಳಿಗೆ = | 20,000 |
| ಒಟ್ಟು ಖರ್ಚು | 30,000 |

$$\text{ರೂ 100 ಮುಂಗಡಕ್ಕೆ ತಗಲುವ ಖರ್ಚು} = \frac{30,000 \times 100}{1,00,000} = \text{ರೂ. } 30$$

ಎಲ್ಲ ಶಾಖೆಗಳ ಪ್ರಸ್ತಾವನೆಗಳಿಗಾದ

ಒಟ್ಟು ಸಂಬಳ ಮತ್ತು ಭತ್ಯಗಳ ವೆಚ್ಚ ರೂ. 3,5000

ಮೇಲ್ಪಚ್ಚುಗಳು ರೂ. 2,000

ಆಡಳಿತ ಕಛೇರಿಗಳಿಗೆ ತಗಲುವ ನೇರ ವೆಚ್ಚಗಳು ರೂ. 2,000

ಪರೋಕ್ಷ ವೆಚ್ಚಗಳು ರೂ. 2,500

ಒಟ್ಟು ವೆಚ್ಚ = ರೂ. 10,000

**ಮೋಸ್ತ್ರೀಕರಣ (ಸ್ಯಾಂಪ್ಲಿಂಗ್)**

ಮೇಲೆ ತಿಳಿಸಿದಂತೆ ಉದ್ಯೋಗಿಗಳಿಂದ ದತ್ತಾಂಶ ಸಂಗ್ರಹಿಸಬೇಕಾಗುತ್ತದೆ. ಅದಕ್ಕಾಗಿ ತಗಲುವ ವೆಚ್ಚಗಳಿಂದಾಗಿ, ಎಲ್ಲಾ ಬ್ಯಾಂಕ್‌ಗಳ ಎಲ್ಲ ಶಾಖೆಗಳಿಗೂ ಈ ಕೆಲಸ ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ, ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ವ್ಯವಹಾರಗಳ ಗಾತ್ರದ ಆಧಾರದ ಮೇಲೆ ಶಾಖೆಗಳನ್ನು ವಿವಿಧ ಗುಚ್ಛಗಳನ್ನಾಗಿ ವಿಂಗಡಿಸಲಾಗಿದೆ.

ಆಯ್ಕೆ ಮಾಡಿದ ಕೆಲವು ಶಾಖೆಗಳ ಉದ್ಯೋಗಿಗಳೆಲ್ಲರೂ ತಿಂಗಳ ಒಂದು ದಿನದಲ್ಲಿ ತಾವು ವಿವಿಧ ವಹಿವಾಟುಗಳಿಗೆ ವ್ಯಯಿಸಿದ ಕಾಲವನ್ನು ತಿಳಿಸಬೇಕು. ಕೆಲವು ಶಾಖೆಗಳು ಜನವರಿ ತಿಂಗಳಿಗೆ ಸಂಬಂಧಿಸಿದ ಮಾಹಿತಿಯನ್ನು ವರದಿ ಮಾಡಿದರೆ, ಮತ್ತೆ ಕೆಲವು ಶಾಖೆಗಳು ಫೆಬ್ರುವರಿ ತಿಂಗಳಿಗೆ ಸಂಬಂಧಿಸಿದ ಮಾಹಿತಿ ಒದಗಿಸುವಂತೆ ಶಾಖೆಗಳನ್ನು ಗುಂಪುಗಳಾಗಿ ವಿಭಜಿಸಲಾಗಿರುತ್ತದೆ. ಇದೇ ರೀತಿ ವಿವಿಧ ಶಾಖೆಗಳು ಡಿಸೆಂಬರ್ ತಿಂಗಳವರೆಗೂ ಮಾಹಿತಿಯನ್ನು ವರದಿ ಮಾಡುತ್ತವೆ.

**ದತ್ತಾಂಶ ಸಂಗ್ರಹಣೆಯ ನಮೂನೆ**

ದತ್ತಾಂಶ ಸಂಗ್ರಹಣೆಗೆ ಬೇಕಾಗುವ ನಮೂನೆಯನ್ನು ಬಹಳ ಜಾಗರೂಕತೆಯಿಂದ ವಿನ್ಯಾಸ ಮಾಡಬೇಕಾಗುತ್ತದೆ. ಗುಮಾಸ್ತೆಗಳಿಗೆ, ನಗದು ಗುಮಾಸ್ತೆಗಳಿಗೆ ಹಾಗೂ ಅಧಿಕಾರಿಗಳಿಗೆ ಬೇರೆಬೇರೆ ನಮೂನೆ ಇರಬೇಕಾಗುತ್ತದೆ. ವೆಚ್ಚ ನಿರ್ಣಯ ಮಾಡಬೇಕಾದ ಎಲ್ಲ ವಹಿವಾಟುಗಳೂ ನಮೂನೆಯಲ್ಲಿ ಇರಬೇಕು. ನಮೂನೆಯಲ್ಲಿ ಉದ್ಯೋಗಿಯ ಸಂಬಳದ ಬಗ್ಗೆ ವಿವರಗಳನ್ನು ನಮೂದಿಸಲು ಅವಕಾಶವಿರಬೇಕು. ಪ್ರತಿ ಉದ್ಯೋಗಿಯೂ ತಾನು ಸಾಮಾನ್ಯವಾಗಿ ಒಂದು ದಿನದಲ್ಲಿ ವಿವಿಧ ವಹಿವಾಟುಗಳಿಗೆ ವ್ಯಯಿಸುವ ಕಾಲವನ್ನು ಆ ನಮೂನೆಯಲ್ಲಿ ನಮೂದಿಸಬೇಕಾಗುತ್ತದೆ. ವಹಿವಾಟುಗಳ ಗಾತ್ರ, ಸಂಬಳ ಮತ್ತು ಭತ್ಯೆಗಳಿಗಾಗಿ ಆದ ವೆಚ್ಚ ಹಾಗೂ ಇತರ ಮೇಲ್ಪಚ್ಚುಗಳ ವಿವರಗಳನ್ನು ಶಾಖೆಯೂ ಕೊಡಬೇಕಾಗುತ್ತದೆ. ಆಡಳಿತ ಕಛೇರಿಗಳೂ ತಮಗೆ ಸಂಬಂಧಿಸಿದ ವಿವರಗಳನ್ನು ಕೊಡಬೇಕಾಗುತ್ತದೆ.

ಮೇಲೆ ತಿಳಿಸಿರುವ ವಿಧಾನ ಬಹುತೇಕ ದತ್ತಾಂಶ ಸಂಗ್ರಹಣೆಯನ್ನೊಳಗೊಂಡಿರುತ್ತದೆ. ದತ್ತಾಂಶ ವಿವಿಧ ಕಾಲಗಳ ಮೇಲೆ ಆಧಾರಿತವಾಗಿರುತ್ತದೆ. ದತ್ತಾಂಶ ವಿಶ್ಲೇಷಣೆ ಬಹಳ ಕ್ಲಿಷ್ಟವಾದ್ದು. ಆದ್ದರಿಂದ, ದೊಡ್ಡ ಬ್ಯಾಂಕುಗಳು ವಿಶ್ಲೇಷಣೆಗಾಗಿ ಗಣಕಗಳನ್ನು ಬಳಸುತ್ತವೆ. ಮಾಹಿತಿ ನಿಖರವಾಗಿರುವಂತೆ ಮಾಡಬೇಕಾದರೆ ದತ್ತಾಂಶ ನೀಡುವ ಎಲ್ಲಾ ಸಿಬ್ಬಂದಿಗೂ ಸೂಕ್ತವಾದ ತಿಳಿವಳಿಕೆ ನೀಡಬೇಕಾಗುತ್ತದೆ.

ಭಾರತದಲ್ಲಿ ಬ್ಯಾಂಕುಗಳು ಭಿನ್ನಕ ಬಡ್ಡಿ ದರದ ಮೇಲೆ ಸಾಲಗಾರರಿಗೆ ಸಾಲ ನೀಡುವುದರಿಂದ ಹಿಡಿದು ದೊಡ್ಡ ವ್ಯವಹಾರಗಳವರೆಗೆ ಎಲ್ಲ ವಹಿವಾಟುಗಳಿಗೂ ಸಂಬಂಧಿಸಿದಂತೆ ನಿರ್ಣಯಗಳನ್ನು ಕೈಗೊಳ್ಳಬೇಕಾಗುತ್ತದೆ.

ಒಳ್ಳೆಯ ವೆಚ್ಚ ನಿರ್ಣಯ ಪದ್ಧತಿಯಿಂದ ಬ್ಯಾಂಕುಗಳು ನಷ್ಟ ಅನುಭವಿಸುವುದನ್ನು ತಪ್ಪಿಸಬಹುದು. 'ತಾವು ಠೇವಣಿಯಾಗಿ ಸಾಕಷ್ಟು ಹಣವಿಟ್ಟರೆ, ಬ್ಯಾಂಕುಗಳು ತಮಗಾಗಿ ವಿವಿಧ ಸೇವೆಗಳನ್ನು ಪುಕ್ಕಟೆಯಾಗಿ ಮಾಡಬಲ್ಲುವೇ ? ಎಂದು ಅನೇಕ ಸಂಸ್ಥೆಗಳು ಬ್ಯಾಂಕುಗಳಿಗೆ ಕೋರಿಕೆ ಸಲ್ಲಿಸುವುದನ್ನು ನಾವು ಕಂಡಿದ್ದೇವೆ. ಇಂಥ ಕಡೆಗಳಲ್ಲಿ, ವೆಚ್ಚ ಪ್ರಯೋಜನ ವಿಶ್ಲೇಷಣೆಯ (ಕಾಸ್ಟ್-ಬೆನಿಫಿಟ್ ಅನ್ಯಾಲಿಸಿಸ್) ಮೇಲೆ ನಿರ್ಣಯ ಕೈಗೊಳ್ಳಬೇಕಾಗುತ್ತದೆ. ಇದಕ್ಕೆ ವೆಚ್ಚ ಮಾಹಿತಿ ಅಗತ್ಯ. ಬ್ಯಾಂಕುಗಳ ವ್ಯಾಪಾರ ಹಾಗೂ ಆಯೋಜನೆಗಳು ಲಾಭದಾಯಕವಾಗಲು ಇಂಥ ಮಾಹಿತಿ ಆಧಾರಿತ ಉಪಗಮನ (ಇನ್‌ಫರ್ಮೇಷನ್-ಬೇಸ್‌ಡ್ ಅಪ್ರೋಚ್) ಸಹಾಯ ಮಾಡುತ್ತದೆ.



# ಬ್ಯಾಂಕುಗಳಲ್ಲಿ ಮಾನವೀಯ ಸಂಬಂಧಗಳು

**ಅತ್ತೂರು ಜೈಯಬ್ಬ**

ಆಧುನಿಕ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಮಾನವೀಯ ಸಂಬಂಧಗಳನ್ನು ಬೆಳೆಸಬೇಕಾದ ಆವಶ್ಯಕತೆ ಹಾಗೂ ಇದರ ಪರಿಣಾಮಕಾರಿ ಅನುಷ್ಠಾನದ ಬಗ್ಗೆ ವ್ಯಾಪಕ ಚಿಂತನೆ ನಡೆಯಬೇಕಾಗಿದೆ. ಬ್ಯಾಂಕುಗಳ ದೈನಂದಿನ ವ್ಯವಹಾರಗಳಲ್ಲಿ ತುಂಬ ಹತ್ತಿರವಾದ ಮತ್ತು ಭಿನ್ನವಾದ ಸಂಬಂಧ ಏರ್ಪಡುತ್ತದೆ. ಈ ಸಂಬಂಧದ ಸದುಪಯೋಗ ಪಡೆದುಕೊಂಡು ಬ್ಯಾಂಕಗಳು ಸೇವಾಸಾಫಲ್ಯ ಮತ್ತು ಪರಿಣಾಮಕಾರಿ ಬ್ಯಾಂಕಿಂಗ್ ಚಟುವಟಿಕೆಗಳೊಂದಿಗೆ ತಮ್ಮ ಸಾಧನೆಯ ಗುರಿಯನ್ನು ಸಾಧಿಸಬಹುದು. ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಎಲ್ಲ ಬ್ಯಾಂಕುಗಳು ತಮ್ಮ ಹಿರಿಮೆ-ಗರಿಮೆ, ಸಂಸ್ಕೃತಿ–ಸಾಧನೆಗಳ ಬಗ್ಗೆ ಸಾಕಷ್ಟು ಹೇಳಿಕೊಂಡು ಬದುಕಬೇಕಾದ ಪರಿಸ್ಥಿತಿ ಇದೆ. ಬ್ಯಾಂಕುಗಳ ರಾಷ್ಟ್ರೀಕರಣದ ಅನಂತರ ಬ್ಯಾಂಕುಗಳ ಕಾರ್ಯವ್ಯಾಪ್ತಿ ಸೀಮಿತವಾಗಿದೆ. ಭಾರತೀಯ ರಿಸರ್ವ್ ಬ್ಯಾಂಕಿನ ನಿಯಮಗಳ ಚೌಕಟ್ಟಿನಿಂದ ಒಂದಿಂಚೂ ಹೊರಹೋಗುವಂತಿಲ್ಲ. ಹೀಗಿರುವಾಗ ಬ್ಯಾಂಕುಗಳು ತಮ್ಮ ಹಿರಿತನವನ್ನು ತೋರಿಸಬೇಕಾದಲ್ಲಿ ಮಾನವೀಯ ಸಂಬಂಧಗಳಿಂದ ಮಾತ್ರ ಸಾಧ್ಯ. ಈ ಸಂಬಂಧಗಳು ಏರ್ಪಟ್ಟಲ್ಲಿ ಬ್ಯಾಂಕುಗಳ ಕಾರ್ಯಕಲಾಪಗಳ ಯಶಸ್ವಿ ಅನುಷ್ಠಾನ ಮತ್ತು ಗ್ರಾಹಕನ ನಿಜವಾದ ಆವಶ್ಯಕತೆಗಳ ಪರಿಶೀಲನೆ ಸುಲಭವಾಗುತ್ತದೆ. ಹೀಗಾಗಿ ಬ್ಯಾಂಕುಗಳು ಮಾನವೀಯ ಸಂಬಂಧಗಳ ಬೆಳವಣಿಗೆಯ ಬಗ್ಗೆ ಹಾಗೂ ಇಂತಹ ಪರಿಸರದ ಸೃಷ್ಟಿಯ ಬಗ್ಗೆ ಯೋಚಿಸಿ, ಯೋಜಿಸಬೇಕು.

ಪ್ರಸಕ್ತ ಯುಗದಲ್ಲಿ ಬ್ಯಾಂಕಿಂಗ್ ಸಮಾಜದ ಪ್ರತಿಯೊಬ್ಬನೊಂದಿಗೂ ತುಂಬಾ ಆಳವಾದ ಸಂಬಂಧವನ್ನಿಟ್ಟುಕೊಂಡಿದೆ. ಆರ್ಥಿಕ ಭದ್ರತೆ, ಆರ್ಥಿಕ ಸಹಾಯ ಇವೆರಡೂ ಮಾನವನ ದೈನಂದಿನ ಬದುಕಿನಲ್ಲಿ ಉನ್ನತವಾದ ಸ್ಥಾನವನ್ನಲಂಕರಿಸಿವೆ. ಒಂದು ಜೀವಿಗೆ ಉಸಿರಿನ ಅನಂತರ ಬೇಕಾದದ್ದು ಗಳಿಕೆ, ಗಳಿಕೆಯಿಂದ ಸಾಧಿಸಬೇಕಾದದ್ದು ಉಳಿಕೆ. ಈ ಉಳಿಕೆಯನ್ನು ಬೆಳೆಸಿ ತೊಡಗಿಸಬೇಕು ಅಥವಾ ಈ ಕಾರ್ಯದಲ್ಲಿ ಆರ್ಥಿಕ ಸಹಾಯ ಪಡೆದು ಉದ್ಧಾರವಾಗಬೇಕು. ಹೀಗೆ, ಈ ಕ್ರಿಯೆಯಲ್ಲಿ ಬ್ಯಾಂಕು ವಿಶಿಷ್ಟ ಪಾತ್ರ ವಹಿಸುತ್ತದೆ. ಇದು ಗ್ರಾಹಕನ ಮತ್ತು ಬ್ಯಾಂಕಿನ ಸಂಬಂಧವನ್ನು ಊರ್ಜಿತಗೊಳಿಸುತ್ತದೆ. ಈ ಸಂಬಂಧದ ಸರಿಯಾದ ಉಪಯೋಗವನ್ನು ಪಡೆದುಕೊಳ್ಳಬೇಕಾದ್ದು ಪ್ರತಿಯೊಂದು ಬ್ಯಾಂಕಿನ ಆದ್ಯಕರ್ತವ್ಯವಾಗಬೇಕು. ಗ್ರಾಹಕನೊಂದಿಗೆ ಮಾನವೀಯ ಸಂಬಂಧ ಬೆಳೆಸಿದಷ್ಟೂ ಅದರ ಎಲ್ಲ ಕಾರ್ಯಕ್ರಮಗಳೂ ಸುಲಲಿತವಾಗಿ ನಡೆಯುವುದರಲ್ಲಿ ಸಂದೇಹವಿಲ್ಲ. ಬ್ಯಾಂಕು ವ್ಯಾಪಾರ–ವ್ಯವಹಾರಗಳ ಹಣದ ಸಂಸ್ಥೆ. ಇದೇ ಬ್ಯಾಂಕುಗಳ ಜೀವನಾಡಿ. ಹೀಗಿರುವಾಗ ಈ ವ್ಯಾಪಾರಗಳು ಕುದುರಿ, ನಿಗದಿತ ಗುರಿಯನ್ನು ಸಾಧಿಸಬೇಕಾದಲ್ಲಿ ಬ್ಯಾಂಕುಗಳಲ್ಲಿ ಮಾನವೀಯ ಸಂಬಂಧಗಳ ಭದ್ರ ಬುನಾದಿಯ ಅಗತ್ಯವಿದೆ.

ಸಂಬಂಧಗಳು ಬೆಳೆಯುವಲ್ಲಿ ಸೇವೆ ಮುಖ್ಯ ಪಾತ್ರ ವಹಿಸುತ್ತದೆ. ಸೇವೆಯಿಂದಲೇ ಮಾನವೀಯ ಸಂಬಂಧಗಳ ಉಗಮವಾಗುವುದು. ಸ್ನೇಹ, ಪ್ರೀತಿ, ವಿಶ್ವಾಸ, ಸಹಾಯ—ಇವು ಮಾನವೀಯ ಸಂಬಂಧಗಳ ಪರಿಧಿಯೊಳಗಣ ವಿಚಾರಗಳು. ಸೇವೆ ಪರಿಪೂರ್ಣವಾಗಬೇಕಾದಲ್ಲಿ ಇವುಗಳ ಅಗತ್ಯವಿದೆ. ಬ್ಯಾಂಕುಗಳ ಸರ್ವತೋಮುಖ ಬೆಳವಣಿಗೆಯಲ್ಲಿ ಮಾನವೀಯ ಸಂಬಂಧಗಳ ಪಾತ್ರ ತುಂಬ ಹಿರಿದು. ಗ್ರಾಹಕ ಹತ್ತಿರವಾದಂತೆ, ಸಂಸ್ಥೆಯ ಮೇಲೆ ಅವನಿಗೆ ಅಭಿಮಾನ ಬೆಳೆಯುತ್ತದೆ. ಬ್ಯಾಂಕಿನ ಯಾವುದೇ ವ್ಯವಹಾರಗಳಿಗೆ ಠೇವಣಿ ಸಂಗ್ರಹಣೆ, ಸಾಲ ವಸೂಲಿ ಹಾಗೂ ಸಾಲ ಕೊಡುವ ವಿಚಾರಗಳ ಬಗ್ಗೆ ನೈಜ ಮಾಹಿತಿ ದೊರಕುವುದು. ಇದರಿಂದಾಗಿ ಬ್ಯಾಂಕುಗಳಲ್ಲಿಯ ಬಹುತೇಕ ಸಮಸ್ಯೆಗಳಿಗೆ ಪರಿಹಾರ ದೊರಕಿದಂತಾಗುತ್ತದೆ. ಮಾನವೀಯ ಸಂಬಂಧಗಳ ಬೆಳವಣಿಗೆಯಾಗಬೇಕಾದಲ್ಲಿ ಈ ಸಂಬಂಧಗಳ ಆರೋಗ್ಯಕರ ಉಗಮ ಎಲ್ಲ ಹಂತದಲ್ಲೂ ಆಗಬೇಕಾದ್ದು ಅವಶ್ಯ. ಬ್ಯಾಂಕಿನ ವ್ಯವಸ್ಥಾಪಕ ಮತ್ತು ಸಿಬ್ಬಂದಿ ವರ್ಗಗಳವರಲ್ಲಿ ಅನ್ಯೋನ್ಯತೆ, ಪರಸ್ಪರ ಹೊಂದಾಣಿಕೆ ಇರಬೇಕು ; ಮತ್ತು ಆಂತರಿಕ ಸಮಸ್ಯೆಗಳಿಗೆ ಮಾನವೀಯ ದೃಷ್ಟಿಯ ಪರಿಹಾರ ನೀಡಬೇಕು. ಇದರಿಂದಾಗಿ ಸಿಬ್ಬಂದಿಯವರೂ ಗ್ರಾಹಕರಲ್ಲಿ ಅದೇ ಭಾವನೆ ತಳೆಯುತ್ತಾರೆ. ಹಾಗೆಯೇ ಸರ್ಕಾರ ಮತ್ತು ಬ್ಯಾಂಕುಗಳ ನಡುವೆ ಇಂಥ ವಾತಾವರಣದ ಸೃಷ್ಟಿ ಆಗಬೇಕು. ಸರ್ಕಾರ ಬ್ಯಾಂಕರರ ಮೇಲೆ ಅಮಾನವೀಯ ಕಾಯಿದೆ ಕಟ್ಟಲೆ, ನೀತಿ ನಿಯಮಗಳನ್ನು ಹೇರಬಾರದು ಮತ್ತು ಬ್ಯಾಂಕಿನ ಯಾವುದೇ ಕಾರ್ಯಕಲಾಪಗಳಲ್ಲಿ ನೇರ ಹಸ್ತಕ್ಷೇಪ ಮಾಡಬಾರದು. ಏನಿದ್ದರೂ ರಿಸರ್ವ್ ಬ್ಯಾಂಕಿನ ಮುಖಾಂತರ ನಿರ್ದೇಶನ ನೀಡಿ ಅಭಿವೃದ್ಧಿ ಕಾರ್ಯಗಳ ಅನುಷ್ಠಾನದ ಉಸ್ತುವಾರಿ ಮಾಡಬೇಕು.

ಬ್ಯಾಂಕುಗಳಲ್ಲಿ ಮಾನವೀಯ ಸಂಬಂಧದ ಬೆಳವಣಿಗೆಯಿಂದಾಗುವ ಉಪಯೋಗಗಳು ಈ ಕೆಳಕಂಡಂತಿವೆ :

1 ಬ್ಯಾಂಕುಗಳಲ್ಲಿ ಗ್ರಾಹಕ ಸೇವೆ ಪರಿಣಾಮಕಾರಿಯಾಗುವುದು.
2 ಠೇವಣಿ ಸಂಗ್ರಹಣೆ, ಸಾಲ ವಸೂಲಿ ಸುಲಭವಾಗುವುದು.
3 ಸಾಲ ವಿತರಣೆಗೆ ಅರ್ಹ ಫಲಾನುಭವಿಗಳನ್ನು ಗುರುತಿಸಬಹುದು.
4 ಬ್ಯಾಂಕುಗಳಲ್ಲಿ ಆಂತರಿಕ ಮನೆವಾರ್ತೆ ಸುಲಭವಾಗುವುದು.
5 ಸಿಬ್ಬಂದಿ ಸಮಸ್ಯೆಗಳಿಗೆ ಸುಲಭ ಪರಿಹಾರ ದೊರಕುವುದು.
6 ಸರ್ಕಾರದ ಅಭಿವೃದ್ಧಿ ಯೋಜನೆಗಳ ಅನುಷ್ಠಾನಕ್ಕೆ ಸಹಾಯವಾಗುವುದು.
7 ಬ್ಯಾಂಕಿನ ಎಲ್ಲ ಕೆಲಸಕಾರ್ಯಗಳ ಶೀಘ್ರ ವಿಲೇವಾರಿಯಾಗುವುದು.

* ಅತ್ತೂರು ಜೈಯುಬ್ಬ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಮಂಡ್ಯ

8 ವಂಚನೆಗಳು ಕಡಿಮೆಯಾಗುವುವು.

9 ಯಾವುದೇ ಸ್ಥಳದ ಭವ ಸಾಮರ್ಥ್ಯವನ್ನು ಕಂಡುಹಿಡಿಯು ವುದು ಮತ್ತು ಅಲ್ಲಿಯ ಅಭಿವೃದ್ಧಿಗೆ ಆರ್ಥಿಕ ಸಹಾಯ ಸುಲಭವಾಗುವುದು.

10 ಸಮಾಜದಲ್ಲಿ ಒಂದು ಪ್ರತಿಷ್ಠಿತ ಕಾರ್ಯ ಹಾಗೂ ನವೋನ್ಮೇಷ ಬ್ಯಾಂಕಿಂಗಿನ ಕಾರ್ಯಕ್ರಮಗಳ ಯಶಸ್ವಿ ಪ್ರಯೋಗ ಮಾಡಿ ದಂತಾಗುವುದು.

### ಸಿಬ್ಬಂದಿ ಮತ್ತು ವ್ಯವಸ್ಥಾಪಕ

ಬ್ಯಾಂಕಿನಲ್ಲಿ ಮಾನವೀಯ ಸಂಬಂಧಗಳು ಬೆಳೆಯಬೇಕಾದರೆ ಮೊದಲು ಅಲ್ಲಿಯ ಸಿಬ್ಬಂದಿ-ವ್ಯವಸ್ಥಾಪಕ ವರ್ಗಗಳಲ್ಲಿ ಸಂಬಂಧ ಬೆಳೆಯಬೇಕು. ವ್ಯವಸ್ಥಾಪಕವರ್ಗ, ಪ್ರಧಾನ ಕಛೇರಿ, ವ್ಯವ ಸ್ಥಾಪಕರು, ಅಧಿಕಾರಿಗಳು, ಸಿಬ್ಬಂದಿಗಳಲ್ಲಿ ಹೊಂದಾಣಿಕೆ ಬರಬೇಕು. ಹಾಗಿದ್ದರೆ ಮಾತ್ರ ಗ್ರಾಹಕರೊಂದಿಗೆ ಸಂಬಂಧ ಬೆಳೆಯಲು ಅನು ವಾಗುತ್ತದೆ. ಶಾಖಾ ವ್ಯವಸ್ಥಾಪಕರು ಮಾನವೀಯ ಸಂಬಂಧಗಳ ದೃಷ್ಟಿಯಲ್ಲಿ ತೆಗೆದುಕೊಂಡ ಕ್ರಮಗಳನ್ನು ಪ್ರಧಾನ ಕಛೇರಿ ಯವರು ಪರಿಸ್ಥಿತಿಗೆ ಅನುಸಾರವಾಗಿ ಅನುಮೋದಿಸಬೇಕು. ಈ ದಿಶೆಯಲ್ಲಿ ವ್ಯವಸ್ಥಾಪಕರುಗಳಿಗೆ ಅಥವಾ ಅಧಿಕಾರಿಗಳಿಗೆ ಜವಾ ಬ್ದಾರಿ ಕೊಟ್ಟು ಅವರಿಗೆ ಸಂಪೂರ್ಣ ಸ್ವಾತಂತ್ರ್ಯ ನೀಡಬೇಕು. ಬ್ಯಾಂಕು ಶಾಖೆಗಳಲ್ಲಿ ಮಾನವೀಯ ಸಂಬಂಧಗಳು ಬೆಳೆಯಬೇಕಾ ದರೆ ವ್ಯವಸ್ಥಾಪಕರು ಮತ್ತು ಸಿಬ್ಬಂದಿ ವರ್ಗದವರ ಪಾತ್ರ ಹಿರಿದು. ಇಲ್ಲಿಯ ಕೆಲವೊಂದು ಸಂದರ್ಭ, ಸನ್ನಿವೇಶ, ಅವಕಾಶ ಗಳನ್ನು ಅವರು ಮಾತ್ರ ತಿಳಿಯಬಲ್ಲರು. ಸಾಲ ಕೊಡುವುದಾಗಲಿ, ವಸೂಲಿ ಮಾಡುವುದಾಗಲಿ, ಠೇವಣಿ ಸಂಗ್ರಹಣೆಯಾಗಲಿ, ಯಾವುದೇ ಸಮಸ್ಯೆಗೆ ಪರಿಹಾರವಾಗಲಿ, ಎಲ್ಲದಕ್ಕೂ ಕಟ್ಟುನಿಟ್ಟಾದ ನಿಯಮಗಳನ್ನು ಹೇರಿ ಅದರಂತೆಯೇ ನಡೆಯಬೇಕಾದಲ್ಲಿ, ಅದ ರಿಂದಾಗಿ ವ್ಯವಸ್ಥಾಪಕರ ಮಾನಸಿಕ ತುಮುಲ ಹೆಚ್ಚುತ್ತದೆ. ಮಾನ ವೀಯತೆಯ ಇಂತಹ ವಿಚಾರಗಳಿಗೆ ಪ್ರಧಾನ ಕಛೇರಿಯವರೂ ಮಾನ್ಯತೆ ಕೊಡಬೇಕು. ಆಗ ಮಾತ್ರ ಉತ್ತಮ ಫಲಿತಾಂಶವನ್ನು ನಿರೀಕ್ಷಿಸಬಹುದು.

ಇದೇ ಮಾತು ವ್ಯವಸ್ಥಾಪಕರು ಮತ್ತು ಸಿಬ್ಬಂದಿಗಳಿಗೂ ಅನ್ವ ಯಿಸುತ್ತದೆ. ಆಂತರಿಕ ಸಂಬಂಧಗಳು ಆರೋಗ್ಯಕರವಾಗಿರಬೇಕು. ಸಿಬ್ಬಂದಿ ಸಮಸ್ಯೆಗಳಿಗೂ ವ್ಯವಸ್ಥಾಪಕರು ಮಾನವೀಯ ದೃಷ್ಟಿಯ ಪರಿಹಾರ ಕಂಡುಹಿಡಿಯಬೇಕು. ಅಲ್ಲದೆ ಮಾನವೀಯ ದೃಷ್ಟಿಯಿಂದ ಅಥವಾ ಮಾನವೀಯ ಸಂಬಂಧಗಳ ಬೆಳವಣಿಗೆಯ ದೃಷ್ಟಿಯಿಂದ ಸಿಬ್ಬಂದಿ ವರ್ಗದವರ ಯಾವುದೇ ಕ್ರಮಕ್ಕೂ ಮನ್ನಣೆ ದೊರೆಯು ವಂತಿರಬೇಕು. ಆದುದರಿಂದ, ಮೊದಲು ಆಂತರಿಕ ಸಂಬಂಧಗಳು ಮಾನವೀಯ ದೃಷ್ಟಿಯಿಂದ ಕೂಡಿರಬೇಕಾದದ್ದು ಅಗತ್ಯ.

### ಸರ್ಕಾರ ಮತ್ತು ಬ್ಯಾಂಕು

ಎಲ್ಲ ಪ್ರಮುಖ ಬ್ಯಾಂಕುಗಳೂ ಸರ್ಕಾರದ ಅಧೀನದಲ್ಲಿ ಕಾರ್ಯ ನಡೆಸುತ್ತಿವೆ. ಭಾರತೀಯ ರಿಸರ್ವ್ ಬ್ಯಾಂಕ್ ಮುಖಾಂತರ ಬ್ಯಾಂಕಿಂಗ್ ವ್ಯವಹಾರಗಳನ್ನು ನಿಯಂತ್ರಿಸಲಾಗುತ್ತಿದೆ. ಸರ್ಕಾರದ ಇತ್ತೀಚಿನ ಎಲ್ಲ ಆರ್ಥಿಕ ಹಾಗೂ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಮತ್ತು ಯೋಜನೆಗಳಲ್ಲಿ ಬ್ಯಾಂಕನ್ನು ಸಂಪೂರ್ಣವಾಗಿ ಉಪಯೋಗಿಸಿ ಕೊಳ್ಳಲಾಗುತ್ತಿದೆ. ಸಮಾಜವಾದವನ್ನು ದೃಢೀಕರಿಸುವ ಪ್ರಯತ್ನ ಮತ್ತು ಜನತೆಯ ಕಲ್ಯಾಣದ ಗುರಿಹೊಂದಿರುವುದು ಶ್ಲಾಘನೀಯ. ಆದರೆ ಇತ್ತೀಚಿನ ಪರಿಸ್ಥಿತಿ ಕೈಮೀರಿ ಹೋಗುತ್ತಿರುವಂತೆ ಭಾಸವಾಗು ತ್ತಿದೆ. ಸರ್ಕಾರದ ಹಸ್ತಕ್ಷೇಪ ನೇರವಾಗಿ ಆಗುತ್ತಿರುವುದು ಖೇದದ ಸಂಗತಿ. ಇದರಿಂದಾಗಿ ಬ್ಯಾಂಕು ಸಿಬ್ಬಂದಿ ಮತ್ತು ಗ್ರಾಹಕರ ನಡುವಣ ಬಿರುಕು ಇನ್ನಷ್ಟು ಹೆಚ್ಚಾಗುತ್ತಿರುವುದು ಕಂಡುಬರುತ್ತಿದೆ. ಬ್ಯಾಂಕು ಗಳಲ್ಲಿ ಮಾನವೀಯ ಸಂಬಂಧಗಳನ್ನು ಬೆಳೆಸುವ ವಿಚಾರ ಕನಸಾಗು ತ್ತಿದೆ. ಬ್ಯಾಂಕುಗಳ ಮೇಲೆ ಒತ್ತಾಯ ಹೇರಲಾಗುತ್ತಿದೆ. ಠೇವಣಿದಾರ ರನ್ನು ಕಡೆಗಣಿಸಲಾಗುತ್ತಿದೆ. ಠೇವಣಿದಾರರ ಕಲ್ಯಾಣವನ್ನು ಬದಿ ಗೊತ್ತಿ ಸಾಲಮೇಳಗಳಂತಹ ಹಲವಾರು ಕಾರ್ಯಕ್ರಮಗಳಿಂದ ಬ್ಯಾಂಕರ್ ದಿಗ್ಭ್ರಾಂತನಾಗಿದ್ದಾನೆ. ತನ್ನದೇ ಆದ ಪ್ರಾಮಾಣಿಕ ದಾರಿ ಯಲ್ಲಿ ನಡೆಯಲು ಬ್ಯಾಂಕರನಿಗೆ ಆಗುತ್ತಿಲ್ಲ. ಹೀಗಾಗಿ ಗ್ರಾಹಕರಲ್ಲಿ ಮಾನವೀಯ ಸಂಬಂಧಗಳನ್ನು ಬೆಳೆಸಲು ಅಶಕ್ತನಾಗುವ ಪರಿಸ್ಥಿತಿ ಉಂಟಾಗುತ್ತಿದೆ. "ಗೋಡೆ ಬಿದ್ದರೆ ಜಗಲಿ ಮೇಲೆ" ಎಂಬಂತೆ ತನ್ನ ಕೆಲಸದಲ್ಲಿ ಪ್ರಾಮಾಣಿಕ ಪ್ರಯತ್ನ ಮತ್ತು ಆಸಕ್ತಿಯನ್ನು ಕಳೆದು ಕೊಂಡು, ಸರ್ಕಾರದ ಒತ್ತಡಕ್ಕೆ ಮಣಿಯಬೇಕಾಗಿದೆ. ಸರ್ಕಾರ ವೆಂದರೆ ಯಾವುದೋ ಅಧಿಕಾರದಲ್ಲಿರುವ ಪಕ್ಷದ ಆಳ್ವಿಕೆಯ ಯಂತ್ರ. ಇದರ ಯಾವುದೇ ನೇರ ನಿರ್ದೇಶನ, ಮೋಸ ವಂಚನೆ ಗಳಿಗೆ ಎಡೆಮಾಡಿಕೊಡುತ್ತದೆ. ದುರುದ್ದೇಶಪೂರಿತ ಸಾಲಮೇಳಗಳಿ ಗನುಗುಣವಾಗಿ ಯಾರುಯಾರೋ ಪ್ರಯೋಜನ ಪಡೆಯುತ್ತಾರೆ. ಬ್ಯಾಂಕು ಇದುವರೆಗೆ ಬೆಳೆಸಿಕೊಂಡು ಬಂದ ಪ್ರತಿಷ್ಠೆಯನ್ನು ಕಳೆದು ಕೊಳ್ಳುತ್ತಿದೆ. ಸಂಬಂಧವಿರದ ವ್ಯಕ್ತಿಗಳು, ರಾಜಕೀಯ ಪುಢಾರಿ ಗಳು ಇದರ ಲಾಭ ಪಡೆಯುತ್ತಾರೆ. ಇದು ಮುಂದುವರಿದರೆ ಕ್ರಮೇಣ ಜನ ನಂಬಿಕೆ ಕಳೆದುಕೊಳ್ಳುತ್ತಾರೆ. ಬ್ಯಾಂಕುಗಳಲ್ಲಿ ಮಾನ ವೀಯ ಸಂಬಂಧಗಳು ಬೆಳೆಯಬೇಕಾದರೆ ರಾಜಕೀಯದ ನೇರ ಹಸ್ತ ಕ್ಷೇಪ ಇರಬಾರದು. ಭಾರತೀಯ ರಿಸರ್ವ್ ಬ್ಯಾಂಕಿನ ಮೂಲಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿ ಅದರ ಮೇಲ್ವಿಚಾರಣೆಗೆ ಇದನ್ನು ಒಳಪಡಿಸಬೇಕು.

### ಬ್ಯಾಂಕು ಉದ್ಯೋಗಿಗಳು

ಬ್ಯಾಂಕುಗಳಲ್ಲಿ ಮಾನವೀಯ ಸಂಬಂಧಗಳನ್ನು ಬೆಳೆಸುವಲ್ಲಿ ವ್ಯವ ಸ್ಥಾಪಕರೂ ಸಿಬ್ಬಂದಿ ವರ್ಗದವರೂ ಅಂಥ ಭಾವನೆಗಳನ್ನು ತಳೆದು ತಮ್ಮೊಳಗೆ ಅನ್ಯೋನ್ಯವಾಗಿದ್ದು ಗ್ರಾಹಕರ ಸೇವೆ ಮಾಡಿ ಈ ಸಂಬಂಧಗಳನ್ನು ಹೆಚ್ಚಿಸಬೇಕು. ಅವರ ಸೇವೆಯೆಂದೂ ಸಂಬಳ ಕ್ಕಾಗಿ ಸಂಜೆಯವರೆಗೆ ಕಾಲ ಕಳೆಯುವ ನಿರ್ಜೀವ ಕ್ರಿಯೆಯಾಗ ಬಾರದು. ಗ್ರಾಹಕನ ಪ್ರತಿಯೊಂದು ಸಮಸ್ಯೆ ಮತ್ತು ಬೇಡಿಕೆ ಯನ್ನು ಮಾನವೀಯ ದೃಷ್ಟಿಯಿಂದ ಕೇಳಿ, ಬ್ಯಾಂಕುಗಳಿಂದ ಪರಿಹಾರ ವಾಗಬಹುದಾದಂತಹ ಸಲಹೆಯನ್ನು ಮನದಟ್ಟು ಮಾಡಬೇಕು. ಗ್ರಾಹಕನೊಬ್ಬನಿಗೆ ಸಂಪೂರ್ಣ ತೃಪ್ತಿ ಕೊಡುವಂತಹ ಸೇವೆ ಅವರ ದಾಗಬೇಕು. ಬ್ಯಾಂಕು ಸಿಬ್ಬಂದಿಯೊಬ್ಬ ಕೇವಲ ಡೆಬಿಟ್ ಕ್ರೆಡಿಟ್ ಮಾಡಿ ಡೇ ಬುಕ್ಕಿನೊಂದಿಗೆ ದಿನದ ಕೆಲಸ ಮುಗಿಸುವುದಕ್ಕಿಂತಲೂ ಹೆಚ್ಚಿನ ಜವಾಬ್ದಾರಿಯನ್ನು ಮೈಗೂಡಿಸಿಕೊಳ್ಳಬೇಕು. ಪ್ರತಿಯೊಬ್ಬ ಗ್ರಾಹಕನಲ್ಲೂ ಬ್ಯಾಂಕಿನ ಬಗೆಗಿರುವ ಆದರವನ್ನು ಕಾಪಾಡಿಕೊಂಡು ಬಂದು ನಮ್ಮತನವನ್ನು ಸಾಧಿಸಬೇಕು. ಬರುವ ಪ್ರತಿಯೊಬ್ಬ ಗ್ರಾಹಕನಲ್ಲೂ ತೃಪ್ತಿಯ ನಗೆಯನ್ನು ಮೂಡಿಸಿ ಕಳುಹಿಸುವ ಕಲೆ ಇರಬೇಕು. ಇಲ್ಲಿ ಬೆಳೆಸಿಕೊಂಡು ಬಂದ ಸಂಬಂಧ ಬ್ಯಾಂಕಿನಿಂದ ಹೊರ ಗಿನ ಜೀವನದಲ್ಲೂ ಒಂದು ಉತ್ತಮ ಸ್ಥಾನವನ್ನು ದೊರಕಿಸಿಕೊಡು

ತ್ತದೆ ಮರ್ಯಾದೆ ಸಿಗುತ್ತದೆ. ಇಲ್ಲಿ ಸಿಬ್ಬಂದಿಗಳು ಯೋಚಿಸಬೇಕಾದ್ದು ತುಂಬ ಇದೆ. ನಾವು ಬದುಕುತ್ತಿರುವ ಸಮಾಜದ ಪರಿಸರದಲ್ಲಿ ಎಲ್ಲ ಜನರೊಂದಿಗೆ ನಾವೂ ಒಬ್ಬರಾಗಿರುತ್ತೇವೆ. ಅಲ್ಲಿ ನಾವು ವಿವಿಧ ಜನರೊಂದಿಗೆ ಹೊಂದಿ ಬಾಳಬೇಕು. ನಮ್ಮ ಆತ್ಮಗೌರವ, ಮರ್ಯಾದೆ, ಹೊರಗಿನ ಸ್ಥಾನಮಾನವನ್ನು ಹೆಚ್ಚಿಸಬೇಕಾದಲ್ಲಿ ನಮ್ಮಿಂದ ಸಾಧ್ಯವಾಗುವಂತಹ, ನಮಗೆ ಆತ್ಮತೃಪ್ತಿ ನೀಡುವ ಸೇವೆ ಮಾಡುವುದರಿಂದ ಒಂದು ಭದ್ರ ಸಂಬಂಧ ಬೆಳೆಯುತ್ತದೆ. ಇದೇ ಮಾನವೀಯ ಸಂಬಂಧ. ಇದರಿಂದಾಗಿ ನಮ್ಮ ಪ್ರತಿಷ್ಠೆ ಹೆಚ್ಚಾಗುವುದರಲ್ಲಿ ಸಂದೇಹವಿಲ್ಲ. ಇದು ಸಿಬ್ಬಂದಿಯ ವೈಯಕ್ತಿಕ ಜೀವನದಲ್ಲಿ ಒಂದು ದೊಡ್ಡ ಕ್ರಾಂತಿಯನ್ನೇ ಮಾಡುತ್ತದೆ. ನಮಗೆ ಬೇಕಾದ ಸಮಯದಲ್ಲಿ, ನಮ್ಮ ಆವಶ್ಯಕತೆಯನ್ನು ಪೂರೈಸಬೇಕಾದ ಸಮಯದಲ್ಲಿ ಗೌರವದ ಸಹಾಯ ಸಿಗುತ್ತದೆ. ಸಿಬ್ಬಂದಿ ಎಷ್ಟು ಹತ್ತಿರ ಹೋಗುತ್ತಾನೋ ಗ್ರಾಹಕನೂ ಅಷ್ಟೇ ಹತ್ತಿರ ಬರುತ್ತಾನೆ. ಆಗ ಬ್ಯಾಂಕಿಗೆ, ಬ್ಯಾಂಕಿನ ಸಿಬ್ಬಂದಿಗೆ ತನ್ನಲ್ಲಿ ಸಾಧ್ಯವಾದ ಪ್ರೋತ್ಸಾಹ, ಸಹಕಾರವನ್ನು ನೀಡುತ್ತಾನೆ. ಸಿಬ್ಬಂದಿಯೂ ಈ ಸಮಯದ ಸದುಪಯೋಗ ಪಡೆದು, ಜನಸಂಪರ್ಕ ಬೆಳೆಸಿ, ತನ್ನ ಬ್ಯಾಂಕಿನ ಹಾಗೂ ತನ್ನ ವೈಯಕ್ತಿಕ ಪ್ರತಿಷ್ಠೆಯನ್ನು ಬೆಳೆಸಿಕೊಂಡು ಹೋಗುವುದಕ್ಕೆ ಸಾಧ್ಯವಾಗುತ್ತದೆ.

ಒಟ್ಟಿನಲ್ಲಿ ಬ್ಯಾಂಕುಗಳಲ್ಲಿ ಮಾನವೀಯ ಸಂಬಂಧಗಳು ಬೆಳೆಯಲೇಬೇಕು. ಈ ದೃಷ್ಟಿಕೋನ ಬ್ಯಾಂಕುಗಳಲ್ಲಿ ಬರಬೇಕು. ವ್ಯವಸ್ಥಾಪಕ ವರ್ಗ ಮತ್ತು ಸಿಬ್ಬಂದಿಯವರು ಈ ದಿಶೆಯಲ್ಲಿ ಬದಲಾಗಬೇಕು. ಗ್ರಾಹಕರನ್ನು ಒಲಿಸುವ ಮತ್ತು ಬ್ಯಾಂಕಿನ ಆಂತರಿಕ ಚಟುವಟಿಕೆಗಳಲ್ಲಿ ಜೀವ ತುಂಬುವ ಈ ಸಂಬಂಧಗಳನ್ನು ಬೆಳೆಯಿಸುವಲ್ಲಿ ಬ್ಯಾಂಕುಗಳು ಮತ್ತು ಸರ್ಕಾರ ಕಾರ್ಯೋನ್ಮುಖವಾಗಬೇಕು.



## ಬದಲಾದ ದೃಷ್ಟಿ

ಉದ್ಯೋಗಿಯ ದುಡಿಯುವ ಇಚ್ಛೆಯನ್ನು ನಿರ್ಣಯಿಸುವ ಪ್ರಭಾವಗಳ ಬಗೆಗೆ ವ್ಯವಸ್ಥಾಪನದ ದೃಷ್ಟಿ ಈಗ ಬದಲಾಗುತ್ತಿದೆ. ಈ ಬದಲಾವಣೆ ಸಾಕಷ್ಟು ವ್ಯಾಪಕವಾದ್ದು ಹಾಗೂ ಇದು ಬಲು ಹಿಂದೆಯೇ ಆಗಬೇಕಾಗಿದ್ದದ್ದು.

ಉದ್ಯೋಗಿಗಳು ಕಾರ್ಯ ಮಾಡುವಂತೆ ಚೋದಿಸಬಲ್ಲ 'ಪ್ರಮುಖ ಚಾಲಕ ಶಕ್ತಿ'ಯೆಂದರೆ ಅಧಿಕಾರವೇ ಎಂಬುದಾಗಿ ಸರ್ಕಾರ, ಸೈನ್ಯ, ಧರ್ಮಸಂಸ್ಥೆ ಮತ್ತು ಮೊದಮೊದಲ ವ್ಯವಹಾರ ಸಂಘಟನೆಗಳ ವ್ಯವಸ್ಥಾಪನೆ ಹಿಂದಿನಿಂದಲೂ ತಳೆದುಕೊಂಡು ಬಂದಿದ್ದ ಭಾವನೆ. ಏನನ್ನು ಮಾಡಬೇಕು ಮತ್ತು ಹೇಗೆ ಮಾಡಬೇಕು ಎಂಬುದರ ಬಗ್ಗೆ ಎಲ್ಲ ಮುಖ್ಯ ತೀರ್ಮಾನಗಳನ್ನೂ ನಾಯಕರೇ ತೆಗೆದುಕೊಳ್ಳಬೇಕು ಎಂಬುದಾಗಿ ಭಾವಿಸಲಾಗಿತ್ತು. ಇತರ ಕಾರ್ಯದಲ್ಲಿ ತೊಡಗುವಂತೆ ಆಜ್ಞಾಪಿಸಲು, ಸಾಧನೆಗೆ ತಕ್ಕಂತೆ ಬಹುಮಾನ ನೀಡಲು ಹಾಗೂ ದಂಡ ವಿಧಿಸಲು ಅವರಿಗೆ ಅಧಿಕಾರ ಇರಬೇಕು. ಈ ಅಧಿಕಾರ ಹರಿದು ಬರತಕ್ಕದ್ದು ಚರ್ಚಿನಿಂದ, ಪ್ರಭುತ್ವದಿಂದ, ಅಸ್ತಿತ್ವದಲ್ಲಿರುವ ಖಾಸಗಿ ಒಡೆತನದ ಹಕ್ಕುಗಳಿಂದ ಅಥವಾ ಬೇರಾವುದೇ ಮೂಲದಿಂದ ಎಂದು ಭಾವಿಸಲಾಗಿತ್ತು.

ಚೋದನೆ ಕುರಿತಂತೆ ಅತ್ಯಂತ ವಿಭಿನ್ನವಾದ ದರ್ಶನವೊಂದು ನಿಧಾನವಾಗಿ ವಿಕಾಸಹೊಂದಿದೆ. ಈ ವಿಕಾಸ ಎಷ್ಟು ಈಚಿನದೆಂದರೆ, ಮಾನವನ ಇತಿಹಾಸದಲ್ಲಿ ಈ ಅವಧಿ ಗಡಿಯಾರದ ಒಂದೇ ಒಂದು ಟಿಕ್ ಶಬ್ದದಷ್ಟು ಕಿರಿದಾದ್ದು. ಇದಕ್ಕಿನ್ನೂ ಸಾರ್ವತ್ರಿಕ ಮನ್ನಣೆ ಲಭ್ಯವಾಗಿಲ್ಲವಾಗಲಿ, ಮೇಲಿಂದ ಕೆಳಮೊಗನಾಗಿ ಅಧಿಕಾರ ಹರಿಯುವಂಥ ನಾಯಕತ್ವ ಎಷ್ಟು ಸೀಮಿತವೆಂಬುದನ್ನು ಈಗ ಗುರುತಿಸಲಾಗುತ್ತಿದೆ. ಜೀವನಮಟ್ಟಗಳು ಏರಿರುವುದರಿಂದ, ವ್ಯಕ್ತಿಗಳು ತಮ್ಮ ಜೀವನನಿರ್ವಹಣೆಗಾಗಿ ಒಬ್ಬ ಉದ್ಯೋಗದಾತನನ್ನೇ ಅವಲಂಬಿಸುವುದು ಕಡಿಮೆಯಾಗುತ್ತಿರುವುದರಿಂದ ಅಧಿಕಾರಬಲದಿಂದ ನಿಯಂತ್ರಣ ಸಾಧಿಸುವ ಕ್ರಮದ ಬಗ್ಗೆ ಉದ್ಯೋಗಿಗಳು ಅಸಮಾಧಾನ ವ್ಯಕ್ತಪಡಿಸುವುದು ಕಂಡುಬರುತ್ತಿದೆ. ಇಷ್ಟೇ ಪ್ರಮುಖವಾದ ಇನ್ನೊಂದು ಅಂಶವೆಂದರೆ, ಶಿಕ್ಷಣದ ಮಟ್ಟಗಳು ಏರಿದಂತೆ ವ್ಯಕ್ತಿಗಳು ತಮ್ಮ ಆಕಾಂಕ್ಷೆಯ ಮಟ್ಟಗಳನ್ನು ಹೆಚ್ಚಿಸಿಕೊಳ್ಳುತ್ತಿದ್ದಾರೆ, ತಮ್ಮ ಜೀವನಗಳಿಂದ ಹಿಂದೆ ಏನೇನು ಸಾಧಿಸಬಹುದಿತ್ತೋ ಅದಕ್ಕಿಂತ ಹೆಚ್ಚು ಸಾಧಿಸಲು ಆಶಿಸುತ್ತಿದ್ದಾರೆ.†

—ಸಿ. ಎಲ್. ಲಿಟ್‌ಲ್‌ಫೀಲ್ಡ್, ಫ್ರಾಂಕ್ ಎಂ. ರಾಚೆಲ್, ಡೊನಾಲ್ಡ್ ಎಲ್. ಕ್ಯಾರುತ್

† *Office and Administrative Management, System Analysiss, Data Processing and Office Services* (1978) Prentice-Hall of India Private Ltd, N. Delhi ಪು. 441–2

# ರಫ್ತು ಹಣಕಾಸು

ಸಿ. ಎಸ್. ರಾಮಕೃಷ್ಣ

ರಫ್ತಿನಿಂದ ದೊರೆಯುವ ವಿದೇಶಿ ವಿನಿಮಯ ಭಾರತದಂಥ ಅಭಿವೃದ್ಧಿ ಶೀಲ ದೇಶಕ್ಕೆ ಅತ್ಯಮೂಲ್ಯವಾದ್ದು. ಒಂದು ರಾಷ್ಟ್ರ ತನ್ನ ಆರ್ಥಿಕ ಸ್ಥಿತಿಯನ್ನು ಉತ್ತಮವಾಗಿಟ್ಟುಕೊಂಡಿರುವುದಕ್ಕೆ ಸಾಕ್ಷಿ ಅದರ ರಫ್ತು ಸಾಮರ್ಥ್ಯ. ಹೊರದೇಶದಿಂದ ಮತ್ತು ಸಂಸ್ಥೆಗಳಿಂದ ಪಡೆದ ಸಾಲದ ಮರುಪಾವತಿಗೆ ರಫ್ತಿನಿಂದ ಬರುವ ವಿದೇಶಿ ವಿನಿಮಯ ಅತ್ಯಂತ ಸಹಕಾರಿ. ಅದು ಆಮದು ಹಣಕಾಸಿಗೆ ಅತ್ಯಂತ ಆವಶ್ಯಕ. ರಫ್ತಿನಿಂದ ರಾಷ್ಟ್ರದ ಸಂಪನ್ಮೂಲಗಳನ್ನು ಆದಷ್ಟು ಉತ್ತಮ ರೀತಿಯಲ್ಲಿ ಉಪಯೋಗಿಸಿಕೊಳ್ಳಬಹುದು. ಭಾರತದ ವಿದೇಶಿ ಸಾಲದ ಮಿತಿಯನ್ನು ಪರಿಶೀಲಿಸಿದಾಗ ನಮ್ಮ ದೇಶ ಹೆಚ್ಚುಹೆಚ್ಚಾಗಿ ರಫ್ತು ಮಾಡುವ ವಿಷಯಕ್ಕೆ ಇನ್ನೂ ಹೆಚ್ಚು ಪ್ರಾಮುಖ್ಯ ಕೊಡ ಬೇಕಾಗುತ್ತದೆ.

ನಮ್ಮ ದೇಶದ ರಫ್ತನ್ನು 1970–71ರಿಂದ 1980–81ರ ವರೆಗೆ ಹೋಲಿಸಿದಾಗ ಗಮನಾರ್ಹ ಬದಲಾವಣೆ ತೋರಿಬರುತ್ತದೆ. ಅದು 1970–71ರ ದಶಕದಲ್ಲಿ ರೂ. 1,535 ಕೋಟಿ ಆಗಿದ್ದರೆ, 1980–81ರಲ್ಲಿ ರೂ. 8,908 ಕೋಟಿ ಆಗಿದೆ. 1983–84ರ ವರ್ಷದ ರಫ್ತು ಆದಾಯವನ್ನು ರೂ. 9,800 ಕೋಟಿ ಎಂದು ಅಂದಾಜು ಮಾಡಲಾಗಿದೆ. ಸರ್ಕಾರ ಶ್ರೀ ಟಂಡನ್ ಅವರ ನೇತೃತ್ವದ ಆಯೋಗದಲ್ಲಿ ಮಾಡಿರುವ ಶಿಫಾರಸಿನ ಪ್ರಕಾರ 1990–91ರಲ್ಲಿ ನಮ್ಮ ರಫ್ತು ಆದಾಯ ರೂ. 17,970 ಕೋಟಿ ಆಗಬೇಕು. ಈ ದಿಸೆಯಲ್ಲಿ ಭಾರಿ ಯಂತ್ರಗಳು ಮತ್ತು ಬೃಹತ್ ನಿರ್ಮಾಣಗಳ ಪ್ರಗತಿ ಗಮನಾರ್ಹ. ನಮ್ಮ ರಫ್ತು ವ್ಯಾಪಾರದಲ್ಲಿ ಗಮನಾರ್ಹ ಪ್ರಗತಿ ಸಾಧಿಸಬೇಕಾದರೆ, ಬ್ಯಾಂಕುಗಳ ಪಾತ್ರ ಬಹಳ ಹೆಚ್ಚಿನದು.

ರಫ್ತು ವ್ಯಾಪಾರದಲ್ಲಿ ತೊಡಗಿರುವವರಿಗೆ ಹಣದ ಆವಶ್ಯಕತೆ ಬಹಳ ಇರುತ್ತದೆ. ರಫ್ತು ವ್ಯಾಪಾರದಲ್ಲಿ ಬಹಳವಾಗಿ ಪೈಪೋಟಿ ಇರುತ್ತದೆ. ನಮ್ಮ ದೇಶದ ರಫ್ತುದಾರರು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ವ್ಯಾಪಾರ ಮಾಡಲು ತೀವ್ರ ಪೈಪೋಟಿ ಎದುರಿಸ ಬೇಕು. ಕೈಗಾರಿಕೆಯಲ್ಲಿ ಅತಿ ಮುಂದುವರಿದ ದೇಶಗಳ ಜೊತೆ ನಾವು ಸ್ಪರ್ಧಿಸಿ ನಮ್ಮ ಸರಕನ್ನು ಮಾರುಕಟ್ಟೆಗೆ ತಲುಪಿಸಬೇಕು. ಆದುದ ರಿಂದ ರಫ್ತುದಾರನಿಗೆ ಯಾವುದೇ ರೀತಿ ಹಣದ ಕೊರತೆ ಇರಬಾರದು. ಆದುದರಿಂದ ರಫ್ತು ಉದರಿಯನ್ನು ಆದಷ್ಟು ಬೇಗ ದೊರಕಿಸು ವುದು ಬ್ಯಾಂಕುಗಳ ಕರ್ತವ್ಯ. ಇದನ್ನು ಗಮನಿಸಿ ಸರ್ಕಾರ ರಫ್ತು ಹಣ ಉದರಿಯನ್ನು ಆದ್ಯತಾ ಸಾಲವೆಂದು ಪರಿಗಣಿಸಿದೆ. ಮೇಲೆ ಹೇಳಿದಂತೆ ರಫ್ತು ಸಾಲವನ್ನು ಎರಡು ಸಮಯಗಳಲ್ಲಿ ನೀಡಬಹುದು.

1 ಸರಕು ರಫ್ತು ಆಗುವುದರ ಮೊದಲು,

2 ಸರಕು ರಫ್ತು ಆದ ಅನಂತರ.

### ರಫ್ತುಪೂರ್ವ ಉದರಿ

ರಫ್ತುದಾರ ನಿಗದಿ ಮಾಡಿದ ಕಾಲದೊಳಗೆ ತಾನು ರಫ್ತುಮಾಡ ಬೇಕಾದ ಸರಕನ್ನು ತಯಾರು ಮಾಡಬೇಕು ಅಥವಾ ದೊರಕಿಸಿ ಕೊಳ್ಳಬೇಕು. ಈ ಕಾರ್ಯಕ್ಕೆ ಹಣದ ತೀವ್ರ ಆವಶ್ಯಕತೆ ಇರುವುದು. ತನ್ನ ಸರಕನ್ನು ಅವನು ಬೇರೆ ಜನರಿಂದ ಕೊಳ್ಳಬೇಕಾಗಬಹುದು. ಇದಕ್ಕೆ ಮಾರುಕಟ್ಟೆಯಲ್ಲಿ ನಿಗದಿಯಾದ ದರವನ್ನು ರಫ್ತುದಾರ ಕೊಡಬೇಕಾಗುತ್ತದೆ. ಈ ತೀವ್ರ ಹಣಕಾಸಿನ ಮುಗ್ಗಟ್ಟನ್ನು ಪರಿ ಹರಿಸುವುದಕ್ಕೆ ಅವನು ಬ್ಯಾಂಕ್ ಸೌಲಭ್ಯವನ್ನು ಅಪೇಕ್ಷಿಸು ತ್ತಾನೆ. ಇದು ರಫ್ತುಪೂರ್ವ ಹಣಕಾಸು. ಈ ಸಾಲವನ್ನು ರಫ್ತುದಾರ ತನ್ನ ರಫ್ತಿನಿಂದ ಬರುವ ಹಣದಲ್ಲಿ ತೀರಿಸಬೇಕಾಗು ವುದು. ಈ ಸಾಲಕ್ಕೆ ಸರಕು ಹೊರತು ಬೇರೆ ಆಧಾರವಿರುವುದಿಲ್ಲ. ಈ ಸಾಲವನ್ನು ಕೊಡುವುದಕ್ಕೆ ಮುಂಚೆ ಬ್ಯಾಂಕುಗಳು ರಫ್ತುದಾರ ವಿದೇಶದಿಂದ ಉದರಿ ಪತ್ರ ಪಡೆದಿದ್ದಾನೆಯೆ ಎಂದು ತಿಳಿಯುವುದು ಅತ್ಯಾವಶ್ಯಕ. ಈ ಪತ್ರದಿಂದಾಗಿ ರಫ್ತುದಾರ ಎಷ್ಟು ಮೌಲ್ಯದ ಸರಕನ್ನು ರಫ್ತುಮಾಡಬಹುದು ಎಂಬುದು ಬ್ಯಾಂಕಿಗೆ ಗೊತ್ತಾಗು ವುದು. ಆ ಮಾಪನವನ್ನಿಟ್ಟುಕೊಂಡು ರಫ್ತುದಾರನಿಗೆ ಅಗತ್ಯವಾದ ರಫ್ತು ಮುಂಚಿನ ಉದರಿಯನ್ನು ಬ್ಯಾಂಕುಗಳು ನೀಡುತ್ತವೆ. ಈ ಸೌಲಭ್ಯದಿಂದ ರಫ್ತುದಾರನ ಹಣದ ಚಿಂತೆ ಬಗೆಹರಿಯುತ್ತದೆ. ಈ ಸೌಲಭ್ಯವನ್ನು ಪಡೆಯಲು ರಫ್ತುದಾರ ಭಾರತೀಯ ರಿಸರ್ವ್ ಬ್ಯಾಂಕಿನಿಂದ ಅಧಿಕೃತ ರಫ್ತು ಕ್ರಮಸಂಖ್ಯೆ ಪಡೆದಿರಬೇಕು. ಮತ್ತು ಜಾಗ್ರತ ಪಟ್ಟಿಯಲ್ಲಿ ತನ್ನ ಹೆಸರಿರಕೂಡದು. ರಫ್ತು ಉದರಿ ಖಾತರಿ ನಿಗಮ ಮತ್ತು ಭಾರತೀಯ ರಿಸರ್ವ್ ಬ್ಯಾಂಕ್ ಈ ಜಾಗ್ರತ ಪಟ್ಟಿಯನ್ನು ತಯಾರಿಸುವುವು.

ಈ ಸಾಲಸೌಲಭ್ಯವನ್ನು ಸರಕು ರಫ್ತಾದ ಅನಂತರ ಬರುವ ಹಣದಿಂದ ತೀರಿಸಬೇಕು. ಈ ರಫ್ತಿಗೆ ಮುಂಚಿನ ಸಾಲವನ್ನು ಪಡೆದ ರಫ್ತುದಾರ ಬ್ಯಾಂಕಿಗೆ ತನ್ನ ಆವಶ್ಯಕತೆ ಮತ್ತು ಸರಕನ್ನು ರಫ್ತುಮಾಡುವ ಸಾಮರ್ಥ್ಯದ ದೃಢೀಕರಣ ತೋರಿಸಬೇಕು.

### ರಫ್ತಿನ ಅನಂತರದ ಉದರಿ

ಸರಕು ಭಾರತದ ತೀರವನ್ನು ಬಿಟ್ಟ ಅನಂತರದಲ್ಲಿ ಇದನ್ನು ನೀಡಲಾ ಗುವುದು. ವಿದೇಶದಿಂದ ಬಂದ ಉದರಿ ಪತ್ರದಲ್ಲಿ ನಮೂದಿಸಲಾದ ಪತ್ರಗಳನ್ನು ಬ್ಯಾಂಕಿಗೆ ರಫ್ತುದಾರ ಒಪ್ಪಿಸಿ ಈ ಸಾಲವನ್ನು ಪಡೆ ಯಬಹುದು. ಈ ಉದರಿ ಪತ್ರಕ್ಕೆ ಬಹಳ ಮಹತ್ವವಿದೆ. ಇದನ್ನು ಅಂತರರಾಷ್ಟ್ರೀಯ ಬ್ಯಾಂಕ್ ನಮ್ಮ ದೇಶದ ಯಾವುದಾದರೊಂದು ಅಧಿಕೃತ ಬ್ಯಾಂಕಿನ ಮೇಲೆ ನೀಡುತ್ತದೆ. ರಫ್ತುದಾರ ಕ್ರಮವಾಗಿ ಉದರಿ ಪತ್ರದಲ್ಲಿ ನಮೂದಿಸಿರುವ ಪತ್ರಗಳನ್ನು ಬ್ಯಾಂಕಿಗೆ ಒಪ್ಪಿಸ ಬೇಕು. ಬ್ಯಾಂಕುಗಳು ಅವನ್ನು ಪರಿಶೀಲಿಸಿ, ಆ ಪತ್ರಗಳು ಉದರಿ

* ಸಿ. ಎಸ್. ರಾಮಕೃಷ್ಣ, ಇಂಡಿಯನ್ ಓವರ್‌ಸೀಸ್ ಬ್ಯಾಂಕ್, ಕೆಂಪೇಗೌಡ ರಸ್ತೆ, ಬೆಂಗಳೂರು 9

ಪತ್ರದಲ್ಲಿ ನಮೂದಿಸಿರುವಂತೆ ಇವೆಯೆ ಎಂಬುದನ್ನು ನೋಡಿ ರಫ್ತು ದಾರನಿಗೆ ಸಾಲ ನೀಡುತ್ತವೆ.

ರಫ್ತುದಾರ ಈ ಉದರಿ ಖಾತರಿ ಪತ್ರದಲ್ಲಿ ನಮೂದಿಸಲಾದ ಪತ್ರಗಳನ್ನು ಯಾವ ಲೋಪದೋಷವೂ ಇಲ್ಲದಂತೆ ಇರುವ ಹಾಗೆ ತಯಾರಿಸಬೇಕು. ಸ್ವಲ್ಪ ವ್ಯತ್ಯಾಸವಾದರೂ ಬ್ಯಾಂಕುಗಳು ಹಣವನ್ನು ಕೊಡುವುದಿಲ್ಲ. ಸರಕನ್ನು ರಫ್ತುದಾರ ತನ್ನ ವಿದೇಶಿ ವ್ಯಾಪಾರಿಗೆ ಕಳುಹಿಸಿದ ತಕ್ಷಣವೇ ಈ ಹಣವನ್ನು ಪಡೆಯಬಹುದು. ಅಥವಾ ಪತ್ರಗಳನ್ನು ಕಳುಹಿಸಿ ಅನಂತರ ವಿದೇಶಿ ವ್ಯಾಪಾರಿಯಿಂದ ಹಣ ವನ್ನು ಪಡೆಯಬಹುದು. ಈ ಸಾಲವನ್ನು ಕೊಡುವಾಗ ಬ್ಯಾಂಕು ಭಾರತೀಯ ರಿಸರ್ವ್ ಬ್ಯಾಂಕ್ ಮತ್ತು ವಿದೇಶಿ ವಿನಿಮಯ ವ್ಯಾಪಾರಿಗಳ ಸಂಘ ಗೊತ್ತುಪಡಿಸಿದ ನಿಯಮಕ್ಕೆ ಅನುಸಾರವಾಗಿ ನಡೆಯಬೇಕು.

ವಿದೇಶಿ ರಫ್ತು ವ್ಯಾಪಾರದಲ್ಲಿ ವಾಣಿಜ್ಯ ಬ್ಯಾಂಕುಗಳ ಪಾತ್ರ ಅತಿ ಮುಖ್ಯ. ಇದು ವಾಣಿಜ್ಯ ಬ್ಯಾಂಕುಗಳಿಗೆ ಲಾಭದಾಯಕ ವ್ಯವಹಾರ, ಮೇಲಾಗಿ ಈ ವ್ಯಾಪಾರದಿಂದ ನಮ್ಮ ದೇಶಕ್ಕೆ ಬೇಕಾ ಗುವ ಅತ್ಯಮೂಲ್ಯ ವಿದೇಶಿ ವಿನಿಮಯ ದೊರೆಯುತ್ತದೆ. ಈ ಸಾಲವನ್ನು ಆದ್ಯತಾ ಸಾಲವೆಂದು ಕೇಂದ್ರ ಸರ್ಕಾರ ನಿರ್ಧರಿಸಿದೆ.

### ಉದರಿ ಖಾತರಿ ಪತ್ರ

ಇತ್ತೀಚಿನ ದಿವಸಗಳಲ್ಲಿ ಉದರಿ ಖಾತರಿ ಪತ್ರದ ಪಾತ್ರ ಬಹುಮುಖ್ಯ ವಾದ್ದು ಈ ಪತ್ರದಿಂದ ರಫ್ತುದಾರನಿಗೆ ಅತಿ ಶೀಘ್ರದಲ್ಲಿ ಹಣ ದೊರೆಯುವುದು. ಆಮದು ಮಾಡಿಕೊಳ್ಳುವ ರಾಷ್ಟ್ರದ ಒಂದು ಬ್ಯಾಂಕು ರಫ್ತು ಮಾಡುವ ರಾಷ್ಟ್ರದ ಬ್ಯಾಂಕೊಂದರ ಮೇಲೆ ಈ ಪತ್ರವನ್ನು ಕಳುಹಿಸುತ್ತದೆ. ಈ ಪತ್ರದಲ್ಲಿ ಅಗತ್ಯವಾಗಿ ಬೇಕಾದ ಪತ್ರಗಳ ಪಟ್ಟಿಯೊಂದಿರುತ್ತದೆ. ಈ ಪಟ್ಟಿಗನುಸಾರವಾಗಿ ಪತ್ರಗಳನ್ನು ರಫ್ತುದಾರ ಸಿದ್ಧಪಡಿಸಿಕೊಂಡು ತನ್ನ ಬ್ಯಾಂಕಿಗೆ ನೀಡಿದಾಗ ಬ್ಯಾಂಕು ಆ ಪತ್ರಗಳನ್ನು ಪರಿಶೀಲಿಸಿ ಸಾಲವನ್ನು ಕೊಡುತ್ತದೆ. ಉದರಿ ಖಾತರಿ ಪತ್ರಗಳು ಅಂತರರಾಷ್ಟ್ರೀಯ ವ್ಯಾಪಾರ ಸಂಸ್ಥೆಯಿಂದ ಮನ್ನಣೆ ಪಡೆದಿರುತ್ತವೆ. ಈಗ ಕ್ರಮಾಂಕ 400ರ ಪ್ರಕಾರ ಉದರಿ ಖಾತರಿ ಪತ್ರಗಳನ್ನು ಸಿದ್ಧಮಾಡಿಕೊಳ್ಳ ಬೇಕು.

### ಇತರ ಸಂಸ್ಥೆಗಳು

ಮೇಲೆ ಕಾಣಿಸಿದ ರೀತಿಯಲ್ಲಿ ವಾಣಿಜ್ಯ ಬ್ಯಾಂಕುಗಳು ರಫ್ತು ವ್ಯಾಪಾರಕ್ಕೆ ಹಣಕಾಸಿನ ಸೌಲಭ್ಯ ಒದಗಿಸುತ್ತವೆ. ಪರದೇಶದಲ್ಲಿ ಕೈಗೊಳ್ಳುವ ಕಾಮಗಾರಿ ಕೆಲಸಕ್ಕೂ ಭಾರಿ ಯಂತ್ರೋಪಕರಣಗಳ ರಫ್ತಿಗೂ ಹಣಕಾಸು ಒದಗಿಸಲು ಬೇರೆ ಹಣಕಾಸು ಸಂಸ್ಥೆಗಳಿವೆ. ಇವುಗಳ ಪೈಕಿ ಮುಖ್ಯವಾದವು ಇವು :

1 ರಫ್ತಾಮದು ಬ್ಯಾಂಕು,
2 ಕೈಗಾರಿಕಾ ಅಭಿವೃದ್ಧಿ ಬ್ಯಾಂಕು,
3 ಭಾರತೀಯ ಕೈಗಾರಿಕಾ ಹಣಕಾಸು ನಿಗಮ.

ಈ ರೀತಿಯ ಸಾಲ ಸೌಲಭ್ಯದಲ್ಲಿ ಭಾರಿ ವೆಚ್ಚ ತಗಲುತ್ತದೆ. ಇದನ್ನು ನೀಡಲು ಮೇಲ್ಕಂಡ ಸಂಸ್ಥೆಗಳು ಭಾರೀ ಪ್ರಮಾಣದ ಸಾಲ ನೀಡುತ್ತವೆ.

ಕೇವಲ ಎರಡು ವರ್ಷಗಳ ಹಿಂದೆ ಸ್ಥಾಪಿತವಾದ ರಫ್ತಾಮದು ಬ್ಯಾಂಕ್ ರಫ್ತು ಹಣಕಾಸಿನಲ್ಲಿ ಭಾರಿ ಪ್ರಗತಿ ಸಾಧಿಸಿದೆ. ಈ ಬ್ಯಾಂಕನ್ನು ಅಮೆರಿಕ ಮತ್ತು ಜಪಾನ್ ದೇಶಗಳಲ್ಲಿ ಸ್ಥಾಪಿಸಲಾದ ಬ್ಯಾಂಕುಗಳ ಮಾದರಿಯಲ್ಲಿ ಸ್ಥಾಪಿಸಲಾಗಿದೆ. ಹೆಚ್ಚು ಗಾತ್ರದ ಸಾಲವನ್ನು ಈ ಬ್ಯಾಂಕ್ ಈಗ ಪೂರೈಸುತ್ತಿದೆ.

ಭಾರಿ ಕಾರ್ಖಾನೆಗಳು ತಮ್ಮ ಯಂತ್ರೋಪಕರಣಗಳನ್ನು ರಫ್ತು ಮಾಡುವುದಕ್ಕೆ ಕೈಗಾರಿಕಾ ಅಭಿವೃದ್ಧಿ ಬ್ಯಾಂಕು ಸಹಾಯ ಮಾಡು ತ್ತಿದೆ. ಇದೇ ರೀತಿ ಭಾರತೀಯ ಕೈಗಾರಿಕಾ ಹಣಕಾಸು ನಿಗಮ ರಫ್ತುದಾರರಿಗೆ ಸಾಲಸೌಲಭ್ಯಗಳನ್ನು ನೀಡುತ್ತಿದೆ. ರಫ್ತು ಹಣ ಕಾಸಿನಲ್ಲಿ ಬ್ಯಾಂಕಿಗೆ ಬರುವ ಲಾಭ ಹೆಚ್ಚು. ಆದ್ದರಿಂದ ಇತ್ತೀಚಿನ ದಿನಗಳಲ್ಲಿ ರಫ್ತು ಹಣಕಾಸು ನೀಡಲು ಎಲ್ಲ ವಾಣಿಜ್ಯ ಬ್ಯಾಂಕುಗಳೂ ಬಹಳವಾಗಿ ಪ್ರಯತ್ನಿಸುತ್ತಿವೆ.

ಹೀಗೆ ಮೇಲೆ ಹೇಳಿದ ರೀತಿಯಲ್ಲಿ ವಾಣಿಜ್ಯ ಬ್ಯಾಂಕುಗಳು ಮತ್ತು ಅಭಿವೃದ್ಧಿ ಬ್ಯಾಂಕುಗಳು ರಫ್ತು ವ್ಯಾಪಾರಕ್ಕೆ ಅಗತ್ಯವಾದ ರೀತಿಯಲ್ಲಿ ಹಣಕಾಸನ್ನು ಪೂರೈಸುತ್ತಿವೆ. ಆದರೆ ಈ ಭಾರಿ ಪರಿ ಮಾಣದ ಸಾಲಸೌಲಭ್ಯ ನೀಡುವ ಬ್ಯಾಂಕುಗಳು ಆ ಹಣವನ್ನು ಯಾವ ತೊಂದರೆಯೂ ಇಲ್ಲದೆ ವಾಪಸು ಪಡೆಯಬೇಕೆಂಬುದು ಸರಿಯೆ. ಆದರೆ ಅಂತರರಾಷ್ಟ್ರೀಯ ವ್ಯಾಪಾರ ಇಂದು ಎಂದಿಗಿಂತ ಹೆಚ್ಚು ಸ್ಪರ್ಧಾತ್ಮಕವಾಗಿದೆ. ನಮ್ಮ ರಫ್ತುದಾರ ಇತರ ಮುಂದು ವರಿದ ದೇಶಗಳ ಜೊತೆ ಸ್ಪರ್ಧಿಸಬೇಕಾಗಿದೆ. ಮೇಲೆ ಹೇಳಿದಂತೆ ನಾವು ರಫ್ತು ಮಾಡಿದ ಸರಕು ಅಲ್ಲಿಗೆ ತಲುಪಿ ಹಣ ಪಾವತಿಯಾಗ ಬೇಕಾದರೆ ಹೆಚ್ಚು ಸಮಯ ಬೇಕು. ಬ್ಯಾಂಕುಗಳು ಉದರಿ ಖಾತರಿ ಪತ್ರದ ಮೇಲೆ ಅಥವಾ ರಫ್ತು ಸಿದ್ಧತಾ ಉದರಿ ಖಾತರಿಯ ಮೇಲೆ ಸಾಲವನ್ನು ಭಾರಿ ಪರಿಮಾಣದಲ್ಲಿ ನೀಡುತ್ತವೆ. ರಫ್ತುದಾರ ತಾನು ಕಂಡರಿಯದ ವಿದೇಶಿ ಗ್ರಾಹಕನ ಜೊತೆ ವ್ಯಾಪಾರ ಸಂಬಂಧವನ್ನು ಬೆಳೆಸಬೇಕಾಗುತ್ತದೆ. ರಫ್ತುದಾರ ತನ್ನ ಹಣ ಪಾವತಿಯಾಗುವುದೋ ಇಲ್ಲವೋ ಎನ್ನುವ ಬಗ್ಗೆ ಯೋಚಿಸಬೇಕಾಗುತ್ತದೆ. ಕಂಡರಿಯದ ವಿದೇಶಿ ಗ್ರಾಹಕನಿಗೆ ಉದರಿ ನೀಡಬೇಕಾದಾಗ ರಫ್ತುದಾರ ಹಿಂಜರಿ ಯುವುದು ಸಹಜ. ವಿದೇಶಿ ಗ್ರಾಹಕನಿಗೆ ಉದರಿ ಕೊಡದಿದ್ದರೆ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ರಫ್ತುದಾರ ಸ್ಪರ್ಧಿಸುವುದು ಕಷ್ಟ. ರಫ್ತುದಾರನ ಈ ಚಿಂತೆಯನ್ನು ದೂರಮಾಡಲು ಭಾರತ ಸರ್ಕಾರ 1955ರಲ್ಲಿ ರಫ್ತು ಉದರಿ ಖಾತರಿ ಸಮಿತಿಯ ಶಿಫಾರಸನ್ನು ಒಪ್ಪಿ 1957ರಲ್ಲಿ ರಫ್ತು ನಷ್ಟ ವಿಮಾ ನಿಗಮವನ್ನು ಸ್ಥಾಪಿಸಿತು. ಇದರ ಮೂಲ ಉದ್ದೇಶ, ಭಾರತದಿಂದ ರಫ್ತು ಮಾಡಲಾದ ಸರಕು ಗಳಿಗೆ ಸಲ್ಲಿಸಲಾದ ಸೇವೆಗೆ ಬರಬೇಕಾದ ಹಣದ ಬಗ್ಗೆ ಖಾತರಿ ನೀಡುವುದು. 1964ರಲ್ಲಿ ಈ ಸಂಸ್ಥೆ ತನ್ನ ಸೌಲಭ್ಯಗಳನ್ನು ವಿಸ್ತರಿಸಿ ತನ್ನ ಹೆಸರನ್ನು ರಫ್ತು ಖಾತರಿ ಉದರಿ ನಿಗಮ (ಎಕ್ಸ್‌ಪೋರ್ಟ್ ಕ್ರೆಡಿಟ್ ಗ್ಯಾರಂಟಿ ಕಾರ್ಪೊರೇಷನ್) ಎಂದು ಬದಲಾಯಿಸಿಕೊಂಡಿತು. ಈ ಸಂಸ್ಥೆ ಕೇಂದ್ರ ವಾಣಿಜ್ಯ ಮಂಡಳಿಯ ನಿಯಂತ್ರಣದಲ್ಲಿರುತ್ತದೆ. ಈ ಸಂಸ್ಥೆಯ ದೈನಂದಿನ ಆಡಳಿತ ನಿರ್ದೇಶಕ ಮಂಡಳಿಯ ಕೈಯಲ್ಲಿರುತ್ತದೆ. ಈ ಮಂಡಳಿಯ ಸದಸ್ಯರು ಬ್ಯಾಂಕಿಂಗ್, ವಿಮೆ, ಕೈಗಾರಿಕೆ ಮತ್ತು ವಾಣಿಜ್ಯ ರಂಗಕ್ಕೆ ಸೇರಿರುತ್ತಾರೆ.

ರಫ್ತು ಖಾತರಿ ಉದರಿ ನಿಗಮ ರಫ್ತುದಾರರಿಗೆ ನಾಲ್ಕು ಬಗೆಯ ವಿಮಾ ರಕ್ಷಣೆ ಒದಗಿಸುತ್ತದೆ :

1 ರಫ್ತು ರವಾನೆ ವ್ಯಾಪಕ ನಷ್ಟ ಸಂಭವ ವಿಮೆ,
2 ರಫ್ತು ರವಾನೆ ನಷ್ಟ ಸಂಭವ (ರಾಜಕೀಯ ಬೆಳವಣಿಗೆ) ವಿಮೆ,

3 ರಫ್ತು ಕರಾರು ವ್ಯಾಪಕ ನಷ್ಟ ಸಂಭವ ವಿಮೆ,
4 ರಫ್ತು ಕರಾರು ನಷ್ಟ ಸಂಭವ (ರಾಜಕೀಯ ಬೆಳವಣಿಗೆ) ವಿಮೆ.

ಇದಲ್ಲದೆ, ಭಾರತೀಯ ತಂತ್ರಜ್ಞರು/ಸಂಸ್ಥೆಗಳು ಪರದೇಶಗಳಲ್ಲಿನ ಜನರಿಗೆ ಹಾಗೂ ಸಂಸ್ಥೆಗಳಿಗೆ ಸಲ್ಲಿಸುವ ವಿಶೇಷ ಸೇವೆಗಳಿಗೆ ಸಲ್ಲಬೇಕಾದ ಸೇವಾಶುಲ್ಕದ ಪಾವತಿಗೂ ನಿಗಮ ವಿಮಾರಕ್ಷಣೆಯನ್ನು ಒದಗಿಸುತ್ತದೆ. ಕೆಲವು ಸಂದರ್ಭಗಳಲ್ಲಿ ರಫ್ತು ಮಾಡುವ ಸರಕಿನ ಬೆಲೆ ಆಂತರಿಕ ಮಾರುಕಟ್ಟೆಯಲ್ಲಿ ಪರದೇಶದಲ್ಲಿ ದೊರೆಯುವ ಬೆಲೆಗಿಂತ ಹೆಚ್ಚಿರಬಹುದು. ರಫ್ತು ಪ್ರೋತ್ಸಾಹ ಮಾಡಲು ಸರ್ಕಾರ ಸಹಾಯಧನ, ಉತ್ತೇಜನಧನ ನೀಡುವ ಮೂಲಕ ಈ ಅಂತರವನ್ನು ತುಂಬಬಹುದು. ಈ ಸಹಾಯಧನ ಮತ್ತು ಉತ್ತೇಜನಧನದ ಮೇಲೂ ಬ್ಯಾಂಕುಗಳು ಸಹಾಯ ಮಾಡುತ್ತವೆ.

ಇದಲ್ಲದೆ, ಬ್ಯಾಂಕುಗಳಿಗೆ ರಫ್ತು ಸಿದ್ಧತಾ ಉದರಿ ಖಾತರಿಯ ಸಂಪೂರ್ಣ ಹಣಕಾಸಿಗೆ ರಫ್ತು ಉದರಿ ಖಾತರಿ ನಿಗಮ ವಿಮಾರಕ್ಷಣೆ ನೀಡುತ್ತದೆ.

ಹೀಗೆ ವಾಣಿಜ್ಯ ಬ್ಯಾಂಕುಗಳು, ಅಭಿವೃದ್ಧಿ ಬ್ಯಾಂಕುಗಳು ಮತ್ತು ಹಣಕಾಸು ನಿಗಮಗಳು ರಫ್ತು ಹಣಕಾಸಿಗೆ ಹೆಚ್ಚು ಉತ್ತೇಜನ ಕೊಡುತ್ತಿವೆ. ಬ್ಯಾಂಕುಗಳು ರಫ್ತುದಾರನಿಗೆ ಸಹಾಯಮಾಡುವುದನ್ನು ಹೆಚ್ಚಿನ ರೀತಿಯಲ್ಲಿ ಪೂರೈಸಲು ರಫ್ತು ಉದರಿ ಮತ್ತು ಖಾತರಿ ನಿಗಮ ಉತ್ತಮ ರೀತಿಯಲ್ಲಿ ಬೆಂಬಲ ನೀಡುತ್ತಿದೆ.

ರಫ್ತು ವ್ಯಾಪಾರದಲ್ಲಿ ಲಾಭ ಹೆಚ್ಚಗೆ ಇರುವುದರಿಂದ ಮತ್ತು ಅಂತರರಾಷ್ಟ್ರೀಯ ಮಾರುಕಟ್ಟೆ ಮತ್ತು ಬ್ಯಾಂಕಿಂಗ್ ರಂಗದಲ್ಲಿ ಪ್ರವೇಶ ಮಾಡುವುದರ ಲಾಭದಿಂದ ಬ್ಯಾಂಕುಗಳು ತಮ್ಮ ವಿದೇಶಿ ವ್ಯಾಪಾರ ಶಾಖೆಯನ್ನು ಹೆಚ್ಚು ಅಭಿವೃದ್ಧಿಗೊಳಿಸುತ್ತಿವೆ. ಮುಖ್ಯವಾಗಿ ವಿಕೇಂದ್ರೀಕೃತ ರಫ್ತು ಹಣಕಾಸಿನಲ್ಲಿ ಸಮಯಕ್ಕೆ ಹೆಚ್ಚು ಬೆಲೆಯುಂಟು. ಉತ್ತಮ ರೀತಿಯ ದೂರ ಸಂಪರ್ಕ ಸೌಲಭ್ಯಗಳನ್ನು ಇತ್ತೀಚೆಗೆ ಬ್ಯಾಂಕುಗಳು ಹೊಂದುತ್ತಿವೆ. ಪ್ರತಿಯೊಂದು ಬ್ಯಾಂಕೂ ತನ್ನದೇ ಆದ ವಿದೇಶಿ ಸಂಬಂಧ ಹೊಂದಿರುತ್ತದೆ. ವಿದೇಶಿ ಬ್ಯಾಂಕುಗಳು ಅಂತರರಾಷ್ಟ್ರೀಯ ಹಣಕಾಸು ಮಾರುಕಟ್ಟೆ ಬಗ್ಗೆ ನಮ್ಮ ಬ್ಯಾಂಕುಗಳಿಗೆ ಅತ್ಯಂತ ನಿಖರವಾದ ವಿವರಗಳನ್ನು ನೀಡುತ್ತವೆ.

ಭಾರತೀಯ ಬ್ಯಾಂಕುಗಳು ನಮ್ಮ ದೇಶದ ರಫ್ತು ಹಣಕಾಸಿನ ಬಗ್ಗೆ ಇನ್ನೂ ಹೆಚ್ಚಿನ ಪಾತ್ರ ವಹಿಸುವುದರಿಂದ ದೇಶದ ಬೆಳವಣಿಗೆಗೆ ಪೂರಕವಾದ ಬಲವನ್ನು ನೀಡಬಹುದು.



## ಭಾರತೀಯ ರಫ್ತಾಮದು ಬ್ಯಾಂಕು

1982ರ ಮಾರ್ಚ್ 1ರಂದು ಕಾರ್ಯಾರಂಭ ಮಾಡಿದ ಭಾರತೀಯ ರಫ್ತಾಮದು ಬ್ಯಾಂಕು ಅರ್ಥವ್ಯವಸ್ಥೆಯ ರಫ್ತುವಲಯದ ಪ್ರವರ್ತನೆಗಾಗಿ ನಿಧಿಬದ್ಧ (ಫಂಡೆಡ್) ಹಾಗೂ ಅನಿಧಿಕ (ಅನ್‌ಫಂಡೆಂಡ್) ನೆರವುಗಳನ್ನು ನೀಡುತ್ತದೆ. ರಫ್ತುದಾರರಿಗೆ ನೇರ ಹಣಕಾಸು ನೆರವು, ವಿದೇಶಿ ವಿನಿಯೋಜನ ಹಣಕಾಸು, ತಂತ್ರಜ್ಞಾನ ಮತ್ತು ಸಲಹಾಸೇವೆಗಳ ರಫ್ತಿಗೆ ಧನಪೋಷಣೆ, ರಫ್ತುಪೂರ್ವ ಉದರಿ, ವಿದೇಶಿ ಖರೀದಿದಾರರ ಉದರಿ, ಉದರಿಧಾರೆ, ರಫ್ತು ಉದರಿಯ ಮರುಹಣಕಾಸು, ರಫ್ತು ಹುಂಡಿಗಳ ಮರುವಟಾವಣೆ ಮತ್ತು ಹೊರದೇಶಗಳ ಬ್ಯಾಂಕುಗಳಿಗೆ ಮರುಸಾಲ ನೀಡಿಕೆ ಸೌಲಭ್ಯ—ಇವು ನಿಧಿಬದ್ಧ ನೆರವಿನಲ್ಲಿ ಸೇರಿವೆ. ಸವಾಲು ಬಾಂಡುಗಳು (ಬಿಡ್ ಬಾಂಡ್ಸ್), ಮುಂಗಡ ಪಾವತಿ ಹಾಗೂ ಕಾರ್ಯಪಾಲನಾ ಖಾತರಿಗಳು (ಪರ್ಫಾರ್ಮೆನ್ಸ್ ಗ್ಯಾರಂಟಿ) ಬಂಧಕ ಹಣ (ರಿಟೆನ್ಷನ್ ಮನಿ) ಖಾತರಿಗಳು ಮತ್ತು ವಿದೇಶದಲ್ಲಿ ಹಣಕಾಸು ಪಡೆಯಲು ಖಾತರಿಗಳು—ಈ ರೂಪದಲ್ಲಿ ಬ್ಯಾಂಕು ಅನಿಧಿಕ ನೆರವು ನೀಡುತ್ತದೆ. ಭಾರತದಿಂದ ಎಂಜಿನಿಯರಿಂಗ್ ಮತ್ತು ಬಂಡವಾಳ ಸರಕುಗಳ ಮತ್ತು ಅವಕ್ಕೆ ಸಂಬಂಧಿಸಿದ ಸೇವೆಗಳ ರಫ್ತನ್ನು ಪ್ರವರ್ತನೆಗೊಳಿಸಲು ನಾನಾ ಸಾಲ ನೀಡಿಕೆ ಕಾರ್ಯಕ್ರಮಗಳನ್ನು ರಫ್ತಾಮದು ಬ್ಯಾಂಕು ಪರಿಚಾಲಿಸುತ್ತದೆ. ಭಾರತೀಯ ರಫ್ತುದಾರರು ಅಂತರರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ತಮ್ಮ ಕಲಾಪಗಳನ್ನು ನಡಸಲು ಅವರಿಗೆ ಸ್ಪರ್ಧಾತ್ಮಕ ಷರತ್ತುಗಳ ಮೇಲೆ ನಿಧಿಬದ್ಧ ಹಣಕಾಸು ನೆರವನ್ನು ರಫ್ತಾಮದು ಬ್ಯಾಂಕು ನೀಡುತ್ತದೆ.

1983ರಲ್ಲಿ ರಫ್ತಾಮದು ಬ್ಯಾಂಕು ರಫ್ತಾಮದು ಕೂಟ ಸೌಲಭ್ಯ (ಎಕ್ಸಿಮ್ ಸಿಂಡಿಕೇಷನ್ ಫೆಸಿಲಿಟಿ) ಎಂಬ ಹೊಸ ಸೌಲಭ್ಯವೊಂದನ್ನು ಜಾರಿಗೆ ತಂದಿತು. ವಿದೇಶಿ ವಿನಿಮಯದಲ್ಲಿ ಪ್ರಾಧಿಕೃತ ವಹಿವಾಟುದಾರ ಸಂಸ್ಥೆಗಳಾದ ಭಾರತದ ವಿಶಿಷ್ಟಬ್ಯಾಂಕುಗಳು ಹೆಚ್ಚುಹೆಚ್ಚಾಗಿ ರಫ್ತು ಉದರಿಯಲ್ಲಿ ಭಾಗವಹಿಸುವಂತೆ ಮಾಡುವುದು ಇದರ ಉದ್ದೇಶ. ಈ ಯೋಜನೆಯ ಅಡಿಯಲ್ಲಿ ರಫ್ತಾಮದು ಬ್ಯಾಂಕು ರಫ್ತು ಪ್ರಸ್ತಾವವೊಂದಕ್ಕೆ ಹಣ ಒದಗಿಸುತ್ತದೆ ಮತ್ತು ತತ್ಸಂಬಂಧವಾದ ಉದರಿ ನಷ್ಟಸಂಭವವನ್ನು ವಾಣಿಜ್ಯ ಸಂಸ್ಥೆಗಳು ಕೂಡಿ ಭರಿಸುವಂತೆ ಕೂಟ ವ್ಯವಸ್ಥೆ (ಸಿಂಡಿಕೇಷನ್) ನಿರ್ಮಿಸುತ್ತದೆ. ಅಂಥ ಉದರಿ ನಷ್ಟಸಂಭವಗಳನ್ನು ವಹಿಸಿಕೊಂಡಿದ್ದಕ್ಕೆ ಪ್ರತಿಯಾಗಿ ಬ್ಯಾಂಕುಗಳು ವರ್ಷಕ್ಕೆ 0.5%ರಂತೆ ಗಳಿಸುತ್ತವೆ.

**—ಭಾರತೀಯ ರಿಸರ್ವ್ ಬ್ಯಾಂಕು**

# ವಿದೇಶಿ ವ್ಯಾಪಾರದಲ್ಲಿ ವಾಯಿದಾ ಸೌಲಭ್ಯಗಳು

**ಚಿ. ರಾ. ವೇಣುಗೋಪಾಲ**

ವ್ಯಾಪಾರ ಅಂದಮೇಲೆ ಲಾಭ ಅಥವಾ ನಷ್ಟ ಉಂಟಾಗುವುದು ಸರ್ವೇ ಸಾಧಾರಣ. ಬುದ್ಧಿವಂತ ವ್ಯಾಪಾರಸ್ಥ ದಿನೇದಿನೇ ತನ್ನ ವ್ಯವಹಾರ ಮತ್ತು ಲಾಭವನ್ನು ಹೆಚ್ಚಿಸುವುದರತ್ತ ವ್ಯಾಪಾರೀ ಚಾಕಚಕ್ಯತೆ ಯನ್ನುಪಯೋಗಿಸುತ್ತಾನಲ್ಲದೆ, ನಷ್ಟಸಂಭವವನ್ನು ತಗ್ಗಿಸುವುದು ಹೇಗೆ ಎಂಬುದರ ಮೇಲೂ ಹೆಚ್ಚು ಗಮನ ಹರಿಸುತ್ತಾನೆ. ದೇಶ ದೊಳಗಿನ ವ್ಯಾಪಾರ ವ್ಯವಹಾರಗಳಲ್ಲಿ ಬೇಡಿಕೆ, ಪೂರೈಕೆ ಮೊದಲಾ ದವು ನಷ್ಟಸಂಭವದ ಅಂಶಗಳಾದರೆ, ವಿದೇಶಿ ವ್ಯವಹಾರದಲ್ಲಿ ಇದಷ್ಟೇ ಅಲ್ಲದೆ ವಿನಿಮಯ ದರಗಳ ಏರಿಳಿತವೂ ಒಂದು ಗಂಭೀರ ವಿಷಯವಾಗಿರುತ್ತದೆ. ಆದ್ದರಿಂದ ವಿದೇಶಿ ವ್ಯಾಪಾರಿ ವಿನಿಮಯ ದರಗಳ ಏರಿಳಿತದಿಂದುಂಟಾಗುವ ನಷ್ಟವನ್ನು (ವಿನಿಮಯ ದರ ನಷ್ಟಸಂಭವ) ಭರಿಸಲು ಕೂಡ ಏರ್ಪಾಡು ಮಾಡಿಕೊಂಡಿರಬೇಕಾ ಗುತ್ತದೆ.

ವಿನಿಮಯದರ ನಷ್ಟಸಂಭವದಿಂದ ಸ್ವಲ್ಪಮಟ್ಟಿಗೆ ರಕ್ಷಣೆ ಪಡೆಯ ಬೇಕಿದ್ದರೆ ವಾಯಿದಾ ಸೌಕರ್ಯಗಳ ಮೊರೆಹೋಗುವುದು ಅನಿವಾರ್ಯ ವಾಗುತ್ತದೆ. ಆಯಾತ ಹಾಗೂ ನಿರ್ಯಾತದಾರರಿಗೆ ವಾಯಿದಾ ಸೌಲಭ್ಯಗಳನ್ನು ಒದಗಿಸುವ ಅಧಿಕಾರವನ್ನು ಭಾರತೀಯ ರಿಸರ್ವ್ ಬ್ಯಾಂಕು ಪ್ರಾಧಿಕೃತ ವಹಿವಾಟುದಾರ ಬ್ಯಾಂಕುಗಳಿಗೆ ನಿಯೋಗಿಸಿದೆ. ಇಲ್ಲಿ ಕೆಲವು ಅಂಶಗಳನ್ನು ಅನುಸರಿಸಬೇಕಾಗುತ್ತದೆ :

1 ವಾಯಿದಾ ಸೌಲಭ್ಯವನ್ನು ಪಡೆಯುವ ವ್ಯಕ್ತಿ/ಸಂಸ್ಥೆ ಅಥವಾ ಕಂಪನಿ ಭಾರತದಲ್ಲಿ ವಾಸವಾಗಿರಬೇಕು ಅಥವಾ ಸ್ಥಾಪಿತ ವಾಗಿರಬೇಕು.
2 ಪಕ್ಕಾ ವ್ಯಾಪಾರ ವಹಿವಾಟುಗಳಿಗೆ ಮಾತ್ರ ವಾಯಿದಾ ಸೌಲಭ್ಯ ಲಭ್ಯವಾಗುವಂತೆ ನೋಡಿಕೊಳ್ಳಬೇಕು.
3 ವಹಿವಾಟಿನಲ್ಲಿ ಉಪಯೋಗಿಸಲಾಗುವ ಕರೆನ್ಸಿ (ಅನುಮತಿ ಸಿದ) ಕರೆನ್ಸಿಗಳಲ್ಲೊಂದಾಗಿರಬೇಕು.

## ವಾಯಿದಾ ಸೌಲಭ್ಯ ಮತ್ತು ವಾಯಿದಾ ಕರಾರು

ಮಾಮೂಲಿನ ವಿದೇಶಿ ವಿನಿಮಯ ವ್ಯವಹಾರಗಳಲ್ಲಿ ವಿನಿಮಯದ ದಿನದಂದು, ಅಂದರೆ ಆಯಾತ/ನಿರ್ಯಾತದಾರರು ಬ್ಯಾಂಕಿನಿಂದ/ ಬ್ಯಾಂಕಿಗೆ ವಿದೇಶಿವಿನಿಮಯವನ್ನು ಕೊಳ್ಳುವ/ಮಾರುವ ದಿನದಂದು, ಯಾವ ವಿನಿಮಯ ದರ ಇರುತ್ತದೋ ಆ ದರವನ್ನು ಉಪಯೋಗಿಸಿ ಕೊಂಡು ವ್ಯವಹಾರ ನಡೆಸಲಾಗುತ್ತದೆ. ಇಲ್ಲಿ ಉಪಯೋಗಿಸಲಾದ ದರವನ್ನು 'ತತ್‌ಕ್ಷಣ'ದ ಅಥವಾ 'ಸಿದ್ಧ' ದರವೆನ್ನುವರು. ಆದರೆ ವಾಯಿದಾ ಸೌಲಭ್ಯಗಳನ್ನುಪಯೋಗಿಸುವುದೆಂದರೆ ಹಾಗಲ್ಲ. ಇದರ ಪ್ರಕಾರ ಬ್ಯಾಂಕರ್ ಮತ್ತು ಆಯಾತದಾರ/ನಿರ್ಯಾತದಾರ ಮುಂಬರುವ ಒಂದು ನಿಶ್ಚಿತ ದಿನ ಅಥವಾ ಅವಧಿಯಲ್ಲಿ ಒಂದು ಗೊತ್ತಾದ ಮೊತ್ತದ ವಿದೇಶಿ ವಿನಿಮಯವನ್ನು ಮುಂದಾಗಿ ನಿರ್ಧರಿ ಸಿದ ವಿನಿಮಯದರದಲ್ಲಿ ಕೊಳ್ಳುವ/ಮಾರುವ ನಿರ್ಧಾರಕ್ಕೆ ಬರು ತ್ತಾರೆ. ಈ ಪೂರ್ವನಿರ್ಧಾರಿತ ವಿನಿಮಯದರವನ್ನು ವಾಯಿದಾ ದರವೆನ್ನುವರು. ಬ್ಯಾಂಕರ್ ಮತ್ತು ಆಯಾತ/ನಿರ್ಯಾತದಾರರ ಈ ನಿರ್ಧಾರ ಲಿಖಿತ ಒಪ್ಪಂದದ ರೂಪ ತಳೆದು ಒಂದು ಕರಾರಾಗು ತ್ತದೆ. ಇದೇ ವಾಯಿದಾ ಕರಾರು. (ವಾಯಿದಾ ಕರಾರು ಒಂದು ಬ್ಯಾಂಕಿಗೂ ಇನ್ನೊಂದು ಬ್ಯಾಂಕಿಗೂ ನಡುವೆಯೂ ಏರ್ಪಡ ಬಹುದು. ಬ್ಯಾಂಕರ್ ಆಯಾತದಾರನಿಗೆ, ನಿರ್ಯಾತದಾರ ಬ್ಯಾಂಕರ ನಿಗೆ ವಿದೇಶಿ ವಿನಿಮಯವನ್ನು ನೀಡುವುದನ್ನು 'ಬಟವಾಡೆ' (ಡೆಲಿವರಿ) ಮಾಡುವುದು ಎಂದು ಕರೆಯುತ್ತಾರೆ.

ಭಾರತದ ವಿನಿಮಯ ನಿಯಂತ್ರಣ ರೀತ್ಯ ಈ 'ಮುಂಬರುವ ಬಟವಾಡೆ'ಯ ದಿನ ಅಥವಾ ಅವಧಿಯ ಬಗ್ಗೆ ಒಂದು ನಿಬಂಧನೆ ಇದೆ. ಅದೇನೆಂದರೆ, ರಫ್ತು ರವಾನೆಯ ಮತ್ತು ಬಟವಾಡೆಯ ದಿನಗಳ ಅಂತರ ಪಾಕಿಸ್ತಾನ ಮತ್ತು ಅಫ್ಘಾನಿಸ್ಥಾನಕ್ಕೆ ಸಂಬಂಧಿಸಿ ದಂತೆ 3 ತಿಂಗಳನ್ನೂ ಇತರ ದೇಶಗಳಿಗೆ ಸಂಬಂಧಿಸಿದಂತೆ 6 ತಿಂಗ ಳನ್ನೂ ಮೀರದಂತಿರಬೇಕು.

ನಿರ್ಯಾತದಾರ ತನ್ನ ವಿದೇಶಿ ವ್ಯಾಪಾರಿ ಕಳುಹಿಸಿರುವ ಖಚಿತ ಆದೇಶದ ಆಧಾರದ ಮೇಲೆ ಬ್ಯಾಂಕರ್ ವಾಯಿದಾ ಕೊಳ್ಳು ವಿಕೆ ಮಾಡಬಹುದು. ಈ ಆದೇಶ ಎಲ್ಲ ವಿವರಗಳನ್ನೂ ವಿಶದವಾಗಿ ಹೊಂದಿರತಕ್ಕದ್ದು. ಅವಾವುವೆಂದರೆ,ಸರಕಿನ ವಿವರ, ದರ, ಪರಿಮಾಣ, ಒಟ್ಟು ಮೌಲ್ಯ, ರಫ್ತುರವಾನೆಯ ಸಂಭವನೀಯ ದಿನ ಇತ್ಯಾದಿ ಅಂಶಗಳು. ಖಚಿತ ಆದೇಶ ಇರದಿದ್ದಲ್ಲಿ ನಿರ್ಯಾತದಾರ ಮತ್ತು ಅವನ ವಿದೇಶಿ ವ್ಯಾಪಾರಸ್ಥನ ನಡುವೆ ನಡೆದಿರಬಹುದಾದ ದೂರಲಿಪಿ ಅಥವಾ ತಂತಿ ವ್ಯವಹಾರ ಪತ್ರಗಳ ಆಧಾರದ ಮೇಲೂ ವಾಯಿದಾ ಕರಾರಿಗೆ ಒಪ್ಪಬಹುದು. ಈ ಸಂದರ್ಭದಲ್ಲಿ ನಿರ್ಯಾತದಾರ ಬ್ಯಾಂಕರನಿಗೆ ಒಂದು ತಿಂಗಳೊಳಗಾಗಿ ಸಂಬಂಧಿಸಿದ ಖಚಿತ ಆದೇಶ ವನ್ನು ತಂದೊಪ್ಪಿಸುವನೆಂಬ ಭರವಸೆ ಪತ್ರವನ್ನು ಪಡೆಯುವುದು ಆವಶ್ಯಕ. ಇದಲ್ಲದೆ ಉದರಿ ಪತ್ರದ (ಲೆಟರ್ ಆಫ್ ಕ್ರೆಡಿಟ್) ಆಧಾರದ ಮೇಲೂ ವಾಯಿದಾ ಸೌಲಭ್ಯವನ್ನೊದಗಿಸಬಹುದು ; ಇಲ್ಲಿ ಗ್ರಾಹಕ ತಾನು ಇದೇ ಸರಕು ರವಾನೆಗೆ ಬೇರಾವ ವಾಯಿದಾ ಕರಾರನ್ನೂ ಪಡೆದಿಲ್ಲವೆಂಬ ಲಿಖಿತ ಹೇಳಿಕೆಯನ್ನು ಬ್ಯಾಂಕರನಿಗೆ ನೀಡಬೇಕು. ಸರಕು ರವಾನೆಯಾಗಿದ್ದು, ಬ್ಯಾಂಕಿಗೆ ದಸ್ತಾವೇಜು ಳಗು ಬಂದಿದ್ದಲ್ಲಿ, ದಾಖಲೆಗಳ ಪರಿಶೀಲನೆಯನ್ನು ಮನ್ನಾ ಮಾಡ ಬಹುದು.

ಆಯಾತದಾರನಿಗೆ ವಾಯಿದಾ ಸೌಲಭ್ಯವನ್ನೊದಗಿಸಿಕೊಡುವಾಗ, ಸಂಬಂಧಿಸಿದ ಸರಕನ್ನು ಆಯಾತಮಾಡಿಕೊಳ್ಳಲು ವಿಶೇಷ ಪರ ವಾನೆ ಇದೆಯೇ, ಇಲ್ಲವಾದರೆ ಸರಕು ಮುಕ್ತಸಾಮಾನ್ಯ

* ಚಿ. ರಾ. ವೇಣುಗೋಪಾಲ, ಭಾರತೀಯ ಸ್ಟೇಟ್ ಬ್ಯಾಂಕ್, ಸಯಾಜಿರಾವ್ ರಸ್ತೆ, ಮೈಸೂರು 1

ಪರವಾನೆಯ (ಓಪನ್ ಜನರಲ್ ಲೈಸೆನ್ಸ್) ಮಿತಿಯೊಳಗಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳಬೇಕು.

ವಾಯಿದಾ ಕರಾರಿನ ಮೊಬಲಗು ಆಯಾತ ಕರಾರಿನ ಅಥವಾ ಉದರಿ ಪತ್ರದ ಮೌಲ್ಯವನ್ನು ಮೀರದಂತಿರಬೇಕು.

ಮೇಲೆ ಹೇಳಿದ ದಾಖಲೆಗಳ ಪರಿಶೀಲನೆಯ ಅನಂತರ ಬ್ಯಾಂಕರ್ ಮೂಲ ದಾಖಲೆಗಳ ಮೇಲೆ ತನ್ನ ಮುದ್ರೆಯೊತ್ತಿ ದಿನಾಂಕ, ಕರಾರಿನ ಮೊಬಲಗು ಇತ್ಯಾದಿಗಳನ್ನು ನಮೂದಿಸಬೇಕು. ಇದರಿಂದ ಇವೇ ದಾಖಲೆಗಳನ್ನು ಆಯಾತ/ನಿರ್ಯಾತದಾರ ಬೇರೆ ಬ್ಯಾಂಕುಗಳ ಬಳಿ ನೀಡಿ ಸೌಕರ್ಯದ ದುರುಪಯೋಗ ಪಡೆಯು ವುದನ್ನು ತಪ್ಪಿಸಬಹುದು.

ವಾಯಿದಾ ಕರಾರಿನಲ್ಲಿ ಎರಡು ಬಗೆ ಇವೆ :

1 ನಿಶ್ಚಿತ (ದಿನ) ಕರಾರು

2 ಐಚ್ಛಿಕ ಕರಾರು

ನಿಶ್ಚಿತ (ದಿನ) ಕರಾರಿನಲ್ಲಿ ವಿದೇಶಿ ವಿನಿಮಯದ ಬಟವಾಡೆ ಒಂದು ಗೊತ್ತಾದ ದಿನಾಂಕದಂದೇ ನಡೆಯುತ್ತದೆ. ಉದಾ : 'ಅ' ನಿರ್ಯಾತದಾರ ಗ್ರಾಹಕ 10,000 ಪೌಂಡುಗಳನ್ನು 1-4-1985 ರಂದು 'ಬ' ಬ್ಯಾಂಕರನಿಗೆ ಬಟವಾಡೆಮಾಡುವುದಾಗಿ ಕರಾರಾಗಿದ್ದರೆ ಬಟವಾಡೆ 1-4-85ರಂದೇ ನಡೆಯತಕ್ಕದ್ದು.

ಐಚ್ಛಿಕ ಕರಾರಿನಲ್ಲಿ ಕರಾರಿಗೊಳಪಡುವ ಇಬ್ಬರಲ್ಲಿ ಒಬ್ಬರಿಗೆ ಬಟವಾಡೆಯನ್ನು ಐಚ್ಛಿಕಗೊಳಿಸುವ ಅನುಕೂಲವಿರುತ್ತದೆ.

ಆದರೆ ಇಲ್ಲಿ ಭಾರತದ ವಿದೇಶಿವಿನಿಮಯ ವಹಿವಾಟುದಾರರ ಸಂಘ ಕೆಲವು ನಿಯಮಗಳನ್ನು ಮಾಡಿದೆ:

1 ವಾಯಿದಾ ಕರಾರು ಒಂದು ಬ್ಯಾಂಕಿಗೂ ಇನ್ನೊಂದು ಬ್ಯಾಂಕಿಗೂ ನಡುವೆ ಏರ್ಪಟ್ಟಿದ್ದರೆ ಐಚ್ಛಿಕ ಬಟವಾಡೆ ಹಕ್ಕು ಕೊಳ್ಳುವ ಬ್ಯಾಂಕಿನದಾಗಿರುತ್ತದೆ. ಆದರೆ ಬ್ಯಾಂಕು ಮತ್ತು ವ್ಯಾಪಾರಿ ಗ್ರಾಹಕನ ನಡುವಿನ ವಾಯಿದಾ ಕರಾರಾದರೆ, ಬಟ ವಾಡೆ ಹಕ್ಕು ವ್ಯಾಪಾರಿ ಗ್ರಾಹಕನದಾಗಿರುತ್ತದೆ.

2 ಐಚ್ಛಿಕ ಬಟವಾಡೆಯ ಅವಧಿ ಒಂದು ಕ್ಯಾಲೆಂಡರ್ ತಿಂಗಳನ್ನು ಮೀರುವಂತಿಲ್ಲ. ಉದಾ: 12-4-85ರಿಂದ 11-5-85ರ ವರೆಗೆ, 1-5-85ರಿಂದ 31-5-85ರ ವರೆಗೆ, ಇತ್ಯಾದಿ

ಹೀಗಾಗಿ ಬಟವಾಡೆಯ ಅವಧಿಯು ಒಂದು ತಿಂಗಳ ವಾಯಿದಾ ಕರಾರಿನ ಅಡಿಯಲ್ಲಿ ಅದೇ ತಿಂಗಳಲ್ಲಿ, ಎರಡು ತಿಂಗಳುಗಳ ಕರಾರಿ ನಲ್ಲಿ ಎರಡನೆಯ ತಿಂಗಳಲ್ಲಿ, 3 ತಿಂಗಳುಗಳ ಕರಾರಿನಲ್ಲಿ ಮೂರ ನೆಯ ತಿಂಗಳಲ್ಲಿ—ಹೀಗಿರುತ್ತದೆ. ಉದಾ : ಒಬ್ಬ ಆಯಾತದಾರ ಗ್ರಾಹಕ ತನ್ನ ಬ್ಯಾಂಕರನೊಡನೆ 12-5-85ರಂದು 15,000 ಪಶ್ಚಿಮ ಜರ್ಮನ್ ಮಾರ್ಕುಗಳನ್ನು ಕೊಳ್ಳಲು ನಾಲ್ಕು ತಿಂಗಳುಗಳ ವಾಯಿದಾ ಕರಾರಿಗೆ ಒಳಪಟ್ಟಿರುತ್ತಾನೆಂದು ಕಲ್ಪಿಸಿಕೊಳ್ಳೋಣ. ಆಗ ಬಟವಾಡೆಯ ಅವಧಿ 12-5-85ರಿಂದ 11-9-85ರ ವರೆಗಿನದಾಗಿರುತ್ತದೆ.

'ವಾಯಿದಾ ಕರಾರು' ಎಂಬುದು ಹೆಸರೇ ಸೂಚಿಸುವಂತೆ ಪಕ್ಕಾ ಕರಾರು. ಆದ್ದರಿಂದ ಗ್ರಾಹಕ ಒಪ್ಪಿದ ದಿನದಂದು/ಅವಧಿಯಲ್ಲಿ ಬಟವಾಡೆ ಮಾಡವುದು ತೀರಾ ಆವಶ್ಯಕವಾಗುತ್ತದೆ. ಆದರೆ ಕೆಲ ವೊಮ್ಮೆ ಕೈಮೀರಿದ ಕಾರಣಗಳಿಂದಾಗಿ (ಉದಾ : ಅತಿಯಾದ ವಿದ್ಯುತ್ ಕಡಿತದಿಂದ ಉತ್ಪಾದನೆ ಕುಂಠಿತಗೊಂಡು ನಿಶ್ಚಿತ ವೇಳೆ ಯಲ್ಲಿ ರಫ್ತಾಗದಿರುವುದು, ಕೆಲಸಗಾರರ ಮುಷ್ಕರದಿಂದಾಗಿ ಉತ್ಪಾ ದನೆ ನಿಂತಿರುವುದು ಇತ್ಯಾದಿ) ನಿಶ್ಚಿತ ದಿನದಂದು/ಅವಧಿಯಲ್ಲಿ ಬಟವಾಡೆ ಮಾಡಲು ಸಾಧ್ಯವಾಗದಿರಬಹುದು. ಅಂಥ ಸಮಯದಲ್ಲಿ ಸಂದರ್ಭಾನುಸಾರ ನಿಯಂತ್ರಣ ನಿಯಮಗಳನ್ನು ಮೀರದಂತೆ ಕರಾರನ್ನು ಮುಂದೂಡಬಹುದು. ಬಟವಾಡೆ ಸಾಧ್ಯವಾಗದೆ ಹೋದಾಗ ಕರಾರನ್ನು ರದ್ದುಗೊಳಿಸಬಹುದು. ಆದರೆ ಇಂಥ ಸಂದರ್ಭಗಳಲ್ಲಿ ವ್ಯಾಪಾರಿಗೆ ವಾಯಿದಾ ಮಾರುಕಟ್ಟೆಯನ್ನವಲಂಬಿಸಿ ನಷ್ಟ ಒದಗಬಹುದು. ಈ ನಷ್ಟವನ್ನು ಆತ ಭರಿಸಬೇಕಾಗುತ್ತದೆ. ಆದರೆ ಕೆಲವೊಮ್ಮೆ ಲಾಭವೂ ಬರಬಹುದು. ಹಾಗೆಂದ ಮಾತ್ರಕ್ಕೆ ಕರಾರಿನ ಮುಂದೂಡುವಿಕೆ ಅಥವಾ ರದ್ದುಗೊಳಿಸುವಿಕೆಯನ್ನು ಪದೇಪದೇ ಬೇಕೆಂತಲೇ ಸಟ್ಟಾ ವ್ಯಾಪಾರಕ್ಕಾಗಿ ಕೈಗೊಳ್ಳುವಂತಿಲ್ಲ. ಬ್ಯಾಂಕರ್ ಈ ನಿಟ್ಟಿನಲ್ಲಿ ಗ್ರಾಹಕನೊಡನೆ ಖಚಿತ ದೃಷ್ಟಿಯಿಂದ ನಡೆದುಕೊಳ್ಳತಕ್ಕದ್ದು. ವಾಯಿದಾ ಕರಾರಿನ ರದ್ದು 5,000 ಅಮೆರಿಕನ್ ಡಾಲರ್ ಅಥವಾ ಅದಕ್ಕಿಂತ ಹೆಚ್ಚಿಗೆ ಇದ್ದಲ್ಲಿ ಆಯಾತ/ ನಿರ್ಯಾತದಾರ ನಿರ್ದಿಷ್ಟ ನಮೂನೆಯಲ್ಲಿ ಆಧಾರ ದಾಖಲೆಗಳ ಸಹಿತ ತನ್ನ ಬ್ಯಾಂಕಿನ ಮೇಲೆ ಭಾರತೀಯ ರಿಸರ್ವ್ ಬ್ಯಾಂಕಿಗೆ ಅರ್ಜಿ ಸಲ್ಲಿಸತಕ್ಕದ್ದು.

ವಾಯಿದಾ ದರ ಸಾಮಾನ್ಯವಾಗಿ 'ಸಿದ್ಧ' ಅಥವಾ ತತ್‌ಕ್ಷಣದ ದರಕ್ಕಿಂತ ಭಿನ್ನವಾಗಿರುತ್ತದೆ. ಸಿದ್ಧ ದರಕ್ಕಿಂತ ವಾಯಿದಾ ದರ ಹೆಚ್ಚಿದ್ದಾಗ ಆ ಕರೆನ್ಸಿ ಅಧಿಮೌಲ್ಯದಲ್ಲಿದೆ (ಪ್ರೀಮಿಯಮ್) ಎನ್ನುತ್ತೇವೆ ; ಕಡಿಮೆ ಇದ್ದಾಗ ಕರೆನ್ಸಿ ಸೋಡಿಯಲ್ಲಿದೆ (ಡಿಸ್ಕೌಂಟ್) ಎನ್ನುತ್ತೇವೆ.

ಉದಾ : 5 ಏಪ್ರಿಲ್ 1985ರಂದು :

| | ಸಿದ್ಧ ದರ | ಮೂರು ತಿಂಗಳ ವಾಯಿದೆ ದರ | |
|---|---|---|---|
| ಅಮೆರಿಕನ್ ಡಾಲರ್ | 8.125 | 8.095 | ಡಾಲರ್ ಅಧಿ ಮೌಲ್ಯದಲ್ಲಿದೆ. |
| ಸ್ಟರ್ಲಿಂಗ್ ಪೌಂಡ್ | 6.0325 | 6.2305 | ಸ್ಟರ್ಲಿಂಗ್ ಸೋಡಿಯಲ್ಲಿದೆ |

ಇಲ್ಲಿ ವಿನಿಮಯ ದರವನ್ನು ಪ್ರತಿ ರೂ. 100.00ಕ್ಕೆ ಸೂಚಿಸ ಲಾಗಿದೆ. ಇದಕ್ಕೆ ಪರೋಕ್ಷ ದರ ಸೂಚಿ ವಿಧಾನ ಎನ್ನುತ್ತಾರೆ.

ಒಂದು ಕರೆನ್ಸಿಯ ವಾಯಿದಾ ದರ ಅಧಿಮೌಲ್ಯ ಅಥವಾ ಸೋಡಿಯಲ್ಲಿರಲು ಹಲವಾರು ಅಂಶಗಳು ಪ್ರಭಾವ ಬೀರುತ್ತವೆ. ಅವುಗಳಲ್ಲಿ ಮುಖ್ಯವಾದವೆಂದರೆ ಸಿದ್ಧ ದರಗಳ ಸಟ್ಟಾ ಬದಲಾವಣೆ, ವಾಯಿದಾ ಕರೆನ್ಸಿಯ ಬೇಡಿಕೆ ಮತ್ತು ಪೂರೈಕೆ, ವಿದೇಶಿ ವಿನಿಮಯ ಮಾರುಕಟ್ಟೆಗಳಲ್ಲಿಯ ಬಡ್ಡಿ ದರ, ವಿನಿಮಯ ನಿಯಂತ್ರಣ, ಪಾವತಿ ಸಿಲ್ಕು ಇತ್ಯಾದಿ. ಇವಷ್ಟೇ ಅಲ್ಲದೆ, ಆ ದೇಶದ ರಾಜಕೀಯ ಬೆಳ ವಣಿಗೆಗಳು, ಯುದ್ಧ, ಸರ್ಕಾರದ ಬದಲಾವಣೆ, ಸರ್ಕಾರದ ಆರ್ಥಿಕ ನೀತಿ, ಬಂಡವಾಳದ ಹರಿವು, ಉತ್ಪಾದನೆಯ ಮಟ್ಟ ಹೀಗೆ ಹಲವಾರು ಅಂಶಗಳು ಕಾರಣೀಭೂತವಾಗಿರುತ್ತವೆ.

ಹೀಗೆ ವಾಯಿದಾ ಮಾರುಕಟ್ಟೆಗಳು ಅತ್ಯಂತ ಸೂಕ್ಷ್ಮ ಕೇಂದ್ರ ಗಳೆನ್ನಬಹುದು. ಇಲ್ಲಿ ವ್ಯವಹಾರ ಮಾಡುವಾಗ ಹೆಚ್ಚಿನ ಜಾಣ್ಮೆ, ಸೂಕ್ಷ್ಮಮತಿ ಮತ್ತು ಚಾಕಚಕ್ಯತೆಯ ಅವಶ್ಯಕತೆ ಇರುತ್ತದೆ. ಹಾಗಿಲ್ಲದಿದ್ದಲ್ಲಿ ಲಕ್ಷಗಟ್ಟಲೆ ವ್ಯವಹಾರ ಮಾಡುವಾಗ ಅಜಾಗರೂಕತೆ ಯಿಂದ ಸಾಕಷ್ಟು ಭಾರಿ ನಷ್ಟವನ್ನೇ ಎದುರಿಸಬೇಕಾಗುತ್ತದೆ. ಆದರೆ ಸಟ್ಟಾ ವ್ಯಾಪಾರಕ್ಕೆ ಕೈಹಾಕದೆ ಪ್ರಾಮಾಣಿಕ ಪ್ರಯತ್ನ ನಡೆಸಿದಲ್ಲಿ ವಾಯಿದಾ ಸೌಲಭ್ಯದ ಅತ್ಯುತ್ತಮ ಉಪಯೋಗ ಪಡೆಯಬಹು ದಾಗಿದೆ.



# ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳು

ವೈ. ಎಸ್. ಉಷಾ

ಮೊದಲನೆಯ ಮಹಾಯುದ್ಧವಾದ ನಂತರ ಪ್ರಪಂಚದ ರಾಷ್ಟ್ರಗಳಲ್ಲಿ ಹಲವಾರು ಆರ್ಥಿಕ ಸಮಸ್ಯೆಗಳು ಉಂಟಾದುವು. ವಿವಿಧ ದೇಶಗಳು ರಕ್ಷಣೆಯ ನೆಪದಲ್ಲಿ ತಮ್ಮವೇ ಆದ ಹಣನೀತಿಗಳನ್ನು ಅನುಸರಿಸ ಲಾರಂಭಿಸಿದುವು. ಆದರಿಂದ ಅಂತರರಾಷ್ಟ್ರೀಯ ಬೆಳವಣಿಗೆಗೆ ಕುಂದು ಬಂದಾಗಲೂ ಲೆಕ್ಕಿಸದೆ ಗುಂಪುಗಾರಿಕೆ, ಸ್ವಾರ್ಥಸಾಧನೆಗೆ ಬೆಲೆ ಕೊಟ್ಟುವು. ಎರಡನೆಯ ಮಹಾಯುದ್ಧದ ವೇಳೆಗೆ ಯಾವುದೇ ಅಂತರರಾಷ್ಟ್ರೀಯ ಹಣಕಾಸಿನ ವ್ಯವಸ್ಥೆ ಇರಲಿಲ್ಲ. ಸುವರ್ಣ ಪ್ರಮಿತಿ ಬಿದ್ದುಹೋಗಿತ್ತು. ಹೀಗೆ ಅಂತರರಾಷ್ಟ್ರೀಯ ವಾಣಿಜ್ಯ ಪರಿಸ್ಥಿತಿ ಹದಗೆಡುತ್ತಿದ್ದುದನ್ನು ಕಂಡ ವಿವಿಧ ದೇಶಗಳ ಆರ್ಥಿಕ ತಜ್ಞರು ಆರ್ಥಿಕ ವಿಷಯದಲ್ಲಿ ವಿಶ್ವಸೌಹಾರ್ದ ಬೆಳೆಸುವುದರ ಮೂಲಕ ಪ್ರಪಂಚದಲ್ಲಿ ಶಾಂತಿಸಮೃದ್ಧಿಗಳನ್ನು ಮತ್ತೆ ನೆಲೆಗೊಳಿಸಬಹುದೆಂದು ಭಾವಿಸಿದರು. ಇದಕ್ಕಾಗಿ 1944ರಲ್ಲಿ ಅಮೆರಿಕದ ಬ್ರೆಟನ್‌ವುಡ್ಸ್‌ನಲ್ಲಿ ಸಮ್ಮೇಳನವೊಂದನ್ನು ನಡೆಸಿದರು. ಅದರ ಫಲಶ್ರುತಿಯೇ ಅಂತರ ರಾಷ್ಟ್ರೀಯ ಹಣ ನಿಧಿ ಹಾಗೂ ಅಂತರರಾಷ್ಟ್ರೀಯ ಪುನರ್ರಚನೆ ಮತ್ತು ಅಭಿವೃದ್ಧಿ ಬ್ಯಾಂಕ್ (ವಿಶ್ವ ಬ್ಯಾಂಕ್) ಸ್ಥಾಪನೆ.

### ಅಂತರರಾಷ್ಟ್ರೀಯ ಹಣ ನಿಧಿ

ಇದು 1945ರಲ್ಲಿ ಆರಂಭವಾದರೂ ಇದರ ವ್ಯವಹಾರಗಳು ಆರಂಭ ವಾದದ್ದು 1947ರಲ್ಲಿ. ರಷ್ಯ ಹಾಗೂ ಕೆಲವು ಸಣ್ಣಪುಟ್ಟ ರಾಷ್ಟ್ರ ಗಳನ್ನು ಬಿಟ್ಟು ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರಗಳೆಲ್ಲಾ ಈ ನಿಧಿಯ ಸದಸ್ಯರೇ. ಆರಂಭದಲ್ಲಿ 880 ಕೋಟಿ ಡಾಲರುಗಳ ಬಂಡವಾಳ ಇದ್ದು, ಇದಕ್ಕೆ 40 ರಾಷ್ಟ್ರಗಳ ಸದಸ್ಯತ್ವವಿದ್ದರೆ 1970ರಲ್ಲಿ ಬಂಡವಾಳ 2,130 ಕೋಟಿ ಡಾಲರುಗಳಾಗಿತ್ತು, ಅದನ್ನು 2,890 ಕೋಟಿ ಡಾಲರುಗಳಿಗೆ ಏರಿಸುವ ಉದ್ದೇಶವಿತ್ತು. ಸದಸ್ಯರ ಸಂಖ್ಯೆ 116ಕ್ಕೆ ಏರಿತ್ತು. ಇದರ ಜೊತೆಗೆ ನಿಧಿ 600 ಕೋಟಿ ಡಾಲರುಗಳಷ್ಟು ಹಣವನ್ನು 12 ಪ್ರಮುಖ ರಾಷ್ಟ್ರಗಳಿಂದ ಸಾಲ ವಾಗಿ ತೆಗೆದುಕೊಳ್ಳುವ ಅಧಿಕಾರವನ್ನೂ ಪಡೆದಿದೆ. ಪ್ರತಿಯೊಂದು ಸದಸ್ಯ ರಾಷ್ಟ್ರವೂ ತನ್ನ ಪಾಲಿನ ಸೇ. 25 ರಷ್ಟನ್ನು ಚಿನ್ನ ಇಲ್ಲವೇ ಅಮೆರಿಕದ ಡಾಲರುಗಳ ರೂಪದಲ್ಲಿ ಕೊಡಬೇಕು. ಉಳಿದ ಸೇ. 75 ರಷ್ಟನ್ನು ತನ್ನ ದೇಶದ ಹಣದ ರೂಪದಲ್ಲಿ ಕೊಡಬೇಕು. ರಾಷ್ಟ್ರೀಯ ಕರೆನ್ಸಿ ರೂಪದಲ್ಲಿ ಕೊಡುವ ಪಾಲನ್ನು ಆಯಾ ದೇಶದ ಕೇಂದ್ರ ಬ್ಯಾಂಕಿನಲ್ಲಿ ಇಟ್ಟಿರಲಾಗುತ್ತದೆ. ಈ ಸಂಸ್ಥೆಗೆ ಸದಸ್ಯ ರಾಷ್ಟ್ರಗಳ ಹಣ ಬೇಕಾದಾಗ ಅದನ್ನು ಉಪಯೋಗಿಸಿಕೊಳ್ಳುತ್ತದೆ. ಮೊದಲು ಭಾರತದ ಪಾಲು 40 ಕೋಟಿ ಡಾಲರುಗಳಾಗಿತ್ತು. ಅದನ್ನು ಈಗ 94 ಕೋಟಿ ಡಾಲರುಗಳಿಗೆ ಹೆಚ್ಚಿಸಲಾಗಿದೆ. ಹೀಗೆ ಅಂತರರಾಷ್ಟ್ರೀಯ ಹಣ ನಿಧಿಯ ವಶದಲ್ಲಿ ಚಿನ್ನ, ಡಾಲರುಗಳು ಮತ್ತು ಸದಸ್ಯ ರಾಷ್ಟ್ರ ಗಳ ಹಣ ಇವೆ.

### ನಿಧಿಯ ಮುಖ್ಯ ಉದ್ದೇಶಗಳು

ಹಣಕಾಸಿನ ವಿಷಯದಲ್ಲಿ ಸದಸ್ಯ ರಾಷ್ಟ್ರಗಳ ನಡುವೆ ಸೌಹಾರ್ದ ಬೆಳೆಸುವುದು, ವಿದೇಶಿ ವಿನಿಮಯ ದರಗಳಲ್ಲಿ ಸಮತೆ ತರುವುದು, ವಿನಿಮಯ ನಿಯಂತ್ರಣಗಳನ್ನು ಸಡಿಲಿಸುವುದು, ಬೇರೆ ಬೇರೆ ನಾಣ್ಯಗಳ ಪರಿವರ್ತನೆ ಸಾಧಿಸುವುದು ಮತ್ತು ಅಂತರರಾಷ್ಟ್ರೀಯ ವ್ಯಾಪಾರವನ್ನು ಅಭಿವೃದ್ಧಿಪಡಿಸುವುದು. ಈ ಉದ್ದೇಶಗಳಿಗಾಗಿ ಅದರ ಕಾರ್ಯಗಳು ಈ ಮುಂದಿನಂತಿವೆ.

1 ಸದಸ್ಯ ರಾಷ್ಟ್ರಗಳ ಆರ್ಥಿಕ ಬೆಳವಣಿಗೆ, ವಿದೇಶಿ ವ್ಯಾಪಾರಗಳ ಬೆಳವಣಿಗೆ ಹಾಗೂ ಅವುಗಳ ಸಂಪನ್ಮೂಲಗಳ ಸಂಪೂರ್ಣ ಬಳಕೆಗೆ ಸಹಾಯ ಮಾಡುವುದು ;

2 ವಿದೇಶಿ ವಿನಿಮಯದಲ್ಲಿ ಸ್ಥಿರತೆ ಏರ್ಪಡಿಸುವುದು ಮತ್ತು ಸ್ಪರ್ಧೆಯನ್ನು ತಪ್ಪಿಸುವುದು ;

3 ವಿನಿಮಯ ನಿಯಂತ್ರಣಗಳನ್ನು ಸಡಿಲಿಸಿ ಮುಕ್ತವ್ಯಾಪಾರಕ್ಕೆ ದಾರಿ ಮಾಡುವುದು ;

4 ಅಂತರರಾಷ್ಟ್ರೀಯ ಸಾಲ ತೀರಿಸಲು ಸದಸರಿಗೆ ಅಲ್ಪಾವಧಿ ಸಾಲ ಒದಗಿಸುವುದು ;

5 ಒಂದು ಸದಸ್ಯ ರಾಷ್ಟ್ರದ ಕರೆನ್ಸಿಯನ್ನು ಮತ್ತೊಂದು ಸದಸ್ಯ ರಾಷ್ಟ್ರದ ಕರೆನ್ಸಿಗೆ ಪರಿವರ್ತಿಸುವುದು ;

6 ಅಂತರರಾಷ್ಟ್ರೀಯ ವ್ಯಾಪಾರವನ್ನು ಅಭಿವೃದ್ಧಿಪಡಿಸುವುದು ;

7 ಉದ್ಯೋಗ, ವ್ಯಾಪಾರ ಹಾಗೂ ಉತ್ಪಾದನೆಗಳ ಬಗ್ಗೆ ವಿವಿಧ ರಾಷ್ಟ್ರಗಳ ನಡುವೆ ಸಮಾಲೋಚನೆಗೆ, ಸಹಭಾಗಿತ್ವಕ್ಕೆ ವೇದಿಕೆ ಏರ್ಪಡಿಸುವುದೇ ಅಲ್ಲದೆ ಅವುಗಳಿಗೆ ಸಂಬಂಧಪಟ್ಟಂತೆ ಅಧ್ಯಯನ ಸಂಶೋಧನೆಗಳನ್ನು ನಡೆಸಿ ಅದರ ಲಾಭ ಸದಸ್ಯರಿಗೆ ದೊರೆಯುವಂತೆ ಮಾಡುವುದು ;

8 ಕಾಲಕಾಲಕ್ಕೆ ಹಣ, ವ್ಯಾಪಾರ, ಬ್ಯಾಂಕಿಂಗ್, ಉತ್ಪಾದನೆ ಮೊದ ಲಾದ ಆರ್ಥಿಕ ಸಮಸ್ಯೆಗಳನ್ನು ವಿಶ್ಲೇಷಿಸುವ, ವಿವರಿಸುವ ಹಾಗೂ ಸಂಶೋಧನೆಗಳನ್ನೊಳಗೊಂಡ ಉಪಯುಕ್ತ ಪತ್ರಿಕೆ ಗಳನ್ನು ಹೊರಡಿಸಿ ಆ ಮೂಲಕ ಪ್ರಪಂಚದ ಆರ್ಥಿಕ ಮುನ್ನಡೆಗೆ ಸಹಾಯಕವಾಗುವುದು ;

9 ಸದಸ್ಯರಿಗೆ ವೈಜ್ಞಾನಿಕ, ತಾಂತ್ರಿಕ, ಆರ್ಥಿಕ ಸಲಹೆಗಳನ್ನು ಕೊಡುವುದು ;

10 ಸದಸ್ಯ ರಾಷ್ಟ್ರಗಳ ನಡುವಿನ ಹಣಕಾಸಿನ ವ್ಯವಹಾರಗಳಲ್ಲಿ ಸೌಹಾರ್ದ ಮೂಡಿಸುವುದು.

ನಿಧಿ ತನ್ನ ಈ ಕಾರ್ಯಗಳಲ್ಲಿ ಗಣನೀಯವಾಗಿ ಪ್ರಗತಿ ಸಾಧಿಸಿ ದ್ದರೂ, ತನ್ನ ಧ್ಯೇಯಗಳನ್ನು ಸಂಪೂರ್ಣವಾಗಿ ಸಾಧಿಸಿಲ್ಲ. ಇದಕ್ಕೆ

ವೈ. ಎಸ್. ಉಷಾ, ಭಾರತೀಯ ಸ್ಟೇಟ್ ಬ್ಯಾಂಕ್, ಕುಮಾರಾ ಪಾರ್ಕ್ ಶಾಖೆ, ಬೆಂಗಳೂರು 20

ಕಾರಣ, ಅದರ ರಚನೆಯಲ್ಲಿಯೇ ಇರುವ ಹಲವಾರು ನ್ಯೂನತೆಗಳು. ಅವೆಂದರೆ ಪರಿಮಿತ ಬಂಡವಾಳ, ಜಟಿಲ ಆಡಳಿತ, ಸದಸ್ಯರ ಅಸಹಕಾರ, ಸಾಲ ನೀಡಿಕೆಯಲ್ಲಿ ಬಿಗಿ ಷರತ್ತುಗಳು. ಹೀಗಿದ್ದರೂ, ನಾಣ್ಯ ಅಪಮೌಲ್ಯ ಮಾಡುವಲ್ಲಿ ಪೈಪೋಟಿ, ವಿನಿಮಯ ನಿಯಂತ್ರಣ, ಕರೆನ್ಸಿಗಳ ಪರಿವರ್ತನೆ, ಸದಸ್ಯರಲ್ಲಿ ಸೌಹಾರ್ದ ಮೂಡಿಸಲು ನಿಧಿಯ ಯತ್ನ, ವಿದೇಶಿ ವಿನಿಮಯದಿಂದುಂಟಾಗುವ ಸಾಲದ ಭಾರ ತಡೆಯಲು ಸಾಲ ನೀಡುವಿಕೆ, ವಿವಿಧ ಬಗೆಯ ಸಲಹೆ ನೀಡುವುದು ಮುಂತಾದ ಕಾರ್ಯಗಳಲ್ಲಿ ಅದು ಸಾಕಷ್ಟು ಯಶಸ್ಸು ಗಳಿಸಿದೆ. ಅಂತರರಾಷ್ಟ್ರೀಯ ದ್ರವತ್ವ ಮುಂತಾದ ಸಮಸ್ಯೆಗಳನ್ನು ಬಗೆಹರಿಸಲು ದುಡಿಯುತ್ತಿರುವ ಅಂತರರಾಷ್ಟ್ರೀಯ ಹಣ ನಿಧಿ ಭಾರತದಂಥ ಬಡರಾಷ್ಟ್ರಗಳಿಗೆ ಉಪಕಾರಿ ಸಂಸ್ಥೆಯಾಗಿ ಪರಿಣಮಿಸಿದೆ.

### ಅಂತರರಾಷ್ಟ್ರೀಯ ಪುನರ್ರಚನೆ ಮತ್ತು ಅಭಿವೃದ್ಧಿ ಬ್ಯಾಂಕು

ಇದು ವಿವಿಧ ಸರ್ಕಾರಗಳ ಬ್ಯಾಂಕು ಮತ್ತು ವಿಶ್ವ ಬ್ಯಾಂಕು. ಎರಡನೆಯ ಮಹಾಯುದ್ಧದಿಂದ ನುಚ್ಚುನೂರಾಗಿದ್ದ ಐರೋಪ್ಯ ರಾಷ್ಟ್ರಗಳ ಆರ್ಥಿಕ ವ್ಯವಸ್ಥೆಯನ್ನು ಪುನರ್ರಚಿಸುವುದು ಹಾಗೂ ಹಿಂದುಳಿದ ರಾಷ್ಟ್ರಗಳ ಆರ್ಥಿಕ ಪರಿಸ್ಥಿತಿಯನ್ನು ಅಭಿವೃದ್ಧಿಗೊಳಿಸುವುದು—ಇವೇ ಈ ಬ್ಯಾಂಕಿನ ಮೂಲ ಧ್ಯೇಯ. ಅಂತರರಾಷ್ಟ್ರೀಯ ಹಣ ನಿಧಿಯ ಸದಸ್ಯ ರಾಷ್ಟ್ರಗಳೆಲ್ಲ ವಿಶ್ವಬ್ಯಾಂಕಿನ ಸದಸ್ಯತ್ವ ಪಡೆದಿವೆ. ಈಗ 121 ರಾಷ್ಟ್ರಗಳು ವಿಶ್ವ ಬ್ಯಾಂಕಿನ ಸದಸ್ಯತ್ವ ಪಡೆದಿವೆ.

ಪ್ರಾರಂಭದಲ್ಲಿ ವಿಶ್ವ ಬ್ಯಾಂಕ್ ನಿಧಿ 1,000 ಕೋಟಿ ಡಾಲರುಗಳು. ಸುಮಾರು $\frac{1}{3}$ ಭಾಗವನ್ನು ಅಮೆರಿಕ ದೇಶ ಒದಗಿಸಿದೆ. ಪ್ರತಿಯೊಂದು ರಾಷ್ಟ್ರ ತನಗೆ ಮೀಸಲಾಗಿರುವ ಪಾಲಿನ ಸೇ. 20ನ್ನು ಬ್ಯಾಂಕಿನ ನಿಧಿಗೆ ಒಪ್ಪಿಸಬೇಕು. ಇದರಲ್ಲಿ ಶೇ. 2ನ್ನು ಚಿನ್ನ ಅಥವಾ ಡಾಲರ್ ರೂಪದಲ್ಲಿಯೂ ಉಳಿದ ಸೇ. 18ನ್ನು ಸ್ವದೇಶಿ ಕರೆನ್ಸಿಯಾಗಿಯೂ ಸಲ್ಲಿಸಬೇಕು. ಉಳಿದ ಸೇ. 80ನ್ನು ಸದಸ್ಯ ರಾಷ್ಟ್ರಗಳೇ ಪ್ರತಿಭೂತಿ ನಿಧಿಯಾಗಿಟ್ಟುಕೊಂಡು ಬ್ಯಾಂಕಿಗೆ ಬೇಕಾದಾಗ ಕೊಡಬೇಕು. ಬ್ಯಾಂಕು ಅಂತರರಾಷ್ಟ್ರೀಯ ಬಂಡವಾಳ ಪೇಟೆಗಳಲ್ಲಿ ಸಾಲ ತೆಗೆದುಕೊಳ್ಳಬಹುದು. ಹೀಗೆ, ಪಾಲು ಹಣ, ಸಾಲ ಹಣ, ಮತ್ತು ನಿವ್ವಳ ಲಾಭ ಇವುಗಳನ್ನು ಸದಸ್ಯ ರಾಷ್ಟ್ರಗಳಿಗೆ ಸಾಲ ಕೊಡಲು ಬ್ಯಾಂಕು ಬಳಸುತ್ತದೆ.

### ಉದ್ದೇಶಗಳು

ವಿಶ್ವ ಬ್ಯಾಂಕಿನ ಮುಖ್ಯ ಉದ್ದೇಶಗಳು ಹೀಗಿವೆ : 1 ಎರಡನೆಯ ಮಹಾಯುದ್ಧದಲ್ಲಿ ಆಘಾತಕ್ಕೆ ಈಡಾಗಿದ್ದ ಐರೋಪ್ಯ ರಾಷ್ಟ್ರಗಳ ಆರ್ಥಿಕ ವ್ಯವಸ್ಥೆಯನ್ನು ಪುನಃ ರಚಿಸಲು ಸಹಾಯ ಮಾಡುವುದು ; 2 ಹಿಂದುಳಿದ ದೇಶಗಳಲ್ಲಿ ಉತ್ಪಾದನ ಶಕ್ತಿಯನ್ನು ಹೆಚ್ಚಿಸಲು ಬಂಡವಾಳ ಹೂಡುವುದನ್ನು ಅಧಿಕಗೊಳಿಸುವುದು ಹಾಗೂ 3 ಅವುಗಳ ಸಾಧನ ಸಂಪತನ್ನು ಅಭಿವೃದ್ಧಿಪಡಿಸಿ ಅವುಗಳ ಉತ್ಪಾದನ ಶಕ್ತಿಯನ್ನು ಹೆಚ್ಚಿಸುವುದು; 4 ಸರ್ವತೋಮುಖ ಅಂತರರಾಷ್ಟ್ರೀಯ ವ್ಯಾಪಾರದ ಬೆಳವಣಿಗೆಗೆ ಸಹಾಯ ಮಾಡುವುದು, ಈ ಉದ್ದೇಶಗಳಿಗಾಗಿ ಬ್ಯಾಂಕು ದೀರ್ಘಕಾಲೀನ ಹಾಗೂ ಮಧ್ಯಕಾಲೀನ ಸಾಲಗಳನ್ನು ಆರ್ಥಿಕ ಪುನರ್ರಚನೆ ಮತ್ತು ಅಭಿವೃದ್ಧಿಗೆ ಎಂದು ಎರಡು ವಿಭಾಗಗಳಲ್ಲಿ ಕೊಡುತ್ತದೆ. ಅಲ್ಲದೆ ಸರ್ಕಾರದ ಸಂಸ್ಥೆಗಳಿಗೂ ಖಾಸಗಿ ಸಂಸ್ಥೆಗಳಿಗೂ ಕೇಂದ್ರ ಬ್ಯಾಂಕಿನ ಇಲ್ಲವೇ ಸರ್ಕಾರದ ಭರವಸೆಯ ಮೇಲೆ ಸಾಲ ಕೊಡುತ್ತದೆ. ಅಂತರರಾಷ್ಟ್ರೀಯ ಬಂಡವಾಳ ಹೂಡಿಕೆಗೂ ವಿಶ್ವ ಬ್ಯಾಂಕು ಪ್ರೋತ್ಸಾಹ ಕೊಡುತ್ತದೆ. ಮಾತ್ರವಲ್ಲದೆ ತಾನು ಬಂಡವಾಳ ಹಾಕಿರುವ ಸಂಸ್ಥೆಗಳ ಆಧಾರಪತ್ರಗಳಿಗೆ ಭರವಸೆ (ಗ್ಯಾರಂಟಿ) ಕೊಡುತ್ತದೆ. ಬ್ಯಾಂಕಿನ ತಜ್ಞರು ಯೋಜನೆಗಳನ್ನು ಕೂಲಂಕಷವಾಗಿ ಪರೀಕ್ಷಿಸಿ ಆರ್ಥಿಕ, ತಾಂತ್ರಿಕ, ವೈಜ್ಞಾನಿಕ ಸಲಹೆಗಳನ್ನು ನೀಡುತ್ತಾರೆ. ವಿಶ್ವ ಬ್ಯಾಂಕು ಅನೇಕ ರೀತಿಯಲ್ಲಿ ಹಿಂದುಳಿದಿರುವ ರಾಷ್ಟ್ರಗಳಿಗೆ ಆರ್ಥಿಕ ನೆರವನ್ನು ನೀಡಿ ಅಭಿವೃದ್ಧಿಗೆ ಸಹಾಯ ಮಾಡಿದೆ. ಭಾರತದ ದಾಮೋದರ್ ಯೋಜನೆ, ರೈಲ್ವೆ, ಕೃಷಿ, ಕೈಗಾರಿಕೆ, ಬಂದರುಗಳ ಅಭಿವೃದ್ಧಿ ಮುಂತಾದವಕ್ಕೆ ವಿಶ್ವ ಬ್ಯಾಂಕಿನ ನೆರವು ಸಿಕ್ಕಿದೆ.

ವಿಶ್ವ ಬ್ಯಾಂಕಿನ ಭಂಡಾರದಲ್ಲಿರುವ ಹಣದ ಗಾತ್ರ ಪ್ರಪಂಚದ ಎಲ್ಲ ಅಭಿವೃದ್ಧಿಕಾರ್ಯಗಳಿಗೆ ಸಾಕಾಗುವುದಿಲ್ಲ. ಆದ್ದರಿಂದ ಇನ್ನೂ ಹೆಚ್ಚಿನ ಹಣಕಾಸು ಒದಗಿಸಲು ವಿಶ್ವ ಬ್ಯಾಂಕು ಅನೇಕ ಉಪಸಂಸ್ಥೆಗಳನ್ನು ರಚಿಸಿದೆ. ಅವುಗಳಲ್ಲಿ ಮುಖ್ಯವಾದವು ಅಂತರರಾಷ್ಟ್ರೀಯ ಹಣಕಾಸು ನಿಗಮ ಮತ್ತು ಅಂತರರಾಷ್ಟ್ರೀಯ ಅಭಿವೃದ್ಧಿ ಸಂಘ.

### ಅಂತರರಾಷ್ಟ್ರೀಯ ಹಣಕಾಸು ನಿಗಮ

1955ರ ಜುಲೈ 21ರಂದು ಈ ಸಂಸ್ಥೆ ವಿಶ್ವ ಬ್ಯಾಂಕಿನ ಉಪಸಂಸ್ಥೆಯಾಗಿ ಸ್ಥಾಪಿತವಾಯಿತು. ವಿಶ್ವ ಬ್ಯಾಂಕಿನ ಕಾರ್ಯಕ್ರಮದಲ್ಲಿ ಕಂಡುಬರುವ ಕೊರತೆಗಳನ್ನು ಹೋಗಲಾಡಿಸಲು ಈ ನಿಗಮ ಸ್ಥಾಪಿತವಾಗಿದೆ. ಸದಸ್ಯ ರಾಷ್ಟ್ರಗಳಲ್ಲಿ ಲಾಭದಾಯಕವಾದ ಖಾಸಗಿ ಉದ್ಯಮಗಳನ್ನು ಬೆಳೆಸಿ ಆ ದೇಶಗಳ ಆರ್ಥಿಕ ಅಭಿವೃದ್ಧಿಗೆ ಸಹಾಯ ಮಾಡುವುದೇ ಈ ನಿಗಮದ ಮುಖ್ಯ ಕರ್ತವ್ಯ. ಸರ್ಕಾರದ ಭರವಸೆ ಇಲ್ಲದೆ ಖಾಸಗಿ ಬಂಡವಾಳಗಾರರೊಡನೆ ಸೇರಿ ಲಾಭದಾಯಕ ಖಾಸಗಿ ಉದ್ಯಮಗಳಲ್ಲಿ ಬಂಡವಾಳ ಹೂಡುವುದು ಈ ಸಂಸ್ಥೆಯ ಮೊದಲನೆಯ ಉದ್ದೇಶ. ದೇಶೀಯ ಮತ್ತು ವಿದೇಶೀಯ ಖಾಸಗಿ ಬಂಡವಾಳಗಾರರನ್ನೂ ದಕ್ಷರಾದ ಆಡಳಿತಗಾರರನ್ನೂ ಒಟ್ಟಿಗೆ ಸೇರಿಸಿ ಉದ್ಯಮಗಳನ್ನು ಸ್ಥಾಪಿಸಲು ಸೌಕರ್ಯಗಳನ್ನು ಕಲ್ಪಿಸುವುದು ಎರಡನೆಯ ಉದ್ದೇಶ. ದೇಶೀಯ ಮತ್ತು ವಿದೇಶೀಯ ಖಾಸಗಿ ಬಂಡವಾಳವನ್ನು ಲಾಭದಾಯಕವಾಗಿ ಹೂಡುವುದಕ್ಕೆ ಪ್ರೋತ್ಸಾಹ ಕೊಡುವುದು ಮೂರನೆಯ ಉದ್ದೇಶ. 1975ರ ವರೆಗೆ ಈ ಸಂಸ್ಥೆ 73.4 ಕೋಟಿ ಡಾಲರುಗಳನ್ನು ಬೇರೆಬೇರೆ ದೇಶಗಳಲ್ಲಿ ಸಾಲವಾಗಿ ಹೂಡಿದೆ.

### ಅಂತರರಾಷ್ಟ್ರೀಯ ಅಭಿವೃದ್ಧಿ ಸಂಘ

ಇದೂ ವಿಶ್ವ ಬ್ಯಾಂಕಿನ ಉಪಸಂಸ್ಥೆಯಾಗಿ ಕೆಲಸ ಮಾಡುತ್ತದೆ. 1960ರ ನವೆಂಬರ್ 8ನೆಯ ತಾರೀಖಿನಂದು ಆರಂಭವಾದ ಈ ಸಂಸ್ಥೆಯ ಇನ್ನೊಂದು ಹೆಸರು 'ಮೃದು ಸಾಲದ ಕಿಟಕಿ'. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಿಗೆ ಈ ಸಂಘ ಧಾರಾಳವಾಗಿ ಸಾಲ ಕೊಡುತ್ತದೆ. ಸಾಲವನ್ನು 15 ವರ್ಷಗಳ ವರೆಗೆ ಕೊಡಲಾಗುತ್ತದೆ. ಆರ್ಥಿಕ ಅಭಿವೃದ್ಧಿಗೆ ಹೆಚ್ಚು ಗಮನ ಕೊಡುವ ಉದ್ಯಮಗಳಿಗೆ ಈ ಸಂಘ ಬೆಂಬಲ ಕೊಡುತ್ತದೆ. ವಿಶ್ವ ಬ್ಯಾಂಕಿನಿಂದ ಸಾಲ ಪಡೆಯುವ ಅರ್ಹತೆ ಇಲ್ಲದ ದೇಶಗಳು ಈ ಸಂಘದಿಂದ ಸಾಲ ಪಡೆಯಬಹುದು. ಉಕ್ಕಿನ ಕಾರ್ಖಾನೆ, ರಾಸಾಯನಿಕ ಗೊಬ್ಬರಗಳ ಕಾರ್ಖಾನೆ, ರಸ್ತೆ ನಿರ್ಮಾಣ, ಸೇತುವೆ ನಿರ್ಮಾಣ, ಕೊಳಚೆಪ್ರದೇಶಗಳ ನಿರ್ಮೂಲನೆ ಹಾಗೂ ವಿದ್ಯಾಭ್ಯಾಸ ಮತ್ತು ನಗರಾಭಿವೃದ್ಧಿಗೆ ವಿಶೇಷ ಸಹಾಯ ನೀಡಿರುವ ಈ ಸಂಘ ಏಷ್ಯ ಮತ್ತು ಆಫ್ರಿಕ ಖಂಡಗಳ ಹಿಂದುಳಿದ ರಾಷ್ಟ್ರಗಳ ಅಭಿವೃದ್ಧಿಗೆ ಅನೇಕ ರೀತಿಯಲ್ಲಿ ಸಹಾಯಕಾರಿಯಾಗಿದೆ.



# ಏಷ್ಯನ್ ಅಭಿವೃದ್ಧಿ ಬ್ಯಾಂಕ್

ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ

ಏಷ್ಯ ಖಂಡದ ರಾಷ್ಟ್ರಗಳಲ್ಲಿ ವಿತ್ತೀಯ ಸಹಕಾರ ಬೆಳೆಸಲು 1966ರ ಡಿಸೆಂಬರಿನಲ್ಲಿ ಸ್ಥಾಪನೆಯಾದ ಪ್ರಾದೇಶಿಕ ಬ್ಯಾಂಕು ಏಷ್ಯ ಅಭಿವೃದ್ಧಿ ಬ್ಯಾಂಕು. ಏಷ್ಯದ ರಾಷ್ಟ್ರಗಳಿಗೆ ಪ್ರತ್ಯೇಕವಾದ ಬ್ಯಾಂಕಿಗ್ ಬೇಡಿಕೆ ಅನೇಕ ಕಾರಣಗಳಿಂದಾಗಿ ಕಂಡುಬಂದಿತ್ತು. ಇತರ ವಲಯಗಳಲ್ಲಿ ಅಲ್ಲಿಯವೇ ಆದ ಬ್ಯಾಂಕ್ ಸಂಸ್ಥೆಗಳು ಅಸ್ತಿತ್ವದಲ್ಲಿದ್ದುವು ಎಂಬುದು ಮೊದಲ ಕಾರಣ. ಉದಾ: ಲ್ಯಾಟಿನ್ ಅಮೆರಿಕನ್ ದೇಶಗಳಿಗೆ ಅಂತರ-ಅಮೆರಿಕ ಅಭಿವೃದ್ಧಿ ಬ್ಯಾಂಕ್. ಆಫ್ರಿಕಾ ಅಭಿವೃದ್ಧಿ ಬ್ಯಾಂಕು ಆಫ್ರಿಕಾ ದೇಶಗಳಲ್ಲಿ, ಯೂರೋಪಿನಲ್ಲಿ ಯೂರೋಪ್ ವಿನಿಯೋಜನ ನಿಧಿ ಆಗಲೇ ಕಾರ್ಯಪ್ರವೃತ್ತವಾಗಿದ್ದುವು. ಎರಡನೆಯದಾಗಿ, ಏಷ್ಯದಲ್ಲಿನ ಪ್ರಾದೇಶಿಕ ಬ್ಯಾಂಕು ಆ ವಲಯದಲ್ಲಿನ ರಾಷ್ಟ್ರಗಳಿಗೆ, ಅದರಲ್ಲೂ ಹಿಂದುಳಿದ ರಾಷ್ಟ್ರಗಳ ಅಗತ್ಯಗಳಿಗೆ, ಹೆಚ್ಚು ಗಮನ ಕೊಡಲು ಸಾಧ್ಯ. ಮೂರನೆಯ ಕಾರಣ, ಧನಪೂರೈಕೆ ಸಂಸ್ಥೆಗಳ ಸರಣಿ ಒಂದು ವಲಯದ ರಾಷ್ಟ್ರಗಳ ಹಣದ ಆವಶ್ಯಕತೆಗಳನ್ನು ಹೆಚ್ಚು ದಕ್ಷತೆಯಿಂದ ಮತ್ತು ವ್ಯಾಪಕವಾಗಿ ಒದಗಿಸಬಲ್ಲದು. ಇವೆಲ್ಲ ಕಾರಣಗಳ ಫಲಶ್ರುತಿಯಾಗಿ 1963ರಲ್ಲಿ ಫಿಲಿಪೀನ್ಸ್‌ನ ಮನಿಲಾದಲ್ಲಿ ಏಷ್ಯ ಆರ್ಥಿಕ ಸಹಕಾರ ಸಮ್ಮೇಳನ ನಡೆಯಿತು. ಇಲ್ಲಿ ತೆಗೆದುಕೊಳ್ಳಲಾದ ನಿರ್ಧಾರದಂತೆ 1966ರ ಡಿಸೆಂಬರ್ ತಿಂಗಳಲ್ಲಿ ಇಕಾಫೆಯ ಆಶ್ರಯದಲ್ಲಿ ಏಷ್ಯ ಅಭಿವೃದ್ಧಿ ಬ್ಯಾಂಕು ಸ್ಥಾಪನೆಗೊಂಡಿತು. ಇದರ ಪ್ರಧಾನ ಕಛೇರಿ ಇರುವುದು ಮನಿಲಾದಲ್ಲಿ.

ಬ್ಯಾಂಕಿನ ಪ್ರಮುಖ ಉದ್ದೇಶವೆಂದರೆ, ಏಷ್ಯ ಮತ್ತು ದೂರ ಪ್ರಾಚ್ಯ ದೇಶಗಳಲ್ಲಿ ಪ್ರಗತಿ ಸಾಧಿಸುವುದು. ತನ್ನ ವಲಯದಲ್ಲಿ ಸಮಾನ ಆರ್ಥಿಕ ಪ್ರಗತಿ ಸಾಧಿಸುವುದು ಬ್ಯಾಂಕಿನ ಗುರಿಗಳಲ್ಲಿ ಒಂದು. ಅಭಿವೃದ್ಧಿ ಕಾರ್ಯಗಳ ಯೋಜನೆಯನ್ನು ತಯಾರಿಸುವುದು, ಅವುಗಳಿಗೆ ಧನಪೂರೈಕೆ ಮತ್ತು ಅಭಿವೃದ್ಧಿ ಯೋಜನೆಗಳ ಕಾರ್ಯಾಚರಣೆಗಾಗಿ ನೆರವು ನೀಡುವುದು ಇವೂ ಬ್ಯಾಂಕಿನ ಉದ್ದೇಶ.

### ಕಾರ್ಯಭಾರಗಳು

ಬ್ಯಾಂಕಿನ ಮುಖ್ಯ ಕಾರ್ಯಭಾರಗಳು ಇವು :

1 ಸದಸ್ಯ ರಾಷ್ಟ್ರಗಳ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಗೆ ಸಾಲ ನೀಡುವುದು.

2 ಪ್ರಗತಿಪರ ಯೋಜನೆಗಳು ಮತ್ತು ಕಾರ್ಯಕ್ರಮಗಳಿಗೆ ತಾಂತ್ರಿಕ ನೆರವನ್ನು ನೀಡುವುದು ಮತ್ತು ಅವುಗಳಿಗೆ ಧನಪೂರೈಕೆ.

3 ಅಭಿವೃದ್ಧಿ ಕಾರ್ಯಗಳಿಗೆ ಸಾರ್ವಜನಿಕ ಮತ್ತು ಖಾಸಗಿ ಬಂಡವಾಳದ ಹೂಡಿಕೆಯನ್ನು ಪ್ರೋತ್ಸಾಹಿಸುವುದು.

4 ಸದಸ್ಯ ರಾಷ್ಟ್ರಗಳ ಪ್ರಗತಿಪರ ನೀತಿ ಮತ್ತು ಯೋಜನೆಗಳ ಸಮನ್ವಯ ಕಾರ್ಯಕ್ಕೆ ನೆರವು ನೀಡುವುದು.

5 ಏಷ್ಯದಲ್ಲಿ ಹಣ ಹೂಡಿಕೆ ಹಾಗೂ ಇತರ ರೀತಿಯ ನೆರವಿಗೆ ವಿಶ್ವರಾಷ್ಟ್ರ ಸಂಸ್ಥೆ ಹಾಗೂ ಅದರ ಸಹಸಂಸ್ಥೆಗಳು ಮತ್ತಿತರ ಅಂತರರಾಷ್ಟ್ರೀಯ ಸಂಸ್ಥೆಗಳ ಆಸಕ್ತಿಯನ್ನು ಬೆಳೆಸುವುದು.

ಸಾಮಾನ್ಯವಾಗಿ ಸದಸ್ಯ ರಾಷ್ಟ್ರಗಳ ಎಲ್ಲ ಅಭಿವೃದ್ಧಿ ಕಾರ್ಯಗಳ ಬಗ್ಗೆ ಬ್ಯಾಂಕು ಆಸಕ್ತಿ ವಹಿಸುತ್ತದೆ. ಕೃಷಿ, ಶಕ್ತಿ ಮತ್ತು ಸಾಮಾಜಿಕ ಅಧೋರಚನಾ ಕಾರ್ಯಗಳಿಗೆ ಹೆಚ್ಚು ಗಮನ ನೀಡುತ್ತದೆ.

### ಸದಸ್ಯತ್ವ

ಬ್ಯಾಂಕಿನ ಸದಸ್ಯತ್ವ ಪಡೆಯಬಹುದಾದ ದೇಶಗಳೆಂದರೆ (ಅ) ಇಕಾಫೆ ಸದಸ್ಯ ರಾಷ್ಟ್ರಗಳು, (ಆ) ಇಕಾಫೆ ಸಹಸದಸ್ಯ ರಾಷ್ಟ್ರಗಳು, (ಇ) ಇಕಾಫೆ ವಲಯದ ಇತರ ರಾಷ್ಟ್ರಗಳು. ಇವುಗಳು ವಿಶ್ವರಾಷ್ಟ್ರ ಸಂಸ್ಥೆ ಅಥವಾ ಅದರ ವಿಶೇಷ ಪ್ರಾತಿನಿಧಿಕ ಸಂಸ್ಥೆಗಳ ಸದಸ್ಯರಾಗಿರಬೇಕು.

ಇಪ್ಪತ್ತು ವಲಯ ಸದಸ್ಯರು ಮತ್ತು ಹದಿಮೂರು ವಲಯೇತರ ಸದಸ್ಯರೊಂದಿಗೆ ಬ್ಯಾಂಕು ಪ್ರಾರಂಭವಾಯಿತು. ಈಗ ಬ್ಯಾಂಕಿನ ಒಟ್ಟು ಸದಸ್ಯರ ಸಂಖ್ಯೆ 45. ಇವರಲ್ಲಿ 31 ವಲಯ ಸದಸ್ಯರು ಮತ್ತು 14 ವಲಯೇತರ ಸದಸ್ಯರು.

### ಬಂಡವಾಳ

ಪ್ರಾರಂಭದಲ್ಲಿದ್ದ 100 ಕೋಟಿ ಡಾಲರ್ ಬಂಡವಾಳ ಕ್ರಮೇಣ ಏರಿ ಈಗ ಬ್ಯಾಂಕಿನ ಅಧಿಕೃತ ಬಂಡವಾಳ 796 ಕೋಟಿ ಡಾಲರ್‌ಗಳು. ವಂತಿಗೆಯಾದ ಬಂಡವಾಳ 789 ಕೋಟಿ ಡಾಲರ್‌ಗಳು. ಸಾಮಾನ್ಯ ಬಂಡವಾಳ ಮತ್ತು ವಿಶೇಷ ನಿಧಿಗಳು ಬ್ಯಾಂಕಿನ ಸಂಪನ್ಮೂಲ. ಸದಸ್ಯರಿಂದ ಪಾವತಿಯಾದ ಬಂಡವಾಳ, ಮೀಸಲು ಮತ್ತು ಸಾಲಗಳ ಎತ್ತುವಳಿಯ ಮೂಲಕ ಪಡೆದ ಹಣ ಸಾಮಾನ್ಯ ಬಂಡವಾಳದಲ್ಲಿದೆ. ವಿಶೇಷ ನಿಧಿಯಲ್ಲಿ, ಸದಸ್ಯ ರಾಷ್ಟ್ರಗಳು ನೀಡಿದ ವಂತಿಗೆಯ ಜೊತೆಗೆ ಪಾವತಿಯಾದ ಬಂಡವಾಳದಿಂದ ತೆಗೆದಿರಿಸಿದ ಹಣವಿದೆ. ಸದಸ್ಯ ರಾಷ್ಟ್ರಗಳು ತಮ್ಮ ಬಂಡವಾಳ ವಂತಿಗೆಯ 82%ರಷ್ಟನ್ನು ಚಿನ್ನ ಅಥವಾ ಪರಿವರ್ತನೀಯ ಕರೆನ್ಸಿಯ ರೂಪದಲ್ಲಿ ಕೊಡಬೇಕು. ಉಳಿದ 18%ನ್ನು ತಮ್ಮ ದೇಶದ ಕರೆನ್ಸಿಯಲ್ಲಿ ಕೊಡಬಹುದು. ಅಭಿವೃದ್ಧಿ ಹೊಂದಿದ ರಾಷ್ಟ್ರಗಳಾದ ಜರ್ಮನಿ ಮತ್ತಿತರ 11 ಯೂರೋಪಿಯನ್ ರಾಷ್ಟ್ರಗಳು, ಆಸ್ಟ್ರೇಲಿಯ, ನ್ಯೂ ಜೀಲೆಂಡ್, ಕೆನಡ, ಅಮೆರಿಕ ಮತ್ತು ಜಪಾನ್ ಇವುಗಳ ಬಂಡವಾಳ ಬ್ಯಾಂಕಿನ 62%ರಷ್ಟಿದೆ.

ಸಾಮಾನ್ಯ ಬಂಡವಾಳದ ಜೊತೆಗೆ, ಏಷ್ಯ ಅಭಿವೃದ್ಧಿ ನಿಧಿ ಮತ್ತು

---

ಸಿಂಧುವಳ್ಳಿ ಬಾಲಸುಬ್ರಹ್ಮಣ್ಯಂ, ಡಿ. ಬನುಮಯ್ಯ ಕಾಲೇಜು, ಮೈಸೂರು

ತಾಂತ್ರಿಕ ಸಹಾಯ ನಿಧಿ ಎಂಬ ಎರಡು ವಿಶೇಷ ನಿಧಿಗಳನ್ನು ಬ್ಯಾಂಕು ಹೊಂದಿದೆ. ತನ್ನ ಸದಸ್ಯ ರಾಷ್ಟ್ರಗಳ ಬಂಡವಾಳ ಪೇಟೆಗಳಲ್ಲಿ ಹಣ ಎತ್ತುವುದರ ಮೂಲಕ ಬ್ಯಾಂಕು ಈ ನಿಧಿಗಳಿಗೆ ಹಣ ಪಡೆದುಕೊಳ್ಳುತ್ತದೆ. ತನ್ನ ಸಾಮಾನ್ಯ ಬಂಡವಾಳದ ಪಾವತಿಯಾಗದ ಕರೆಗಳ ಮೊತ್ತಕ್ಕೆ ಮೀರದಂತೆ ಬ್ಯಾಂಕು ಈ ಸಾಲ ಎತ್ತಬಹುದು. ಆಸ್ಟ್ರಿಯ, ಬೆಲ್ಜಿಯಮ್, ಜರ್ಮನಿ, ಇಟಲಿ, ಜಪಾನ್, ಕುವೈತ್, ಲಕ್ಸೆಂಬರ್ಗ್, ನೆದರ್‌ಲ್ಯಾಂಡ್ಸ್, ಸೌದಿ ಅರೇಬಿಯ, ಸ್ವಿಟ್ಜರ್‌ಲೆಂಡ್, ಅಮೆರಿಕ ಸಂಯುಕ್ತ ಸಂಸ್ಥಾನಗಳ ಬಂಡವಾಳ ಪೇಟೆಗಳಲ್ಲಿ ಬ್ಯಾಂಕು ಹಣ ಪಡೆದಿದೆ.

### ವ್ಯವಸ್ಥಾಪನೆ

ಬ್ಯಾಂಕಿನ ವ್ಯವಸ್ಥಾಪನೆ ಅಧ್ಯಕ್ಷ, ಉಪಾಧ್ಯಕ್ಷ ಮತ್ತು ಗವರ್ನರುಗಳ ಮಂಡಳಿ ಮತ್ತು ನಿರ್ದೇಶಕರುಗಳ ಮಂಡಳಿಗಳನ್ನೊಳಗೊಂಡಿದೆ. ಪ್ರತಿ ಸದಸ್ಯರಾಷ್ಟ್ರವೂ ಗವರ್ನರುಗಳ ಮಂಡಳಿಯಲ್ಲಿದೆ. ಈ ಮಂಡಳಿ ನೀತಿನಿರ್ದೇಶನ ಮಾಡುವ ಹೊಣೆಯುಳ್ಳದ್ದು. ದೈನಂದಿನ ವ್ಯವಹಾರಗಳ ಜವಾಬ್ದಾರಿ ನಿರ್ದೇಶಕ ಮಂಡಳಿಯದು. ಇದರಲ್ಲಿ 12 ಸದಸ್ಯರಿದ್ದು, ಅವರಲ್ಲಿ 8 ಜನ ಏಷ್ಯನ್ ವಲಯದ ರಾಷ್ಟ್ರಗಳನ್ನು ಪ್ರತಿನಿಧಿಸಿದರೆ ಉಳಿದ 4 ಜನ ವಲಯೇತರ ಸದಸ್ಯ ರಾಷ್ಟ್ರಗಳನ್ನು ಪ್ರತಿನಿಧಿಸುತ್ತಾರೆ. ನಿರ್ದೇಶಕರುಗಳಿಂದ ಚುನಾಯಿತರಾದ ಅಧ್ಯಕ್ಷರ ಅವಧಿ ಐದು ವರ್ಷಗಳು. ಬ್ಯಾಂಕಿನ ಕಾರ್ಯಾಚರಣೆ ಅಧ್ಯಕ್ಷರ ಪ್ರಮುಖ ಹೊಣೆ.

### ಕಾರ್ಯಾಚರಣೆ

ಏಷ್ಯದ ರಾಷ್ಟ್ರಗಳ ಅಭಿವೃದ್ಧಿಗೆ ಅಗತ್ಯವಾದ ಪರಸ್ಪರ ಸಹಕಾರ, ಅವಲಂಬನೆ ಮತ್ತು ಪೂರಕ ಪ್ರಯತ್ನಗಳಿಗೆ ಜೀವಂತ ಉದಾಹರಣೆಯಾಗಿ ತಾನಿದೆ ಎಂಬ ಪ್ರಶಂಸೆಯನ್ನು ಬ್ಯಾಂಕು ಪಡೆದಿದೆ. ಸದಸ್ಯ ರಾಷ್ಟ್ರಗಳ ಕ್ರಮಬದ್ಧ ಪ್ರಗತಿಗೆ ಬ್ಯಾಂಕು ಬುನಾದಿ ಹಾಕಿದೆ. ಬ್ಯಾಂಕಿನ ಸಾಲ ನೀಡಿಕೆ ಚಟುವಟಿಕೆಗಳು ಸಾಕಷ್ಟು ಬೆಳವಣಿಗೆಯಾಗಿವೆ. ಬ್ಯಾಂಕಿನ ನೆರವು ಪಡೆದು ಸದಸ್ಯ ರಾಷ್ಟ್ರಗಳಲ್ಲಿ ಅಭಿವೃದ್ಧಿಯಾಗಿರುವ ಕ್ಷೇತ್ರಗಳೆಂದರೆ ಕೃಷಿ, ಶಕ್ತಿ, ಹೆದ್ದಾರಿಗಳು, ಬಂದರುಗಳು, ವಿಮಾನ ನಿಲ್ದಾಣಗಳು, ನೀರು ಸರಬರಾಜು ಯೋಜನೆಗಳು, ನೀರಾವರಿ ಇತ್ಯಾದಿ.

1982ರಲ್ಲಿ ಬ್ಯಾಂಕು ನೀಡಿರುವ ಸಾಲ 173.1 ಕೋಟಿ ಡಾಲರುಗಳು (1981ರಲ್ಲಿ 167.8 ಕೋಟಿ ಡಾಲರುಗಳು). 1981ಕ್ಕೆ ಹೋಲಿಸಿದಾಗ 1982ರಲ್ಲಿ 3.2%ರಷ್ಟು ಏರಿಕೆಯಾಗಿದೆ. 1982ರಲ್ಲಿ ವಿತರಣೆಯಾದ ಸಾಲ 79.5 ಕೋಟಿ ಡಾಲರುಗಳು. ಇದೇ ವರ್ಷ ಬ್ಯಾಂಕು ನೀಡಿದ 'ಮೆದು ಸಾಲ' 54 ಕೋಟಿ ಡಾಲರುಗಳು. 1982ರ ಒಟ್ಟು ಸಾಲಗಳಲ್ಲಿ 36% ಕೃಷಿಗೆ ಹಾಗೂ 30% ಶಕ್ತಿಗೆ. 1982ರಲ್ಲಿ ಮರುಪಾವತಿಯಾದ ಸಾಲ 14.8 ಕೋಟಿ ಡಾಲರುಗಳು. 1966ರಿಂದ 1982ರ ವರೆಗೆ ಮರುಪಾವತಿಯಾದ ಸಾಲ 65.51 ಕೋಟಿ ಮಿಲಿಯನ್ ಡಾಲರುಗಳು.

### ಭಾರತ ಮತ್ತು ಬ್ಯಾಂಕು

ಏಷ್ಯ ವಲಯದಲ್ಲಿ ಅತಿ ಹೆಚ್ಚು ಬಂಡವಾಳ ನೀಡಿರುವ ರಾಷ್ಟ್ರಗಳಲ್ಲಿ ಎರಡನೆಯದಾದ ಭಾರತ ಈ ಬ್ಯಾಂಕಿನ ಸ್ಥಾಪಕ ಸದಸ್ಯ ದೇಶಗಳಲ್ಲಿ ಒಂದು. ಬ್ಯಾಂಕಿನಿಂದ ಇದುವರೆಗೆ ಯಾವುದೇ ಸಾಲ ಪಡೆಯದಿರುವುದು ಭಾರತದ ಹೆಗ್ಗಳಿಕೆ. ಭಾರತ ಕೊಟ್ಟಿರುವ ಬಂಡವಾಳ 11.5 ಕೋಟಿ ಡಾಲರುಗಳು, ಅಂದರೆ ಬ್ಯಾಂಕಿನ ಒಟ್ಟು ಬಂಡವಾಳದಲ್ಲಿ 6%. ವಲಯದಲ್ಲಿನ ಇತರ ರಾಷ್ಟ್ರಗಳಿಗೆ ಆದ್ಯತೆಗೆ ಅನುಸಾರ ನೆರವು ಸಿಗಲೆಂಬ ಕಾರಣದಿಂದ ಭಾರತ ಬ್ಯಾಂಕಿನಿಂದ ಯಾವುದೇ ಸಾಲ ಪಡೆಯಲಿಲ್ಲ. ಮೊದಲ ಬಾರಿಗೆ 1981ರಲ್ಲಿ 200 ಕೋಟಿ ಡಾಲರುಗಳ ಸಾಲಕ್ಕೆ ಕೋರಿಕೆ ಸಲ್ಲಿಸಿ, 1983-87ರ ಅವಧಿಯಲ್ಲಿ ಈ ಸಾಲ ಪಡೆಯಲಿಚ್ಛಿಸುವುದಾಗಿ ಭಾರತ ಸೂಚನೆ ನೀಡಿದಾಗ, ಅಮೆರಿಕ ಮತ್ತು ಜಪಾನ್ ಇದಕ್ಕೆ ತೀವ್ರ ಆಕ್ಷೇಪಣೆ ಎತ್ತಿದವು. ಭಾರತ ಕೇಳಿರುವ ಸಾಲವನ್ನು ಬ್ಯಾಂಕು ನೀಡಿದರೆ, ಅದರ ಸಂಪನ್ಮೂಲಗಳ ಬಹು ದೊಡ್ಡ ಭಾಗ ಹೋದಂತಾಗಿ, ಇತರ ರಾಷ್ಟ್ರಗಳಿಗೆ ನೆರವು ಸಿಗದಂತಾಗಬಹುದು ಎಂಬ ಭಯವನ್ನು ಬ್ಯಾಂಕು ವ್ಯಕ್ತಪಡಿಸಿತು. ಇದಲ್ಲದೆ, ಭಾರತಕ್ಕೆ ನೆರವು ಪಡೆಯಲು ಇತರ ಮೂಲಗಳು (ವಿಶ್ವ ಬ್ಯಾಂಕು, ಇತ್ಯಾದಿ) ಇರುವುದರಿಂದ ಅದು ಏಷ್ಯ ಅಭಿವೃದ್ಧಿ ಬ್ಯಾಂಕನ್ನು ಕೇಳುವುದು ಸರಿಯಲ್ಲ ಎಂಬ ಅಭಿಪ್ರಾಯವನ್ನು ಅಮೆರಿಕ ವ್ಯಕ್ತಪಡಿಸಿತು. ಈ ವಾದ ಅಷ್ಟು ಸಮಂಜಸವಲ್ಲ. ಏಕೆಂದರೆ, ಭಾರತದಂಥ ಮಧ್ಯಮ ಆದಾಯವುಳ್ಳ ರಾಷ್ಟ್ರಗಳಾದ ಫಿಲಿಪೀನ್ಸ್, ಮಲೇಷಿಯ, ಇಂಡೋನೇಷಿಯಗಳಿಗೆ ಈ ಹಿಂದೆ ಬ್ಯಾಂಕು ನೆರವು ನೀಡಿದೆ. ಇಷ್ಟಕ್ಕೂ, ಭಾರತ ಕೇಳಿದ್ದು ಮೆದು ಸಾಲವನ್ನಲ್ಲ (ರಿಯಾಯಿತಿ ಬಡ್ಡಿ ದರದ ಸಾಲ). ಬ್ಯಾಂಕಿನ ಸಾಮಾನ್ಯ ನಿಧಿಯಿಂದ 11.08% ಬಡ್ಡಿ ದರದಲ್ಲಿ ಅದಕ್ಕೆ ಸಾಲ ಬೇಕಾಗಿದ್ದುದು. ಸಣ್ಣ ನೀರಾವರಿ, ಶಕ್ತಿ, ರಸಗೊಬ್ಬರ ಮತ್ತು ಗಣಿ ಕೈಗಾರಿಕೆ ಅಭಿವೃದ್ಧಿಗೆ ಈ ಸಾಲ ಬಳಕೆಯಾಗುತ್ತದೆಂಬ ವಿಷಯವನ್ನು ಭಾರತ ಬ್ಯಾಂಕಿಗೆ ಮನವರಿಕೆ ಮಾಡಿತ್ತು. 1983ರ ನವಂಬರ್‌ನಲ್ಲಿ ಬ್ಯಾಂಕಿನ ಅಧ್ಯಕ್ಷ ಮಸಾವೋ ಫೂಜಿಯೋಕಾ ಭಾರತಕ್ಕೆ ಭೇಟಿ ನೀಡಿದಾಗ ಈ ವಿಷಯವನ್ನು ಭಾರತದ ಹಣಕಾಸು ಮಂತ್ರಿ ಮನವರಿಕೆ ಮಾಡಿದ್ದರು. 100 ಕೋಟಿ ಡಾಲರುಗಳ ಸಾಲ ನೀಡಬಹುದೆಂಬ ಸೂಚನೆಯನ್ನು ಬ್ಯಾಂಕು 1983ರಲ್ಲಿ ಭಾರತಕ್ಕೆ ನೀಡಿತು. ಆದರೆ 1984ರ ನವೆಂಬರ್ ವೇಳೆಗೆ ಬ್ಯಾಂಕು 20 ಕೋಟಿ ಡಾಲರುಗಳ ಸಾಲ ನೀಡಬಹುದೆಂದು ಹೇಳಿದಾಗ, ಬ್ಯಾಂಕಿನ ಅಸಹಕಾರಿ ಮನೋಭಾವಕ್ಕೆ ಪ್ರತಿಭಟನೆಯಾಗಿ, ಭಾರತ ತನ್ನ ಸಾಲದ ಅರ್ಜಿಯನ್ನು ಹಿಂದಕ್ಕೆ ಪಡೆಯಲು ನಿರ್ಧರಿಸಿತು.

### ಮುಕ್ತಾಯ

ಏಷ್ಯನ್ ಅಭಿವೃದ್ಧಿ ಬ್ಯಾಂಕ್ ಬಡವರ ಕ್ಲಬ್ಬು. ಸದಸ್ಯ ರಾಷ್ಟ್ರಗಳೆಲ್ಲ ಸಾಲ ಪಡೆಯಬಯಸುವಂಥವೇ. ಬ್ಯಾಂಕಿನ ಸಂಪನ್ಮೂಲಕ್ಕೆ ಇವುಗಳ ವಂತಿಗೆ ಗಣನೀಯವಾಗಿರುವುದಿಲ್ಲ. ವಲಯೇತರ ಸದಸ್ಯ ದೇಶವಾದ ಅಮೆರಿಕ ಇಲ್ಲೂ ತನ್ನ ಪ್ರತಿಷ್ಠೆ ಬೆಳೆಸುತ್ತಿದೆ. ಇಂಥ ಟೀಕೆಗಳು ಬ್ಯಾಂಕಿನ ಬಗ್ಗೆ ಇವೆ. ಹೀಗಿದ್ದರೂ, ವರ್ಷೇವರ್ಷೇ ತನ್ನ ಚಟುವಟಿಕೆಗಳನ್ನು ವಿಸ್ತಾರಗೊಳಿಸುತ್ತಿರುವ ಬ್ಯಾಂಕು ಏಷ್ಯ ವಲಯದಲ್ಲಿ ಪ್ರಾಮುಖ್ಯ ಗಳಿಸುತ್ತಿರುವುದರಲ್ಲಿ ಸಂದೇಹವಿಲ್ಲ.

★ ★ ★

# ಮುಂಬರುವ ದಿನಗಳಲ್ಲಿ ಬ್ಯಾಂಕರ್-ಗ್ರಾಹಕ ಸಂಬಂಧ

ಮೂಲ: ಸಿ. ಎಫ್. ಗ್ರೀನ್

ಅನುವಾದ: ಟಿ. ಕೆ. ರಂಗನಾಥ ● ಬಿ. ಎಸ್. ಚಂದ್ರಶೇಖರ ● ಕೆ. ಎನ್. ಮಹಾಬಲ ● ಬಿ. ಎನ್. ಚಂದ್ರಮೌಳಿ ● ಜಿ. ಎನ್. ನರಸಿಂಹಮೂರ್ತಿ ● ಚಿ. ರಾ. ವೇಣುಗೋಪಾಲ ● ಬಿ. ಎನ್. ನರಸಿಂಹಮೂರ್ತಿ ● ಪಾ. ರಾಜಗೋಪಾಲ ● ಅ. ಚ. ಅಶೋಕ ಕುಮಾರ

'ಮುಂಬರುಸ ದಿನಗಳಲ್ಲಿ ಬ್ಯಾಂಕ್ ಹಾಗೂ ಗ್ರಾಹಕರ ಸಂಬಂಧ' ಎನ್ನುವ ವಿಷಯ ಓದುಗರಿಗೆ ಚಿರಂತನ ಆಸಕ್ತಿಯ ವಿಷಯವಾಗಿದೆ. ಲಂಡನ್ನಿನ ಬ್ಯಾಂಕರರ ಸಂಸ್ಥೆ ಇತ್ತೀಚಿನ ಕಾನೂನಿನ ಬೆಳವಣಿಗೆಗಳನ್ನು ಸರಿಯಾಗಿ ತಿಳಿಯಲು ಏರ್ಪಡಿಸಿದ್ದ 'ಬ್ಯಾಂಕರನ ಕಾನೂನು ಬದ್ಧ ಹೊಣೆಗಳು' ಎಂಬ ವಿಚಾರಸಂಕಿರಣದಲ್ಲಿ ಗ್ರೀನ್ ಅವರು ಮಂಡಿಸಿದ ಪ್ರಬಂಧವಿದು.

## ಹಿನ್ನೆಲೆ

1960ರ ದಶಕದ ಮಧ್ಯಭಾಗದ ವರೆಗೆ ಬ್ಯಾಂಕಿಂಗ್ ಉದ್ಯಮ ಸಾಪೇಕ್ಷವಾಗಿ ಪ್ರಗತಿಗಾಮಿಯೂ ನವೋನ್ಮೇಷಶಾಲಿಯೂ ಆಗಿರುವುದಕ್ಕಿಂತ ಅಧಿಕವಾಗಿ ಸ್ಥಿರವೂ ಸಂರಕ್ಷಣಾತ್ಮಕವೂ ಪ್ರತಿಕ್ರಿಯಾತ್ಮಕವೂ ಆಗಿತ್ತು. ಔಪಚಾರಿಕ ಯೋಜನಾರಾಹಿತ್ಯ ಹಾಗೂ ಸಂರಚಿತ ಮಾರಾಟಗಾರಿಕೆ ನೀತಿಯ ಕೊರತೆ—ಇವು ಆ ಕಾಲದಲ್ಲಿದ್ದ ಕ್ರಿಯಾತ್ಮಕ ಧೋರಣೆಯಿಂದ ಭಿನ್ನವಾದ ಅನುಕ್ರಿಯಾತ್ಮಕ ಧೋರಣೆಗೆ ಮಾದರಿಗಳಾಗಿದ್ದುವು. ಬ್ಯಾಂಕಿಂಗ್ ಆಗ ಹೆಚ್ಚಿನ ಬೆಳವಣಿಗೆ ಹಾಗೂ ಸ್ಪರ್ಧೆಯ ಕಾಲವನ್ನು ಪ್ರವೇಶಿಸಿತು.

ಆಂತರಿಕ ಹಾಗೂ ವಿಶ್ವವ್ಯಾಪಿ ಸ್ಪರ್ಧೆಯ ಎದುರಿನಲ್ಲಿ ಬ್ಯಾಂಕಿಂಗನ್ನು ಸುಸಂಗತಗೊಳಿಸುವ ಹಾಗೂ ಮರುಸಂಘಟನೆ ಮಾಡುವ ಅಗತ್ಯ ತಲೆದೋರಿತು. ಯೂರೊ-ಕರೆನ್ಸಿ ಹಾಗೂ ಸಗಟು ಸ್ಟರ್ಲಿಂಗ್ ಮಾರುಕಟ್ಟೆಗಳ ವಿಕಾಸದಿಂದಾಗಿ ವಿದೇಶಿ ಸ್ವಾಮ್ಯದ ಬ್ಯಾಂಕುಗಳು ಲಂಡನ್ನಿಗೆ ಪ್ರವಾಹದೋಪಾದಿಯಲ್ಲಿ ನುಗ್ಗಿದುವು. ಒಂದು ಹೊಸ ವ್ಯವಸ್ಥಾಪಕ ಪೀಳಿಗೆ ಸಾಂಸ್ಥಿಕ ಹಾಗೂ ವಿತ್ತೀಯ ಯೋಜನಾ ತಂತ್ರಗಳನ್ನು ಬಳಸಲು ಪ್ರಾರಂಭಿಸಿತು. ಇದರಿಂದಾಗಿ ಮಾರಾಟಗಾರಿಕೆ ಮಹತ್ವದ್ದಾಯಿತು.

1960ರ ದಶಕದ ಕೊನೆಯಲ್ಲಿಯ ವಿಲೀನ ಕಾಲದಲ್ಲಿ ತೀರುವೆ ಬ್ಯಾಂಕುಗಳು ಅಂತರರಾಷ್ಟ್ರೀಯ ಬ್ಯಾಂಕಿಂಗಿನತ್ತ ಪೂರ್ಣವಾಗಿ ಪರಿವರ್ತನೆಗೊಂಡುವು. ಅಕ್ಸೆಸ್ ಹಾಗೂ ಬಾರ್‍ಕ್ಲೀ ಕಾರ್ಡ್ ಜನ್ಮ ತಳೆದುವು.

ಉದರಿ ಕಾರ್ಡಿನತ್ತ ಆದ ಈ ಬೆಳವಣಿಗೆ ಬ್ರಿಟನ್ನಿನಲ್ಲಿ ಪಾವತಿಗಳ ಹಾಗೂ ಅನುಭೋಗಿ ಉದರಿಯ ವಿನ್ಯಾಸದಲ್ಲಿ ಮಹತ್ತರ ಬದಲಾವಣೆಯ ಆಗಮನವನ್ನು ಸೂಚಿಸಿತು. ಈ ಕಾಲದಲ್ಲಿ ಚಂಚಲ ಆರ್ಥಿಕ ಪರಿಸ್ಥಿತಿಯಿತ್ತು. ಬಡ್ಡಿ ದರಗಳು ಏರಿಳಿಯುತ್ತಿದ್ದುವು. ಬೇತೀರುವೆದಾರ ಬ್ಯಾಂಕುಗಳ ಕೆಲವು ಉದ್ಯಮಶೀಲ ಸಾಹಸಿಗಳು ವಿವೇಕಯುತ ಕಟ್ಟುಪಾಡುಗಳ ವಿರುದ್ಧ ಆಕ್ರಮಣಕಾರಿಯಾಗಿ ನುಗ್ಗಿದುದರಿಂದ ಬ್ರಿಟಿಷ್ ಉಸ್ತುವಾರಿ ವ್ಯವಸ್ಥೆ ದುರ್ಬಲಗೊಂಡಿತು. 1974ರಲ್ಲಿ ಇದು ಗುಳ್ಳೆಯಂತೆ ಒಡೆದುಹೋಯಿತು. ತೈಲ ಬೆಲೆಗಳ ತೀವ್ರ ಏರಿಕೆ, ಸರ್ಕಾರಿ ನೀತಿಯ ಬದಲಾವಣೆಗಳು, ಆಸ್ತಿಯ ಮೌಲ್ಯಗಳ ಹಾಗೂ ಷೇರುಪೇಟೆಯ ಕುಸಿತ—ಇವುಗಳಿಂದ ಈ ಪ್ರಕ್ರಿಯೆ ತ್ವರೆಗೊಂಡಿತು.

ಜೀವನೋಪಾಯಮೂಲವಾದ ವೃತ್ತಿಪರ ಕ್ಷೇತ್ರಗಳಿಗೆ ಪರ್ಯಾಯವಾಗಿ ಬೇರೆ ಯಾವುದೂ ಇಲ್ಲವೆಂಬುದು ಸೀಮಾಂತ ಬ್ಯಾಂಕುಗಳ ದಿವಾಳಿತನದಿಂದ ಸಾಬೀತಾಯಿತು.

ತೀರುವೆದಾರ ಬ್ಯಾಂಕುಗಳು ಈ ಅಸ್ಥಿರ ಪರಿಸ್ಥಿತಿಯನ್ನು ದಾಟಿ ಹೊರಬರಬೇಕಾದರೆ ಕಷ್ಟವೇ ಆಯಿತು. ಯೋಜನೆ ಹಾಗೂ ಮಾರಾಟಗಾರಿಕೆಯನ್ನುಕುರಿತ ಹೊಸ ಧೋರಣೆಗಳಲ್ಲಿ ಅವಕ್ಕೆ ನಂಬಿಕೆ ಬೇರೂರಿತು. ಸ್ಥಿರ ಹಣಕಾಸು ಪರಿಸ್ಥಿತಿಯ ನಿರ್ಮಾಣಕ್ಕೆ ತಾವೇನು ಮಾಡಬೇಕೆಂಬ ಬಗ್ಗೆ ಹೊಸ ದರ್ಶನವೊಂದನ್ನು ಅವು ಪಡೆದುಕೊಂಡಿದ್ದುವು.

## ಇಂದು

ಸುಪರ್ದುಗಾರಿಕೆಯ ಕೆಲಸದೊಂದಿಗೆ ಬ್ಯಾಂಕರ್ ತನ್ನ ಕಾರ್ಯಾರಂಭ ಮಾಡಿದ್ದು ಸಾಕಷ್ಟು ಠೇವಣಿಗಳನ್ನು ಕೂಡಿಸಿಕೊಂಡ ಮೇಲೆ. ಅವನು ಅದರ ಒಂದು ಭಾಗವನ್ನು ದೀರ್ಘಾವಧಿಯಲ್ಲಿ ಉಪಯುಕ್ತವಾಗಿ ತೊಡಗಿಸತೊಡಗಿದ. ಸಾಮಾನ್ಯವಾಗಿ ತುರ್ತು ಸಮಯದಲ್ಲಿ ಮಾತ್ರ ಅವನು ಮತ್ತೊಬ್ಬ ಬ್ಯಾಂಕರನಿಂದ ಸಾಲ

ಸಿ. ಎಫ್. ಗ್ರೀನ್, ನಿರ್ದೇಶಕ ಮತ್ತು ವ್ಯವಸ್ಥಾಪಕ, ನ್ಯಾಷನಲ್ ವೆಸ್ಟ್‌ಮಿನ್‌ಸ್ಟರ್ ಬ್ಯಾಂಕ್; ಟಿ. ಕೆ. ರಂಗನಾಥ, ಕ್ಷೇತ್ರಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಳಗಾವಿ; ಬಿ. ಎಸ್. ಚಂದ್ರಶೇಖರ, ಕ್ಷೇತ್ರಾಧಿಕಾರಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ; ಕೆ. ಎನ್. ಮಹಾಬಲ, ಭಾರತೀಯ ಸ್ಟೇಟ್ ಬ್ಯಾಂಕ್, ಬನಶಂಕರಿ; ಬಿ. ಎನ್. ಚಂದ್ರಮೌಳಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು; ಜಿ. ಎನ್. ನರಸಿಂಹಮೂರ್ತಿ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು; ಚಿ. ರಾ. ವೇಣುಗೋಪಾಲ, ಭಾರತೀಯ ಸ್ಟೇಟ್ ಬ್ಯಾಂಕ್, ಮೈಸೂರು; ಬಿ. ಎನ್. ನರಸಿಂಹಮೂರ್ತಿ, ಅಧಿಕಾರಿ, ಯೋಜನಾ ಇಲಾಖೆ, ಭಾರತೀಯ ಸ್ಟೇಟ್ ಬ್ಯಾಂಕ್, ಸ್ಥಳೀಯ ಪ್ರಧಾನ ಕಛೇರಿ, ಬೆಂಗಳೂರು; ಪಾ. ರಾಜಗೋಪಾಲ, ಪ್ರಧಾನ ಕಾರ್ಯದರ್ಶಿ, ಸಮನ್ವಯ ಸಮಿತಿ; ಅ. ಚ. ಅಶೋಕ ಕುಮಾರ, ಶಾಖಾ ವ್ಯವಸ್ಥಾಪಕ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಹೊಂಗಳ್ಳಿ

† The Future of the Banker/Customer Relationship, *Journal of the Institute of Bankers*, 1982

ಪಡೆಯುತ್ತಾನೆ. ಬ್ಯಾಂಕುಗಳು ಈಗ ಠೇವಣಿಗಳಿಗಾಗಿ ಇತರ ನಾನಾ ಹಣಕಾಸು ಸಂಸ್ಥೆಗಳೊಂದಿಗೆ ಸ್ಪರ್ಧಿಸುತ್ತಿವೆ. ಅಂತರ ಬ್ಯಾಂಕ್ ಮಾರುಕಟ್ಟೆಗಳು ಸುಸ್ಥಾಪಿತವಾಗಿವೆ. ಸಗಟುನಿಧಿ ವಹಿವಾಟು ಬ್ಯಾಂಕಿನ ದೈನಂದಿನ ವ್ಯವಹಾರದ ಮಾಮೂಲು ಕಲಾಪಗಳಾಗಿ ಪರಿಣಮಿಸಿವೆ.

ಸ್ವಯಂಚಲೀಕರಣದಿಂದಾಗಿ ಹಣರವಾನೆಯಲ್ಲಿ ಕ್ರಾಂತಿಯೇ ಆಗಿದೆ. ಯಾಂತ್ರಿಕ ಲೆಕ್ಕದಾಖಲೆಗೆ ಗಣಕವನ್ನು ಬಳಸಲಾಗುತ್ತಿದೆ. ಇದರಿಂದ ವ್ಯವಹಾರದ ಗಾತ್ರ ಇಮ್ಮಡಿಸಿದೆ, ವಾಸ್ತವ ವೆಚ್ಚಗಳು ಇಳಿದಿವೆ.

ಸಾಲ ನೀಡಿಕೆಯ ನಿಟ್ಟಿನಲ್ಲೂ ಬದಲಾವಣೆಗಳಾಗಿವೆ. ಅವುಗಳ ಅವಧಿಗಳು ಹೆಚ್ಚಿವೆ. ಠಕ್ಕಮಟ್ಟಿಗಿನ ಮುಕ್ತ ಅರ್ಥವ್ಯವಸ್ಥೆಯಲ್ಲಿ, ವೈಯಕ್ತಿಕ ಠೇವಣಿಗಳ ಏರಿಕೆಯಿಂದ, ಮನೆ ಅಡಮಾನ ಸಾಲ ಮತ್ತು ಗೃಹ ಅಭಿವೃದ್ಧಿ ಸಾಲ ಮುಂತಾದ ನಾನಾ ಬಗೆಯ ವೈಯಕ್ತಿಕ ಸಾಲಗಳು ಹೆಚ್ಚುತ್ತವೆ.

ಬ್ಯಾಂಕಿಂಗ್ ವ್ಯವಹಾರಕ್ಕೆ ಸಂಬಂಧಿಸಿದಂತೆ ಈಗ ನೀಡಲಾಗುವ ಸೇವೆಗಳು ನೂರಾರು. ಈ ಸೇವೆಗಳಿಂದಾಗಿ ನಾವು ಸಾಂಪ್ರದಾಯಿಕ ಬ್ಯಾಂಕಿಂಗಿನ ಎಲ್ಲೆಗಳನ್ನೂ ಮೀರಿ ನಡೆದಿದ್ದೇವೆ. ಸಲಹಾ ಕಾರ್ಯ ದತ್ತ ಸಾಗಿದ್ದೇವೆ. ಇದರಿಂದಾಗಿ, ಸಾಲ ನೀಡಿಕೆ ಬ್ಯಾಂಕಿಂಗ್ ಹಾಗೂ ಸಲಹೆಗಾರಿಕೆಯ ನಡುವಣ ಗೆರೆ ಮಸಕಾಗುತ್ತಿದೆ. ಇವೆರಡರ ನಡುವಣ ವ್ಯತ್ಯಾಸ ಬಹಳ ಮುಖ್ಯವಾದ್ದು. ಸಾಲ ನೀಡುವ ಬ್ಯಾಂಕರ್ ನಷ್ಟಸಂಭವದಲ್ಲಿ ಪಾಲ್ಗೊಳ್ಳುತ್ತಾನೆ. ಸಲಹೆಗಾರ ನಾದರೋ, ಸ್ವತಃ ಯಾವ ನಷ್ಟಸಂಭವವನ್ನೂ ವಹಿಸಿಕೊಳ್ಳುವುದಿಲ್ಲ. ವಹಿಸಿಕೊಂಡರೂ ಬಹಳ ಸ್ವಲ್ಪ ಮಾತ್ರ. ಈ ಸೇವೆಗಳನ್ನು ಹೆಚ್ಚಾಗಿ ಲಾಭಕೇಂದ್ರಗಳೆಂದು ಪರಿಗಣಿಸಲಾಗುತ್ತಿದೆ. ಇವುಗಳಲ್ಲಿ ಪ್ರತಿ ಯೊಂದೂ ಬಂಡವಾಳದ ಮೇಲಿನ ಪ್ರತಿಫಲ ದೊರಕಿಸಿಕೊಡುವಂಥ ದೆಂಬ ದೃಷ್ಟಿಯಿಂದ ನೋಡಲಾಗುತ್ತಿದೆಯೇ ಹೊರತು, ಲಾಭ ದಾಯಕ ಖಾತೆದಾರನಿಗೆ ಇದೊಂದು ಬೋನಸ್ಸೆಂದು ಪರಿಗಣಿಸ ಲಾಗುತ್ತಿಲ್ಲ.

## ಅಂತರರಾಷ್ಟ್ರೀಕರಣ—ವಿಶ್ವವ್ಯಾಪಿ ಮಾರುಕಟ್ಟೆ?

ನಾನಾ ಬಗೆಯ ಬ್ಯಾಂಕುಗಳು ಹಾಗೂ ಹಣಕಾಸು ಸಂಸ್ಥೆಗಳ ಪೈಪೋಟಿಯಿಂದಾಗಿ ಬ್ಯಾಂಕಿಂಗಿನ ವ್ಯವಹಾರದೃಷ್ಟಿ ವೇಗವಾಗಿ ಹಿಗ್ಗುತ್ತಿದೆ. ಬ್ಯಾಂಕುಗಳು ವ್ಯವಹಾರಕ್ಕಾಗಿ ವಿದೇಶಗಳಲ್ಲಿ ಸೆಣಸು ತ್ತಿವೆ. ಪ್ರಮುಖ ಬ್ರಿಟಿಷ್ ಬ್ಯಾಂಕುಗಳ ಅಂತರ್ದೇಶೀಯ ವ್ಯವಹಾರ ವಾಸ್ತವವಾಗಿ ಅಂಥ ಹೆಚ್ಚಿನ ಬೆಳವಣಿಗೆಯನ್ನೇನೂ ಸಾಧಿಸಿಲ್ಲ. ಆದರೆ ಯೂರೊ-ಕರೆನ್ಸಿ ಮಾರುಕಟ್ಟೆಯಲ್ಲಿ ಮತ್ತು ಅಂತರ ರಾಷ್ಟ್ರೀಯ ವ್ಯವಹಾರದಲ್ಲಿ ಅವು ಇನ್ನೂ ವಿಸ್ತರಿಸುವುದು ಸಾಧ್ಯ.

ಮುಖ್ಯವಾಗಿ ಉತ್ತರ ಅಮೆರಿಕ ಮತ್ತು ದೂರಪೂರ್ವ ದೇಶ ಗಳಲ್ಲಿನ ಹಲವು ಬೆಳವಣಿಗೆ ಕ್ಷೇತ್ರಗಳು ಆಕರ್ಷಕವಾಗಿವೆ. ಆದರೆ ಕೆಲವು ಅರ್ಥವ್ಯವಸ್ಥೆಗಳನ್ನು ಬ್ಯಾಂಕುಗಳು ಪ್ರವೇಶಿಸಲು ಇರುವ ರಾಜಕೀಯ ನಿರ್ಬಂಧಗಳಿಂದಾಗಿಯೂ ಕೆಲವು ದೇಶಗಳಲ್ಲಿ ನಷ್ಟ ವನ್ನೆದುರಿಸಬೇಕಾಗಿ ಬರುವ ಸಾಧ್ಯತೆಯಿಂದಾಗಿಯೂ ಬ್ಯಾಂಕುಗಳು ಸ್ವಲ್ಪ ಕಾಲ ತಮ್ಮ ಶಕ್ತಿಸಂಚಯ ಮಾಡಿಕೊಳ್ಳುವುದು ಅವಶ್ಯವಿದೆ.

ಬ್ಯಾಂಕಿಂಗಿನ ಅಂತರರಾಷ್ಟ್ರೀಕರಣದ ಹಿಂದೆ ಕೆಲಸ ಮಾಡುತ್ತಿ ರುವ ಮೂಲ ಶಕ್ತಿಗಳೆಂದರೆ ದೊಡ್ಡ ಯುದ್ಧಗಳಿಲ್ಲದ್ದರಿಂದ ಜಗತ್ತಿ ನಲ್ಲಿ ನೆಲಸಿರುವ ತಕ್ಕಮಟ್ಟಿನ ನೆಮ್ಮದಿಯ ಫಲವಾಗಿ ಸಂಪರ್ಕ ಸಾಧನಗಳ ಹಾಗೂ ಪರಸ್ಪರಾವಲಂಬನೆಯ ಬೆಳೆವಣಿಗೆ. ನಾವಿಂದು ಬಹುಕರೆನ್ಸಿ (ಚಲಾರ್ಥ) ಮಾರುಕಟ್ಟೆಯಲ್ಲಿದ್ದೇವೆ. ದೇಶಗಳ ನಡುವೆ ಹಣದ ರವಾನೆಯ ಕೆಲಸಕ್ಕೆ ಸ್ವಯಂಚಲೀ ವ್ಯವಸ್ಥೆ ಬರುತ್ತಿದೆ. ಕರೆನ್ಸಿ ಸಾಲ ನೀಡಿಕೆ ಪ್ರವರ್ಧಿಸುತ್ತಿದೆ. ನಾವು ವಿಶ್ವವ್ಯಾಪಿ ಮಾರು ಕಟ್ಟೆಯಲ್ಲಿ ಒಂದಾಗುತ್ತಿದ್ದೇವೆ. ನಾನಾ ಮಟ್ಟಗಳ ವಿನಿಯಮನ ನಿರ್ಬಂಧಗಳಿವೆಯೆಂಬುದು ನಿಜವಾದರೂ ಈ ಪ್ರವೃತ್ತಿ ಸಾಗಿಯೇ ಇದೆ. ತೈಲ ಬೆಲೆಯೇರಿಕೆಯಿಂದ ಎರಡು ಬಾರಿ ಎರಡು ತೈಲಾಘಾತ ಗಳನ್ನು ದಾಟಿ ಅವುಗಳಿಂದೀಚೆಗೂ ವಿಶ್ವಅರ್ಥವ್ಯವಸ್ಥೆ ಉಳಿದು ಕೊಳ್ಳುವಂತಾಗಲು ಈ ವಿಶ್ವ ಮಾರುಕಟ್ಟೆ ನೆರವಾಗಿದೆ.

ವಿಶ್ವ ಬ್ಯಾಂಕಿಂಗ್ ಮತ್ತು ವ್ಯವಹಾರದ ಅಂತರರಾಷ್ಟ್ರೀಕರಣದ ಪ್ರವೃತ್ತಿ ಮುಂದುವರಿದಿದೆಯಾದರೂ, ನಿಜವಾದ ಅರ್ಥದಲ್ಲಿ ಬಹು ರಾಷ್ಟ್ರೀಯ ಬ್ಯಾಂಕು—ಉದಾಹರಣೆಗೆ ಬಹುಕರೆನ್ಸಿ ಬಂಡವಾಳವುಳ್ಳ ಬ್ಯಾಂಕು—ಇನ್ನೂ ಉದ್ಭವಿಸಿಲ್ಲ. ಪ್ರತಿಯೊಂದು ಅಂತರರಾಷ್ಟ್ರೀಯ ಬ್ಯಾಂಕೂ ತನ್ನ ಬಂಡವಾಳವನ್ನು ದೇಶೀಯ ಕರೆನ್ಸಿಗೆ ಸೀಮಿತ ಗೊಳಿಸಿಕೊಂಡಿದೆ. ಆ ಕರೆನ್ಸಿ ದೃಢವಾಗಿರುವಾಗ ಬ್ಯಾಂಕು ಲಾಭ ಪ್ರದತೆಯನ್ನು ಕಳೆದುಕೊಳ್ಳುತ್ತದೆ. ಅದು ದುರ್ಬಲವಾಗಿರುವಾಗ ಬ್ಯಾಂಕಿನ ಬಂಡವಾಳದ ಸ್ಥಿತಿ ಜರ್ಜರಿತವಾಗುತ್ತದೆ.

ಹೆಚ್ಚುತ್ತಿರುವ ಅಂತರರಾಷ್ಟ್ರೀಯ ಬ್ಯಾಂಕಿಂಗ್ ಸ್ಪರ್ಧೆಯೂ ನಮ್ಮ ಸಾಮುದಾಯಿಕ ಮತ್ತು ದೇಶೀಯ ಸಾಲಗಾರರಲ್ಲಿ ಬೆಳೆಯು ತ್ತಿರುವ ಸಂಕೀರ್ಣತೆಯೂ ಅಂತರರಾಷ್ಟ್ರೀಯ ಸಗಟು ವ್ಯವಹಾರದ ಅಂತರಗಳನ್ನು ಕುಗ್ಗಿಸುತ್ತವೆ. ಆದ್ದರಿಂದ ಪ್ರಮುಖ ಅಂತರ ರಾಷ್ಟ್ರೀಯ ಬ್ಯಾಂಕುಗಳು ಸ್ಪರ್ಧೆ ಮತ್ತು ನಷ್ಟ ಭಯದಿಂದಾಗಿ ಮತ್ತೆ ಮೊದಲಿನ ಸ್ಥಿತಿಗೇ ಮರಳುವುದು, ಸುಸ್ಥಿತ ವ್ಯವಸ್ಥೆಯ ದೇಶಗಳಲ್ಲಿಯ ಚಿಲ್ಲರೆ ಬ್ಯಾಂಕಿಂಗ್ ವ್ಯವಹಾರಕ್ಕೆ ಹಿಂದಿರುಗುವುದು ಅನಿವಾರ್ಯವಾಗಬಹುದು. ಇದರ ಫಲವಾಗಿ ಬ್ಯಾಂಕು-ಗ್ರಾಹಕ ಸಂಬಂಧದ ಪ್ರಥಮ ಪಾಠಗಳನ್ನೇ ಪುನರುಚ್ಚರಿಸುವಂತಾಗಬಹುದು.

## ಭವಿಷ್ಯ—ಖಾಸಗಿ ಹಾಗೂ ಸಾರ್ವಜನಿಕ ನಿಲುವು

ನಮ್ಮ ಸದ್ಯದ ನೆಲೆಯಿಂದ ಮುಂದಿನ ಹಾದಿಯನ್ನು ಅವಲೋಕಿಸು ವಾಗ ಬ್ಯಾಂಕುಗಳನ್ನು ಕುರಿತಂತೆ ಸಾರ್ವಜನಿಕ ದೃಷ್ಟಿ ಏನೆಂಬುದನ್ನು ಪರಿಗಣಿಸುವುದರಿಂದ ಪ್ರಯೋಜನವಾದೀತು. ಬ್ಯಾಂಕನ್ನು ಕುರಿತಂತೆ ಖಾಸಗಿ ಹಾಗೂ ಸಾರ್ವಜನಿಕ ಕಾಣ್ಕೆಗಳು ಒಂದೇ ಬಗೆಯಾಗಿಲ್ಲ. ಇದೊಂದು ವಿಚಿತ್ರ ದ್ವಂದ್ವ.

ಖಾಸಗಿ ದೃಷ್ಟಿಯಿಂದ ನೋಡುವುದಾದರೆ ದಕ್ಷತೆ, ಸೇವೆ, ಪ್ರಾಮಾಣಿಕತೆ ಹಾಗೂ ವಿಶ್ವಾಸಾರ್ಹತೆ ಇವು ಉನ್ನತಾಂಕ ಗಳಿಸು ತ್ತವೆ. ಆದರೆ ವೈಯಕ್ತಿಕ ವಲಯದಲ್ಲಿ ನಾವು ಪರಿಣಾಮಕಾರಿ ಯಾಗಿ ಸ್ಪರ್ಧಿಸಬೇಕಾದರೆ ನಮಗೆ ಅಗತ್ಯವಾಗಿ ಇರಬೇಕಾದ ಗುಣ ಗಳೆಂದರೆ ಸೌಹಾರ್ದ ಮತ್ತು ಸುಲಭಗಮ್ಯತೆ. ಈ ನಿಟ್ಟಿನಲ್ಲಿ ನಮಗೆ ದೊರಕುವ ಅಂಕ ಬಲು ಕಡಿಮೆ. ಭವಿಷ್ಯದಲ್ಲಿ ನಾವು ನಮ್ಮ ಗ್ರಾಹಕರ ಹೃದಯ ಮನಸ್ಸುಗಳೆರಡನ್ನೂ ಗೆಲ್ಲುವುದು ಅಗತ್ಯ.

ಈ ವಿಚಾರವನ್ನು ಇನ್ನೊಂದು ದೃಷ್ಟಿಯಿಂದಲೂ ಪರಿಗಣಿಸ ಬೇಕು. ಬ್ಯಾಂಕು ಲಾಭಾನುಸ್ಥಾಪಿತ ಖಾಸಗಿ ಉದ್ಯಮವೆಂಬುದು ಪಠ್ಯಪುಸ್ತಕದ ವ್ಯಾಖ್ಯೆ. ಬ್ಯಾಂಕುಗಳ ಬಗ್ಗೆ ಸಾರ್ವಜನಿಕರ ನಿರೀಕ್ಷೆ ಗಳು ಈ ವ್ಯಾಖ್ಯೆಯಿಂದ ದೂರ ಸರಿಯುವ ಸಂಭಾವ್ಯತೆ ಹೆಚ್ಚಾಗಿದೆ. ಪ್ರತಿಕೂಲ ರಾಜಕೀಯ ವಾತಾವರಣದಲ್ಲಿ ಅನಪೇಕ್ಷಿತ ಶಾಸನ ರಚನೆಯ ಸಂಭವ ಹೆಚ್ಚು. ಖಾಸಗಿ ಹಾಗೂ ಸಾರ್ವಜನಿಕ ಒತ್ತಡ

ಗಳಿಗೆ ಉತ್ತರವಾಗಿ ನಾವು ಇತರ ಬ್ಯಾಂಕುಗಳೊಂದಿಗೆ ಮಾತ್ರವಲ್ಲದೆ, ಹೆಚ್ಚು ವ್ಯಾಪಕವಾದ ಹಣಕಾಸು ಮಾರುಕಟ್ಟೆಯೊಳಗಡೆಯೂ ನಮ್ಮ ದಕ್ಷತೆಯನ್ನೂ ಸ್ಪರ್ಧಾತ್ಮಕತೆಯನ್ನೂ ಸಾಬೀತುಪಡಿಸಬೇಕಾಗಿದೆ. ಅಂತಿಮವಾಗಿ ಆಗಬಹುದಾದ್ದು ಇಷ್ಟು: ಪೇಟೆಯಲ್ಲಿ ಬದಲಾವಣೆಗಳಾಗುವಂತೆ ಈ ಸ್ಪರ್ಧೆ ಸದಾ ಒತ್ತುಕೊಡುತ್ತಲೇ ಇರುತ್ತದೆ.

### ಮಾರುಕಟ್ಟೆಯ ವಿಭಾಗೀಕರಣ

ಇಂಥ ಬದಲಾವಣೆಗಳು ಕ್ರಾಂತಿಕಾರಕವಾಗಿರುವುದಕ್ಕಿಂತ ವಿಕಸನಶೀಲವಾಗಿರುವ ಪ್ರವೃತ್ತಿಯೇ ಅಧಿಕ. ಶುದ್ಧ ಪ್ರಾದೇಶಿಕ ಸಂಘಟನೆ ಹೋಗಿ, ಅದರ ಸ್ಥಾನದಲ್ಲಿ ಹೆಚ್ಚು ಸಂಕೀರ್ಣವಾದ ವ್ಯವಸ್ಥಾಪನ ಸಂರಚನೆ ಬರುತ್ತಿರುವುದನ್ನು ನಾವು ಕಾಣಬಹುದು. ಬೇರೆಬೇರೆ ಭೌಗೋಲಿಕ ಪ್ರದೇಶಗಳ ನಿರ್ದಿಷ್ಟ ಸೇವೆಗಳ ಖಚಿತ ಮಾರುಕಟ್ಟೆ ವಿಭಾಗಗಳ ಬೇರೆಬೇರೆ ವ್ಯವಸ್ಥಾಪನ ಹೊಣೆಗಳು ಈ ಸಂರಚನೆಯ ಅಡಿಯಲ್ಲಿ ಒಂದಾಗುತ್ತಿವೆ. ಭವಿಷ್ಯದಲ್ಲಿ ನಾವು ಮೂರು ಮುಖ್ಯ ವ್ಯವಹಾರಗಳಲ್ಲಿ ತೊಡಗಿರುತ್ತೇವೆ. ಸಗಟು ಬ್ಯಾಂಕಿಂಗ್, ಚಿಲ್ಲರೆ ಬ್ಯಾಂಕಿಂಗ್ (ಎಂದರೆ ನನ್ನ ಅರ್ಥದಲ್ಲಿ ಇದು ವಾಣಿಜ್ಯ ಬ್ಯಾಂಕಿಂಗ್ ಹಾಗೂ ಸಾಂಪ್ರದಾಯಿಕ ವೈಯಕ್ತಿಕ ಬ್ಯಾಂಕಿಂಗ್)ಹಾಗೂ ಅಂತಿಮವಾಗಿ ಸಾಮೂಹಿಕ ಗ್ರಾಹಕ ಮಾರುಕಟ್ಟೆ—ಇವೇ ಆ ವ್ಯವಹಾರಗಳು. ತನ್ನ ಠೇವಣಿಗಳನ್ನು ಸಾಲವಾಗಿ ನೀಡುವವನು ಚಿಲ್ಲರೆ ವ್ಯವಹಾರದ ಬ್ಯಾಂಕರ್ ಆದರೆ, ತನ್ನ ಸಾಲಗಳನ್ನು ನಿಧೀಕರಿಸುವವನು ಸಗಟು ಬ್ಯಾಂಕರ್ ಎಂದು ವ್ಯಾಖ್ಯಿಸಬಹುದು.

ಮಾರುಕಟ್ಟೆಗಳನ್ನು ಕುರಿತ ಈ ಧೋರಣೆ ವಿಕಾಸವಾದಂತೆ ಪ್ರತಿಯೊಂದು ಬಗೆಯ ಗ್ರಾಹಕರಿಗೂ, ಅಷ್ಟೇ ಅಲ್ಲ, ಪ್ರತಿ ಗ್ರಾಹಕ ವ್ಯಕ್ತಿಗೂ ಅವನ ಅಥವಾ ಅವಳ ಅಗತ್ಯಗಳಿಗೆ ತಕ್ಕಂಥ ಬಗೆಬಗೆಯ ಸೇವೆಗಳು ಹಾಗೂ ಬಗೆಬಗೆಯ ಸಾಮರ್ಥ್ಯವುಳ್ಳ ಜನರು ಸುಲಭವಾಗಿ ಲಭ್ಯವಾಗುವಂತೆ ಖಾತರಿ ನೀಡುವಂಥ ಸಂಘಟನಾ ರಚನೆಗಳು ಹುಟ್ಟಿಕೊಳ್ಳಬಹುದು.

### ಗ್ರಾಹಕರೊಂದಿಗೆ ಸಂಬಂಧಗಳು

ಗ್ರಾಹಕರಿಗಾಗಿ ಬೃಹತ್‌ಕಂಪನಿಗಳು ಶೀಘ್ರವಾಗಿ ಹಾಗೂ ಅನುಕೂಲಕರವಾಗಿ ಅಂತರರಾಷ್ಟ್ರೀಯ ಹಣ ರವಾನೆ ಸೇವೆ ನೀಡುವ ಸಂರಚನೆಯೊಂದು ಕ್ರಮೇಣ ವಿಕಾಸಗೊಳ್ಳುವುದೆಂಬುದು ನನ್ನ ನಿರೀಕ್ಷೆ. ವಿದ್ಯುನ್ಮಾನ ಸಂವಹನ ಸೇವೆಗಳ (ಉದಾ : ಕಂಪನಿಯ ನಗದು ನಿರ್ವಹಣೆ) ನೆರವಿನಿಂದ ಇದು ಸಾಧ್ಯವಾಗುತ್ತದೆ. ಗ್ರಾಹಕ ಕಂಪನಿಗಳು ತಮ್ಮ ದಿನದಿನದ ಹಣ ಸ್ಥಿತಿಗಳನ್ನು ನಿರ್ವಹಿಸಲು ನೆರವಾಗುವಂತೆ ಸಿಲ್ಕು ಮತ್ತು ವಹಿವಾಟು ವರದಿ, ಕರೆನ್ಸಿ ತೋರಿಕೆ ವ್ಯವಸ್ಥೆ ಇವುಗಳ ಸ್ವಯಂಚಲೀಕರಣವೂ ಈ ಸೇವೆಗಳಲ್ಲಿ ಸೇರಿರುತ್ತದೆ.

ಬೃಹತ್ ಗ್ರಾಹಕ ಕಂಪನಿಗಳಿಗೆ ವಿಶೇಷ ನಿಕ್ಷಿಪ್ತ ಶಾಖಾವ್ಯವಸ್ಥೆಯ ಅಗತ್ಯ ಕಡಿಮೆ ಇರುತ್ತದೆ. ಆದರೆ ಅವು ಪ್ರಥಮತಃ ರವಾನೆ ಹಾಗೂ ಸಗಟು ಬ್ಯಾಂಕಿಂಗ್ ಕೇಂದ್ರಗಳೊಂದಿಗೆ ಸಂಪರ್ಕ ಹೊಂದಿರುತ್ತವೆ. ವಿನಿಮಯ ನಿಯಂತ್ರಣ ರದ್ದಿನ ಒತ್ತಾಸೆಯಿಂದಾಗಿ ಗ್ರಾಹಕ ಕಂಪನಿಗಳು ವ್ಯಾಪಕ ಹಾಗೂ ಏಕೀಕೃತ ಸೇವೆಗಳನ್ನು ತಮ್ಮ ಬ್ಯಾಂಕ್ ನೀಡಬೇಕೆಂದು ಬಯಸುತ್ತವೆ. ಯಾವುದೇ ದೊಡ್ಡ ಬ್ಯಾಂಕಿನಲ್ಲಿ ಆಂತರಿಕ ಹಾಗೂ ಅಂತರರಾಷ್ಟ್ರೀಯವೆಂದು ಹೇಳಲಾಗುವ ಬ್ಯಾಂಕಿಂಗ್ ಸಂಘಟನೆಗಳ ನಡುವಣ ವ್ಯತ್ಯಾಸ ಹೆಚ್ಚುಹೆಚ್ಚು ಮಸುಕಾಗುತ್ತದೆ. ಈ ಮಟ್ಟದಲ್ಲಿ ಪ್ರಪಂಚದ ಬಹುತೇಕ ದೊಡ್ಡ ಬ್ಯಾಂಕುಗಳನ್ನೊಳಗೊಂಡ 'ವಿಶ್ವವ್ಯಾಪಿ ಅಂತರ ಬ್ಯಾಂಕ್ ವಿತ್ತೀಯ ದೂರ ಸಂಪರ್ಕ ಸಂಘ' ಎಂಬ ಒಂದು ಸಂಸ್ಥೆಯನ್ನು ಬ್ಯಾಂಕುಗಳು ಈಗಾಗಲೇ ಹೊಂದಿವೆ. ಇದಕ್ಕೆ ಸಂವಾದಿಯಾಗಿ ಮುಂದಿನ ವರ್ಷ ತೀರುವೆ ಮನೆ ಸ್ವಯಂಚಲೀ ಪಾವತಿ ವ್ಯವಸ್ಥೆ (CHAPS—ಕ್ಲಿಯರಿಂಗ್ ಹೌಸ್ ಆಟೊಮೇಟೆಡ್ ಪೇಮೆಂಟ್ ಸಿಸ್ಟೆಮ್) ಎಂಬ ದೇಶೀಯ ವ್ಯವಸ್ಥೆಯೊಂದನ್ನು ಬ್ಯಾಂಕುಗಳು ಆರಂಭಿಸಲಿವೆ. ಇದು ಪಟ್ಟಣ ತೀರುವೆ ಮತ್ತು ದೂರವಾಣಿ ವರ್ಗಾವಣೆಗೆ ಒಂದು ವಿದ್ಯುನ್ಮಾನ ಪರ್ಯಾಯವಾಗಿರುತ್ತದೆ.

### ವಾಣಿಜ್ಯಕ ಮತ್ತು 'ಪಾರಂಪರಿಕ' ಗ್ರಾಹಕರು

ಚಿಲ್ಲರೆ ಬ್ಯಾಂಕಿಂಗಿನಲ್ಲಿ ನಿಧಿಯ ವಿದ್ಯುನ್ಮಾನ ವರ್ಗಾವಣೆ ವ್ಯವಸ್ಥೆಯ (ಎಲೆಕ್ಟ್ರಾನಿಕ್ ಫಂಡ್ಸ್ ಟ್ರಾನ್ಸ್‌ಫರ್ ಸಿಸ್ಟೆಮ್—EFTS) ಅಭಿವೃದ್ಧಿ ಅತ್ಯಂತ ಮುಖ್ಯವಾದ ಆಯಕಟ್ಟಿನ ಪ್ರಶ್ನೆ. ಬ್ಯಾಂಕರರ ಸ್ವಯಂಚಲೀಕೃತ ತೀರುವೆ ವ್ಯವಸ್ಥೆಯ (ಬ್ಯಾಂಕರ್ಸ್ ಆಟೊಮೇಟೆಡ್ ಕ್ಲಿಯರಿಂಗ್ ಸಿಸ್ಟೆಮ್—BACS) ಮೂಲಕ ದೊರೆಯುವ ವಿದ್ಯುನ್ಮಾನ ಪಾವತಿ ಪದ್ಧತಿಗಳಲ್ಲಿ ನೇರ ಋಣಿಕೆಗಳು, ಸ್ಥಾಯೀ ಆದೇಶಗಳು ಮತ್ತು ಸ್ವಯಂಚಲೀಕೃತ ಉದರಿ ವರ್ಗಾವಣೆಗಳು ಸೇರಿವೆ. ಈ ಪಾವತಿ ವ್ಯವಸ್ಥೆಗಳು ಹತ್ತಾರು ವರ್ಷಗಳಿಂದ ಜಾರಿಯಲ್ಲಿದ್ದು ಸ್ಥಿರಗೊಂಡಿವೆ. ಅಲ್ಲದೆ ಇವು ಗಮನಾರ್ಹ ಪ್ರಗತಿ ಸಾಧಿಸುತ್ತಿವೆ. ಒಟ್ಟು ನಗದೇತರ ಪಾವತಿಗಳಲ್ಲಿ ಇವುಗಳ ಪಾಲು ಸುಮಾರು ಸೇ. $\frac{3\,0}{2\,0}$.

ತಮ್ಮ ಪಾವತಿ ವ್ಯವಸ್ಥೆಗಳ ಬಲದ ಆಧಾರದ ಮೇಲೆ ತೀರುವೆ ಬ್ಯಾಂಕುಗಳು ಬಿಕರಿ ಹಂತದಲ್ಲಿ (ಪಾಯಿಂಟ್ ಆಫ್ ಸೇಲ್) ಹಣದ ವಿದ್ಯುನ್ಮಾನ ವರ್ಗಾವಣೆ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸುವುದರ ಕಡೆಗೆ ಮುನ್ನಡೆಯುವುದನ್ನು ಈಗ ತತ್ವಶಃ ಒಪ್ಪಿಕೊಂಡಿವೆ. ಇತರ ಹಣಕಾಸು ಸಂಸ್ಥೆಗಳೂ ಪಾಲ್ಗೊಳ್ಳುವುವೆಂದು ನಿರೀಕ್ಷಿಸಲಾಗಿದೆ. ಇದರ ಭವಸಾಮರ್ಥ್ಯ ಅಪರಿಮಿತವಾದ್ದು. ಉದರಿ ಕಾರ್ಡ್ ಕಂಪನಿಗಳು ತಮ್ಮ ಚಿಲ್ಲರೆ ವ್ಯಾಪಾರಿಗಳು ಸೃಷ್ಟಿಸುವ ಪತ್ರ ಹೊರೆಯನ್ನು ಸಾಕಷ್ಟು ಕಡಿಮೆ ಮಾಡುವುದು ಸಾಧ್ಯವಾಗುತ್ತದೆ. ತತ್ಪರಿಣಾಮವಾಗಿ ವೆಚ್ಚಗಳ ಉಳಿತಾಯವಾಗುತ್ತದೆ. ಇದಕ್ಕಿಂತ ಮುಖ್ಯವಾಗಿ ಮಾರಾಟಗಾರಿಕೆಯ ಗಣನೀಯ ಅವಕಾಶಗಳು ಪ್ರಾಪ್ತವಾಗುತ್ತವೆ. ಇಂಥ ವ್ಯವಸ್ಥೆಯಿಂದ ಹೆಚ್ಚುಹೆಚ್ಚಾಗಿ ಚಿಲ್ಲರೆ ಬ್ಯಾಂಕಿಂಗಿನ ಸಾಧ್ಯತೆ ಬೆಳೆಯುತ್ತದೆ. ಪ್ರಸ್ತುತದಲ್ಲಿ ಚಿಲ್ಲರೆ ವ್ಯಾಪಾರಿಗಳಿಗೆ ದೇಯವಾಗುವ ಚೆಕ್ಕುಗಳು ಒಟ್ಟು ಋಣಿಕೆ ತೀರುವೆಯ ಸುಮಾರು ಸೇ. 30ರಷ್ಟು ಆಗಿರುತ್ತದೆ. ಪ್ರಾರಂಭದಲ್ಲಿ ಕೇವಲ ಭಾರಿ ಅಂಗಡಿಗಳು ಮಾತ್ರ ಇದರಲ್ಲಿ ಪಾಲ್ಗೊಳ್ಳಬಹುದಾದರೂ, ಒಮ್ಮೆ ಇದರ ಅನುಕೂಲಗಳ ಮನವರಿಕೆಯಾದರೆ ಈ ಯೋಜನೆ ಕ್ಷಿಪ್ರವಾಗಿ ವಿಸ್ತರಿಸುವುದೆಂದು ನಿರೀಕ್ಷಿಸಲಾಗಿದೆ.

ಹಣದ ವಿದ್ಯುನ್ಮಾನ ವರ್ಗಾವಣೆಯಲ್ಲಿ ಇನ್ನೂ ಹೆಚ್ಚು ತೀವ್ರವಾದ ಮುನ್ನಡೆಯನ್ನು ನಾವು ನಿರೀಕ್ಷಿಸಬೇಕು. ಹಣ ರವಾನೆಯ ಸೇವೆ ಸಂಪೂರ್ಣವಾಗಿ ಸ್ವಯಂಚಲೀಕೃತವಾಗುವ ಘಟ್ಟ ಮುಟ್ಟಬೇಕು. ಮೂರನೆಯ ವ್ಯಕ್ತಿಗಳಿಗೆ ಪಾವತಿ ಸಾಧಿಸುವ ಇತ್ಯರ್ಥಕಗಳ (ಟರ್ಮಿನಲ್ಸ್) ಅಗತ್ಯವನ್ನು ದೊಡ್ಡ ವ್ಯವಹಾರ ಸಂಸ್ಥೆಗಳು ಕಂಡುಕೊಳ್ಳುವ ದಿನ ಬಲು ದೂರವಿಲ್ಲ. ಇದು ಸಾಧ್ಯವಾಗುವ ಮುನ್ನ ಬ್ಯಾಂಕುಗಳು ನಗದು ಸದಾ ಕೈಗೆ ಸಿಗುವಂಥ ವ್ಯವಸ್ಥೆಯ ಜೊತೆಗೆ

ಸ್ವಇಚ್ಛೆಯ ಸ್ವಯಂಚಲೀಕೃತ ವರ್ಗಾವಣೆ ಹಾಗೂ ರವಾನೆ ಸೌಲಭ್ಯಗಳನ್ನು ನೀಡುವತ್ತ ಗಂಭೀರವಾಗಿ ಆಲೋಚನೆ ಹರಿಸಬೇಕಾಗಿದೆ. ಹಣ ರವಾನೆ ಕ್ಷೇತ್ರಗಳನ್ನು ಇತರರು ಪ್ರವೇಶಿಸದಂತೆ ತಡೆಯಲಿಕ್ಕಾದರೂ ಇದು ಅಗತ್ಯ. ನಿಧಿಯ ವಿದ್ಯುನ್ಮಾನ ವರ್ಗಾವಣೆ ವ್ಯವಸ್ಥೆಗಳಿಂದ ಬ್ಯಾಂಕೇತರ ಸಂಸ್ಥೆಗಳು ಪಾವತಿ ಸೇವೆಗಳನ್ನು ಒದಗಿಸುವುದು ಸುಲಭವಾಗಬಹುದು. ಸರಪಳಿ ಅಂಗಡಿಗಳು ಮತ್ತು ಅಂಚೆ ಆದೇಶ ಕಂಪನಿಗಳು (ತಮ್ಮ ಗಣಕೀಕೃತ ಪರಿಚಾಲನೆ ಹಾಗೂ ಭೂರಿ ಗ್ರಾಹಕ ದಫ್ತರಗಳ ನೆರವಿನಿಂದ) ಹಣಕಾಸು ಸೇವೆಯ ಮಾರುಕಟ್ಟೆಗೆ ಟಿಸಿಲೊಡೆಯುವ ಅವಕಾಶವನ್ನು ಕಂಡುಕೊಳ್ಳಬಹುದು.

ನಿಧಿಗಳ ವಿದ್ಯುನ್ಮಾನ ರವಾನೆ ವ್ಯವಸ್ಥೆ ಮತ್ತು ಪಾವತಿ ವ್ಯವಸ್ಥೆಗಳ ಕ್ಷಿಪ್ರಪ್ರಗತಿಯಿಂದ ನಮ್ಮ ವ್ಯವಹಾರ ನಿರ್ವಹಣೆಯ ಹಾದಿಯೇ ಮೂಲಭೂತವಾಗಿ ಬದಲಾಗುವ ಸಾಧ್ಯತೆಯಿದೆ. ಪತ್ರಗಳ ಅವಸಾನದಿಂದ ವೆಚ್ಚಗಳು ಕಡಿಮೆಯಾಗುತ್ತವೆ. ಆದರೆ ವಹಿವಾಟಿನ ಇತ್ಯರ್ಥದ ವೇಗ ಹೆಚ್ಚಿದ ಫಲವಾಗಿ ಮಾರ್ಗಸ್ಥ ವಹಿವಾಟು (FLOAT) ಕಡಿಮೆಯಾಗಿ ಲಾಭಪ್ರದತೆ ಇಳಿಯುತ್ತದೆ. ಪತ್ರಾವಸಾನದ ಜೊತೆಗೆ, ಪಾವತಿ ವಹಿವಾಟುಗಳ ಮೂಲಕ ಅಧಿಕಾರ ನೀಡಿಕೆಯನ್ನು ಕುರಿತಂತೆ ಕಾನೂನಿನ ಚಿಂತನೆಯ ತಳಹದಿಯಾಗಿ ವಿನಿಮಯ ಹುಂಡಿಯ ಅವಸಾನವೂ ಆಗಬಹುದು.

## ಸ್ಫಟಿಕಗೋಲ ವೀಕ್ಷಣೆ

ಈಗಿನ ಪ್ರಯೋಗಗಳು ಯಶಸ್ವಿಯಾದಲ್ಲಿ ಗ್ರಾಹಕರು ತಮ್ಮ ಬ್ಯಾಂಕ್ ವ್ಯವಹಾರವನ್ನು ತಮ್ಮ ಕಛೇರಿಯಿಂದಲೇ ಅಥವಾ ಆರಾಮ ಕುರ್ಚಿಯಲ್ಲಿ ಕುಳಿತೇ ನಡಸುವ ಕಾಲ ಬರುತ್ತದೆ. ಈ ಬಗ್ಗೆ ತಂತ್ರಜ್ಞಾನ ಈಗಾಗಲೇ ಲಭ್ಯವಿದೆ. ಈ ಪರಿಕಲ್ಪನೆಗಳನ್ನು ವಾಣಿಜ್ಯ ಮಾರುಕಟ್ಟೆಯಲ್ಲಿ ಪರೀಕ್ಷಿಸುವ ಸಾಧನವೊಂದನ್ನು ಪ್ರೆಸ್ಟಲ್ ಒದಗಿಸುತ್ತದೆ ಕೂಡ. ರಾಷ್ಟ್ರವ್ಯಾಪಿ ವಿಸ್ತೃತ ಪಟಲ (ಬ್ರಾಡ್ ಬ್ಯಾಂಡ್) ಕೇಬಲ್ ಜಾಲವನ್ನು ನಿರ್ಮಿಸುವ ಸರ್ಕಾರದ ಇತ್ತೀಚಿನ ಪ್ರಕಟಣೆಯಿಂದ ಈ ಪ್ರಕ್ರಿಯೆ ತ್ವರಿತಗೊಳ್ಳಲಿದೆ. ಕೇಬಲ್ ಮತ್ತು ಉಪಗ್ರಹ ದೂರದರ್ಶನಗಳೂ ಸೇರಿದಂತೆ ಕನಿಷ್ಠ 30 ಪದಗಳ ಸಾಮರ್ಥ್ಯವುಳ್ಳ ವ್ಯಾಪಕ ಪಟಲ ಕೇಬಲ್‌ಗಳನ್ನು ಪ್ರಮುಖ ನಗರಗಳಿಗೆ ಶೀಘ್ರವಾಗಿ ಹಾಕಿಸಲು ಸರ್ಕಾರ ಕರೆ ನೀಡುತ್ತಿದೆ. ಈ ಜಾಲಕ್ಕೆ ಖಾಸಗಿ ಬಂಡವಾಳದಿಂದಲೂ ಹಣಕಾಸು ದೊರಕುತ್ತದೆ. ಬ್ಯಾಂಕುಗಳೂ ಉದರಿ ಕಾರ್ಡ್ ಕಂಪನಿಗಳೂ ಈ ಕ್ಷೇತ್ರದಲ್ಲಿ ಆಸಕ್ತಿ ತಳೆಯುವುವೆಂದು ನಿರೀಕ್ಷಿಸಬಹುದು.

ಮನೆಗೆ ವ್ಯವಹಾರ ಮಾಹಿತಿಯನ್ನು ಪೂರೈಸುವ ವ್ಯವಸ್ಥೆಯಿಂದ ಗೃಹ ಮತ್ತು ವ್ಯವಹಾರಗಳ ನಡುವೆ ದ್ವಿಮುಖ ಸಂದೇಶ ವ್ಯವಸ್ಥೆಯಾಗಿ ಪ್ರೆಸ್ಟೆಲನ್ನು ಪರಿವರ್ತಿಸಬಹುದಾಗಿದೆಯಾದರೂ, ಪ್ರಕೃತದ ತೀರುವೆ ವಹಿವಾಟುಗಳ ರಾಶಿಗಳನ್ನೂ ಸಂಲೇಖಗಳ ಚಲನೆಯ ಮೇಲೆ ತತ್‌ಕ್ಷಣದಲ್ಲಿ ಆಗಬಹುದಾದ ಪರಿಣಾಮವನ್ನೂ ನೋಡಿದಾಗ ನಮಗೆ ಥಟ್ಟನೆ ವಸ್ತುಸ್ಥಿತಿಯ ಅರಿವಾಗುತ್ತದೆ. ನಗದುರಹಿತ ಅಥವಾ ಚೆಕ್ಕುರಹಿತ ಸಮಾಜವೊಂದು ಎಂದಾದರೂ ಬಂದೀತೆ ಎಂಬ ಬಗ್ಗೆ ನಾವು ಗಂಭೀರವಾಗಿ ಯೋಚಿಸಬೇಕಾಗಿದೆ. ಚೆಕ್ಕು ನಿರ್ವಹಿಸಲು ದುಬಾರಿಯಾದ ಒಂದು ಸಂಲೇಖ. ವಿಭಜನೆ ಹಾಗೂ ಅಡ್ಡಾದಿಡ್ಡಿ ರವಾನೆಯಿಂದಾಗಿ ನಮ್ಮ ಯತ್ನಗಳು ಸೀಮಿತ ಯಶಸ್ಸುಗಳಿಸಿವೆ. ತಂತ್ರಜ್ಞಾನದ ಇನ್ನಷ್ಟು ಮುನ್ನಡೆಯಿಂದ ನಮಗೆ ಸಹಾಯವಾದೀತಾದರೂ, ವಿದ್ಯುನ್ಮಾನ ಪಾವತಿಗಳಿಗೆ ಸಂಬಂಧಿಸಿದ ಕಾನೂನಿಕ ತೊಂದರೆಗಳಿಂದ ಪ್ರಗತಿ ಕುಂಠಿತವಾಗಬಹುದು.

ಸಂವಹನ ಸಾಮರ್ಥ್ಯಗಳ ವಿಸ್ತರಣೆಯಿಂದ ಬಿಂಬಸಂಸ್ಕರಣದಲ್ಲಿ ಹೆಚ್ಚಿನ ಸಂಶೋಧನೆಗೂ ದಸ್ತೈವಜುಗಳ ಹಾಗೂ ಪಾವತಿ ಸಂಲೇಖಗಳ ನಿರ್ವಹಣೆಗೂ ಸ್ವಯಂತಾಳೆಯ ಸೌಲಭ್ಯವಿರುವ ಅಂಕಮಾಪಿ ಪಾವತಿ ಉಪಕರಣಗಳಿಗೂ ಉತ್ತೇಜನ ದೊರಕಬಹುದು. ಹಣದ ಪಾವತಿಯಾಗುವ ಮುನ್ನ, ತ್ವರಿತ ಸ್ವಯಂಚಲೀ ಸ್ಥಿರೀಕರಣದ ಮೂಲಕ, ಚೆಕ್ ಮತ್ತು ಉದರಿ ಕಾರ್ಡ್ ವಂಚನೆಗೆ ಪರಿಹಾರವನ್ನು ತಂತ್ರಜ್ಞಾನ ಕಂಡುಕೊಳ್ಳಬೇಕಾಗಿದೆ.

ಲೇಸರ್ ತಂತ್ರವಿಧಾನಗಳನ್ನು ಬಳಸಿ ಉದರಿ ಕಾರ್ಡ್ ಆಕಾರದ ಪ್ಲಾಸ್ಟಿಕ್ ತುಂಡಿನ ಮೇಲೆ ಹತ್ತು ಲಕ್ಷ ಪದಗಳ ಪಾಠವನ್ನು ದಾಖಲಿಸುವುದು ಈಗ ತಾಂತ್ರಿಕವಾಗಿ ಸಾಧ್ಯವಾಗಿದೆ. ಈಗಿನ ಅಯಸ್ಕಾಂತ ಸಂಕೇತ ಲೇಖಿತ ಪ್ರಸಾಮಾನ್ಯ ಪಟ್ಟಿಯ ಮೇಲೆ ಕೂಡ 1,20,000 ಪದಗಳಷ್ಟು ಮಾಹಿತಿಯನ್ನು ತುಂಬಬಹುದು. ಇದರಿಂದ ವಹಿವಾಟು ಕಾರ್ಡಿನ ಮೇಲೆ ಆಗಿಂದಾಗ್ಗೆ ಹೊಸ ಹೊಸ ವಹಿವಾಟುಗಳನ್ನು ತುಂಬುವುದು ಸಾಧ್ಯವಾದೀತು. ಲೇಖನ ವಾಚನಗಳೆರಡೂ ವೇಗವಾಗುತ್ತವೆ. ಮಾಹಿತಿ ತಂತ್ರಜ್ಞಾನ ಹಾಗೂ ಪಾವತಿ ವ್ಯವಸ್ಥೆಗಳ ಮೇಲೆ ಇದರ ಪರಿಣಾಮಗಳು ಗಮನಾರ್ಹ.

## ಸಾಲ ನೀಡಿಕೆ—ಶಾಖೆಯ ಪಾತ್ರ

ವಾಣಿಜ್ಯ ಸಾಲ ನೀಡಿಕೆ ಮಾರುಕಟ್ಟೆಯಲ್ಲಿ ಬ್ಯಾಂಕಿಂಗಿನ ಉಪಗಮನ (ಅಪ್ರೋಚ್) ವಿಶಾಲವಾಗುತ್ತ ನಡೆಯುತ್ತದೆ. ಉದಾಹರಣೆಗೆ ದೀರ್ಘತರ ಅವಧಿಯಲ್ಲಿ ಸ್ಥಿರ ದರ ಸಂರಚನೆಯ ಸಮಗ್ರ ಸಾಲ ನೀಡಿಕೆಯಿಂದ ಮತ್ತು ಗ್ರಾಹಕರಿಗೆ ಆಕರ್ಷಕವಾದ ಹಾಗೂ ಅವರಿಗೆ ತೆರಿಗೆಯಲ್ಲಿ ರಿಯಾಯಿತಿಗಳನ್ನು ದೊರಕಿಸಿಕೊಡುವ ಸಮಗ್ರ ಗುತ್ತಿಗೆ ವ್ಯವಸ್ಥೆಯಿಂದ ಇದು ಸಾಧ್ಯವಾಗುತ್ತದೆ. ನಷ್ಟಸಂಭವವನ್ನು ತೆಳುವುಗೊಳಿಸದೆ ಸಾಲ ನೀಡಿಕೆಯ ತಂತ್ರಗಳನ್ನು ಸರಳಗೊಳಿಸಲಾಗುತ್ತದೆ. ಉದರಿ ಮಾಪನ ಹಾಗೂ ಸ್ವಯಂಚಲೀಕೃತ ಮೌಲ್ಯ ಮಾಪನ ನಿರ್ಧಾರಣದ ವ್ಯಾಪಕ ಬಳಕೆಯಿಂದ ಬ್ಯಾಂಕರ್ ಹೆಚ್ಚು ಸಂಕೀರ್ಣ ವ್ಯವಹಾರ ನಡಸುವುದು ಮತ್ತು ತನ್ನ ಉತ್ಪನ್ನಗಳನ್ನು ಹೆಚ್ಚು ಸಕ್ರಿಯವಾಗಿ ಮಾರಾಟ ಮಾಡುವುದು ಸಾಧ್ಯವಾಗುವಂತೆ ಅವನು ಸ್ವತಂತ್ರಗೊಳ್ಳುತ್ತಾನೆ.

ಆರ್ಥಿಕತೆಯ ಚಾಲಕಶಕ್ತಿಯಾಗಬಹುದಾದ ಸಣ್ಣ ವ್ಯಾಪಾರಿ ಹಾಗೂ ವೈಯಕ್ತಿಕ ಉದ್ಯಮಶೀಲರಿಗೆ ಸಹಾಯ ಮಾಡಲು ಶಾಖಾಜಾಲ ಹೆಚ್ಚಾಗಿ ಸಜ್ಜುಗೊಂಡಿರುತ್ತದೆ. ಇದರಿಂದಾಗಿ ಖಾಸಗಿ ಗ್ರಾಹಕರನ್ನು ಹೊರತುಪಡಿಸಲಾಗುತ್ತದೆ ಎಂದು ಹೇಳಿದಂತಲ್ಲ. ಆದರೆ ಶಾಖೆಗಳು ಮಧ್ಯಮಾವಧಿ ಸಾಲದ ಮಾರುಕಟ್ಟೆಯಲ್ಲಿ ಲಭ್ಯವಿರುವ ಲಾಭಕರವಾದ ಹಾಗೂ ವರ್ಧಿತಮೌಲ್ಯದ ವ್ಯವಹಾರಕ್ಕೆ ಹೆಚ್ಚಿನ ಗಮನ ನೀಡುವ ಹಾಗೂ ಅನೌಪಚಾರಿಕ ಮತ್ತು ಸುಲಭಸಾಧ್ಯ ರೀತಿಯಲ್ಲಿ ಸ್ಥಳೀಯ ಸಮುದಾಯಕ್ಕೆ ಸೇವೆ ಸಲ್ಲಿಸುವ ಕಾರ್ಯವನ್ನು ಮುಂದುವರಿಸುವ ಪ್ರವೃತ್ತಿಗೆ ಒಳಗಾಗುತ್ತವೆ.

## ಠೇವಣಿಗಳು—'ಪಾರಂಪರಿಕ' ವ್ಯಕ್ತಿಗತ ವಲಯ

ಕಳೆದ ಕೆಲವು ವರ್ಷಗಳ ಉನ್ನತ ಬಡ್ಡಿದರದ ಪರಿಸ್ಥಿತಿಯಿಂದಾಗಿ ತಮ್ಮ ಸಿಲ್ಕುಗಳ ಮೌಲ್ಯದ ಬಗ್ಗೆ ಗ್ರಾಹಕರ ಅರಿವು ಬೆಳೆದಿದೆ. ಬಡ್ಡಿ ತರುವ ಠೇವಣಿಗಳ ಕಡೆಗೆ ಮತ್ತು ದರ್ಶನಿ ಚಾಲ್ತಿ ಖಾತಾ

ವ್ಯವಹಾರದಿಂದ ದೂರದೂರಕ್ಕೆ ಸ್ಥಿತಿವಿವರಣ ಪಟ್ಟಿಗಳ ಪರಿವರ್ತನೆಯಾಗುತ್ತಿದೆ.

ಇಂಥ ಬೇಡಿಕೆಯ ವಾಸ್ತವಿಕತೆಯನ್ನು ಪರೀಕ್ಷಿಸುವ ಪ್ರಯೋಗಗಳು ನಡೆಯುತ್ತಿರುವಲ್ಲಿ ಕಡಿಮೆ ದರ ಪಡೆಯುವ ಖಾತೆದಾರರಿಗೆ ಚೆಕ್ ಸೌಲಭ್ಯವನ್ನೂ ಸಮಸ್ತ ಬಗೆಯ ಬ್ಯಾಂಕಿಂಗ್ ಸೇವೆಗಳನ್ನೂ ನೀಡುವ ಪ್ರಸಕ್ತ ತಂತ್ರವ್ಯೂಹ ಮುಂದುವರಿಯುವ ಸಂಭವವಿದೆ. ಇದಕ್ಕೆ ಬೆಂಬಲವಾಗಿ, ಹಣದ ರವಾನೆಯ ವೆಚ್ಚಗಳನ್ನು ತಗ್ಗಿಸಲು ತೀವ್ರ ಸ್ವಯಂಚಲೀಕರಣ ಪ್ರಯತ್ನಗಳೂ ನಡೆಯುತ್ತಿವೆ.

ಆದರೆ ಗಾತ್ರ ಕೂಡ ಈ ವಿಶ್ಲೇಷಣೆಯ ಒಂದು ಭಾಗವಾಗಿದೆ. ತಮ್ಮ ವ್ಯವಹಾರವನ್ನು ನಿರ್ವಹಿಸುವ ಹೊಸ ವಿಧಾನಗಳನ್ನು ಕಂಡುಕೊಳ್ಳದಿದ್ದಲ್ಲಿ, ಸದ್ಯದಲ್ಲಿ ತಮ್ಮ ವೇತನವನ್ನು ನಗದಾಗಿ ಪಡೆಯುತ್ತಿರುವವರಿಗೆ ಸೇವೆಯನ್ನು ಕೊಂಡೊಯ್ಯುವುದರ ಮೂಲಕ ಬೆಳೆವಣಿಗೆಯನ್ನು ಸಾಧಿಸುವ ಪ್ರಯತ್ನದಿಂದ ಲಾಭಪ್ರದತೆ ಕಡಿಮೆಯಾಗಬಹುದು. ವ್ಯಕ್ತಿಗತ ವಲಯದಲ್ಲಿ ಅಡ್ಡ ಸಹಾಯಧನ ಪದ್ಧತಿಯ ಆಯುಸ್ಸು ಸೀಮಿತವಾದ್ದು. ಒಳನಾಡಿನ ಮಾರುಕಟ್ಟೆಯ ಪಾರಂಪರಿಕ ವ್ಯಕ್ತಿಗತ ವಲಯದಲ್ಲಿ ಚೆಕ್ಕುಗಳನ್ನು ಬಳಸಲು ಮುಂದೆಯೂ ಬಯಸುವ ವ್ಯಕ್ತಿಗತ ಗ್ರಾಹಕನನ್ನು ಹಾಗೆಯೇ ಬಿಟ್ಟಂತಾಗಬಹುದು. ಪ್ರಸಕ್ತ ಮಾರುಕಟ್ಟೆ ಬಲಗಳು ಪರಿಣಾಮ ಬೀರಬಹುದು. ತನ್ನ ಹೆಚ್ಚಿನ ಸಿಲ್ಕುಗಳಿಗೆ ಅವನು ಬಹುಶಃ ಮೌಲ್ಯ ಪಡೆಯಬಹುದು. ಮಾಡಿದ ಕೆಲಸಕ್ಕೆ ಯಥಾರ್ಥವಾದ ದರವನ್ನು ಪಾವತಿ ಮಾಡಬಹುದು.

## ಸಾಮೂಹಿಕ ಬಳಕೆದಾರ ಮಾರುಕಟ್ಟೆ

ಇದುವರೆಗೂ ನಾನು ವಿವರಿಸಿರುವ ಬೆಳೆವಣಿಗೆಗಳು ವ್ಯಕ್ತಿಗತ ವ್ಯವಹಾರದ ಗಾತ್ರವನ್ನು ಕುರಿತದ್ದಾಗಿದೆ. ಇದನ್ನು ನಾನು ಸಾಮೂಹಿಕ ಬಳಕೆದಾರ ಮಾರುಕಟ್ಟೆ ಎಂದು ಕರೆಯುತ್ತೇನೆ. ಇದಕ್ಕೆ ಹೆಚ್ಚು ಕಡಿಮೆ ಸಂಪೂರ್ಣವಾಗಿ ವಿದ್ಯುನ್ಮಾನ ವ್ಯವಸ್ಥೆಯಿಂದ ಸೇವೆ ನೀಡಲಾಗುತ್ತದೆ. ಗ್ರಾಹಕರು ಸ್ವಯಂಚಲೀಕೃತ ಷರಾಫ್ ಯಂತ್ರಗಳನ್ನು (ಆಟೊಮೇಟೆಡ್ ಟೆಲರ್ ಮಷೀನ್ಸ್) ಸುಲಭವಾಗಿ ಒಪ್ಪಿಕೊಂಡಿರುವುದರಿಂದ ಬ್ಯಾಂಕುಗಳು ಈ ಸೇವೆಯನ್ನು ತ್ವರಿತವಾಗಿ ವಿಸ್ತರಿಸತೊಡಗಿವೆ. ಈ ವರ್ಷದ ಕೊನೆಯ ವೇಳೆಗೆ ಬ್ರಿಟನ್ನಿನಲ್ಲಿ ಸುಮಾರು ನಾಲ್ಕು ಶಾಖೆಗಳಿಗೆ ಒಂದರಂತೆ 4,300ಕ್ಕೂ ಹೆಚ್ಚು ಯಂತ್ರಗಳಿರುತ್ತವೆ. ಆ ವೇಳೆಗೆ ನನ್ನ ಬ್ಯಾಂಕಿನಲ್ಲಿಯೇ 750 ಸೇವಾ ಗಲ್ಲಾಗಳಿರುತ್ತವೆ. ಪ್ರಪಂಚದ ಬೇರಾವ ಬ್ಯಾಂಕಿನಲ್ಲಿರುವುದಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಅಹೋರಾತ್ರಿಯ ಭಿತ್ತಿದ್ವಾರ ಸ್ವಯಂ ಷರಾಫ್ ಯಂತ್ರಗಳು ಇಲ್ಲಿರುತ್ತವೆ. ಜೊತೆಗೆ ಶಾಖೆಗಳೊಳಗೆ ವ್ಯಕ್ತಿಗತ ವಹಿವಾಟುಗಳನ್ನು ಸ್ವಯಂಚಲೀಕರಿಸುವ ಇತರ ಪ್ರಯತ್ನಗಳು ನಡೆದಿವೆ. ರಾಷ್ಟ್ರವ್ಯಾಪಿ ಮಾರಾಟ ಕೇಂದ್ರ ಜಾಲದ ಬೆಳೆವಣಿಗೆಯಾಗಲಿದೆ. ಅದೂರ ಭವಿಷ್ಯದಲ್ಲೇ ಪತ್ರರಹಿತ ಬ್ಯಾಂಕಿಂಗ್ ಬಂದೀತೆಂಬುದಕ್ಕೆ ಇವೆಲ್ಲಾ ಸೂಚನೆಗಳಾಗಿವೆ.

ಈ ಬಗೆಯ ಗ್ರಾಹಕನಿಗೂ ಬ್ಯಾಂಕಿಗೂ ಯಾವ ರೀತಿಯ ಸಂಬಂಧ ಏರ್ಪಡುತ್ತದೆಂಬುದನ್ನು ವಿದ್ಯುಚ್ಛಕ್ತಿ ಮಂಡಲಿಗೂ ನಮಗೂ ಇರುವ ಸಂಬಂಧಕ್ಕೆ ಹೋಲಿಸಬಹುದು. ದೂರದ ನಿಯಂತ್ರಣದ ಮೂಲಕ ಗ್ರಾಹಕ ಬಹಳಮಟ್ಟಿಗೆ ಸೇವೆ ಪಡೆಯುತ್ತಾನೆ. ಯಾವುದೇ ಸಮಸ್ಯೆ ಇದ್ದರೆ ಅವನು ಬ್ಯಾಂಕ್ ಶಾಖೆಗೆ ಹೋಗುತ್ತಾನೆ. ವಿದ್ಯುತ್ ಬಳಕೆದಾರ ವಿದ್ಯುಚ್ಛಕ್ತಿ ಮಂಡಲಿಯ ಪ್ರದರ್ಶನ ಕೋಣೆಗೆ ಹೋಗುವಂತೆಯೇ ಇದು.

ಈ ಸೇವೆಗಳ ಉದ್ದೇಶ ನಮ್ಯವಾಗಿರಬೇಕಾಗಿದ್ದರೆ ಆಗ ಕಾರ್ಡುಗಳ ಮತ್ತು ಸೌಲಭ್ಯಗಳ ಸಮನ್ವಯ ಅಗತ್ಯವಾಗಬಹುದು. ಋಣಿಕೆ ಕಾರ್ಡು ಮತ್ತು ಉದರಿ ಕಾರ್ಡು—ಎರಡರ ಪಾತ್ರವೂ ಒಂದೇ ಎಂಬ ಕಲ್ಪನೆ ಸಾರ್ವಜನಿಕರ ಮನಸ್ಸಿನಲ್ಲಿ ಉಂಟಾಗಬಹುದು. ನ್ಯಾಯ ವ್ಯಾಪಾರದ ಕಛೇರಿಯ ಪಹರೆಗಣ್ಣಿನ ಅಡಿಯಲ್ಲಿ ಚಿಲ್ಲರೆ ವರ್ತಕರು, ಬ್ಯಾಂಕುಗಳು ಮತ್ತು ಉದರಿ ಕಾರ್ಡು ಸಂಸ್ಥೆಗಳು ವೆಚ್ಚ ಮತ್ತು ತರಗುಗಳ ಬಗ್ಗೆ ಸ್ಪರ್ಧಾತ್ಮಕ ಒಪ್ಪಂದಗಳಿಗೆ ಬರುವುದು ಅಗತ್ಯವಾಗುತ್ತದೆ.

ಈ ರೀತಿಯಾಗಿ ಸಾಮೂಹಿಕ ಮಾರುಕಟ್ಟೆಗೆ ಸೇವೆ ಸಲ್ಲಿಸುವುದರಿಂದ ಬ್ಯಾಂಕೇತರ ಹಣಕಾಸು ಸಂಸ್ಥೆಗಳಿಗೆ ಹೊಸ ಅವಕಾಶಗಳು ದೊರೆಯುತ್ತವೆ. ಗ್ರಾಹಕ ಹಣಕಾಸು ವಿಭಾಗದಲ್ಲಿ ಬ್ಯಾಂಕುಗಳು ಪ್ರಬಲ ಸ್ಪರ್ಧೆ ನಡಸಬೇಕಾಗುತ್ತದೆ; ಹಾಗೂ ನೇರ ಅಂಚೆ ರವಾನೆ ಮತ್ತು ನೇರ ಮಾರಾಟಗಾರಿಕೆ ಪ್ರವರ್ತನೆಯ ವ್ಯಾಪಕ ಬಳಕೆಗಳಂಥ ಹೊಸ ವಿಧಾನಗಳಿಂದ ಅವು ಇತರ ಲಾಭದಾಯಕ ಸೇವೆಗಳನ್ನು ನೀಡಬೇಕಾಗುತ್ತದೆ. ಮಾಹಿತಿ ತಂತ್ರಜ್ಞಾನದಿಂದ ದೊರಕುವ ಆಯ್ಕೆಗಾರಿಕೆ ಹಾಗೂ ಮಾರಾಟಗಾರಿಕೆಯ ಕೌಶಲಗಳು ಇದರಲ್ಲಿ ಪೂರ್ಣ ಪಾತ್ರ ವಹಿಸುತ್ತದೆ.

ಮನೆಯೊಡೆಯನಾದ ವ್ಯಕ್ತಿಗತ ಗ್ರಾಹಕನ ಅಗತ್ಯಕ್ಕೆ ಕೀಲಿಕೈ ಎಂದರೆ ಸಂಪೂರ್ಣ ಹಾಗೂ ಸಮಗ್ರ ಹಣಕಾಸು ಸೌಲಭ್ಯದೊಂದಿಗೆ ಸಂಬಂಧವುಳ್ಳ ಅಡವಮಾನವನ್ನು ಒದಗಿಸುವುದೇ ಆಗಿದೆ. ಈ ಹೊಸ ಸಾಪೇಕ್ಷ ಬ್ಯಾಂಕರ್-ಗ್ರಾಹಕ ಸಂಬಂಧದಿಂದ ಅವನ ವ್ಯವಹಾರಕ್ಕೆ ಹೆಚ್ಚಿನ ಠೇವಣಿ ಒದಗಿಬರುತ್ತದೆ. ಕೈಗಾರಿಕೆಗೆ ನಾವು ನೀಡುವ ಸಾಲಕ್ಕೆ ಭದ್ರ ಬುನಾದಿಯಾಗಿ ವ್ಯಕ್ತಿಗತ ಚಿಲ್ಲರೆ ವ್ಯವಹಾರಕ್ಕೆ ನಾವು ನೀಡುವ ಪ್ರಾಮುಖ್ಯವನ್ನು ಗ್ರಾಹಕ ಗುರುತಿಸುವಂತೆ ಮಾಡಬೇಕಾದರೆ ಉಳಿತಾಯ, ಸಾಲ ನೀಡಿಕೆ ಇವೆರಡಕ್ಕಾಗಿಯೂ ನಾವು ಬಲವಾಗಿ ಸ್ಪರ್ಧಿಸುತ್ತಿದ್ದೇವೆ ಎಂಬುದನ್ನು ಕಾಣುವ ಹಾಗೆ ಮಾಡುವ ಅಗತ್ಯವಿದೆ.

ನಮ್ಮದು ಮೂಲಭೂತವಾಗಿ ಬ್ಯಾಂಕರ್-ಗ್ರಾಹಕ ಸಂಬಂಧವನ್ನು ಆಧರಿಸಿದ ಜನವ್ಯವಹಾರ ಎಂಬುದನ್ನು ನಾವು ನೆನಪಿಡಬೇಕು. ನಾವು ನಡಸುತ್ತಿರುವಂಥ ಸೇವಾ ಉದ್ಯಮದಲ್ಲಿ ಇದು ಅಗತ್ಯ. ಗ್ರಾಹಕಾಗತ್ಯಗಳನ್ನು ಪೂರೈಸುವ ಹೊಸ ಹಾಗೂ ಸುಧಾರಿತ ವಿಧಾನಗಳನ್ನು ನಾವು ಕಂಡುಕೊಳ್ಳುವಾಗ ಪರಸ್ಪರ ಲಾಭಕರವಾದ ವೈಯಕ್ತಿಕ ಸಂಪರ್ಕಕ್ಕೆ ಅನಿವಾರ್ಯವಾಗಿ ಮರಳಿಬರುತ್ತೇವೆ. ನಮ್ಮ ಸೇವೆಗಳ ವಿತರಣೆಗಳ ವಿಧಾನಗಳನ್ನು ಕುರಿತು ಹೆಚ್ಚು ದಕ್ಷ ಹಾಗೂ ಮಾನಕ ವಿಧಾನಗಳನ್ನು ನಾವು ಅನ್ವೇಷಿಸಬೇಕು. ಆದಾಗ್ಯೂ ಗ್ರಾಹಕರ ಹಣಕಾಸು ವ್ಯವಹಾರದಲ್ಲಿ ಆಸಕ್ತಿ ಹೊಂದಿದವರು, ಸೇವಾಸನ್ನದ್ಧರಾದವರು ಯಾವಾಗಲೂ ಬ್ಯಾಂಕಿನಲ್ಲಿ ಇದ್ದೇ ಇರುತ್ತಾರೆಂಬ ಅರಿವನ್ನು ಗ್ರಾಹಕರಲ್ಲಿ ಮೂಡಿಸಿ, 'ಸ್ವರೂಪರಹಿತ' ಬ್ಯಾಂಕಿಂಗನ್ನು ಸಹೃದಯವಾದ್ದನ್ನಾಗಿ ಪರಿವರ್ತಿಸಬೇಕು.

★ ★ ★

# ಪ್ರಾದೇಶಿಕ ಅಸಮತೆ ಮತ್ತು ಸಂತುಲಿತ ಪ್ರಾದೇಶಿಕ ಅಭಿವೃದ್ಧಿ

**ದೇ. ನಾ. ಶ್ರೀ**

ಯಾವ ದೇಶವೇ ಆಗಲಿ ತನ್ನ ಪ್ರದೇಶಗಳನ್ನು ತೂಗಿ ಅಳೆದು ಒಂದೇ ಸಮನಾಗಿ ಬೆಳೆಯುವಂತೆ ಮಾಡಲು ಸಾಧ್ಯವಿಲ್ಲ. ಈ ಮಾತು ಅಭಿವೃದ್ಧಿ ಹೊಂದಿದ ದೇಶಗಳಿಗೆ ಅನ್ವಯಿಸುವಷ್ಟೇ ಚೆನ್ನಾಗಿ ಅಭಿವೃದ್ಧಿಶೀಲ ದೇಶಗಳಿಗೂ ಅನ್ವಯವಾಗುತ್ತದೆ. ಭಾರತದಲ್ಲಿ ರಾಜ್ಯಗಳನ್ನು ಭಾಷಾನುಗುಣವಾಗಿ ರಚಿಸಲಾಗಿದೆ, ಆರ್ಥಿಕಾಭಿವೃದ್ಧಿಗೆ ಅನುಗುಣವಾಗಿ ಅಲ್ಲ. ಅಭಿವೃದ್ಧಿಗನುಗುಣವಾಗಿ ಮಾಡಲಾದ ವಿಂಗಡಣೆ ಶಾಶ್ವತವಾದ್ದಲ್ಲ. ಏಕೆಂದರೆ ಅಭಿವೃದ್ಧಿ ಚಲನಾತ್ಮಕವಾದ್ದು ಮತ್ತು ಬೇರೆ ಬೇರೆ ಪ್ರದೇಶಗಳ ಅಭಿವೃದ್ಧಿ ಬೇರೆ ಬೇರೆ ಗತಿಗಳಲ್ಲಿ, ಬೇರೆ ಬೇರೆ ದಿಕ್ಕುಗಳಲ್ಲಿ ನಡೆಯಬಹುದು.

ಪ್ರಾದೇಶಿಕ ಅಭಿವೃದ್ಧಿ ಎಂಬ ಪರಿಕಲ್ಪನೆಯನ್ನು ತೊಡಗಿದವನು ಸ್ಟಾಲಿನ್. ಬಂಡವಾಳಶಾಹಿ ಶಕ್ತಿಗಳು ಸೋವಿಯತ್ ದೇಶದ ಯಾವ ಪ್ರದೇಶವನ್ನು ಆಕ್ರಮಿಸಿ ವಶಪಡಿಸಿಕೊಂಡರೂ ಅದು ರಾಷ್ಟ್ರದ ಆರ್ಥಿಕ ಶಕ್ತಿಯನ್ನು ಕುಂಠಿತಗೊಳಿಸಬಾರದು ಎನ್ನುವಷ್ಟು ಸಮನಾದ ಪ್ರಾದೇಶಿಕ ಪ್ರಗತಿ ಆಗಿರಬೇಕು ಎಂಬುದು ಅವನ ಆಶಯವಾಗಿತ್ತು. ಸ್ಟಾಲಿನ್ನನ ಮುಖ್ಯ ಉದ್ದೇಶ ಯುದ್ಧತಂತ್ರವನ್ನಾಗಿ ಅದನ್ನು ಬಳಸುವುದಾಗಿತ್ತು. ಇಂಗ್ಲೆಂಡಿನ ಕತೆಯೂ ಒಂದು ಸತ್ಯ ಸಂಗತಿಯನ್ನು ಹೊರಗೆಡಹುತ್ತದೆ. ಎರಡನೆಯ ಮಹಾಯುದ್ಧದಲ್ಲಿ ಇಂಗ್ಲೆಂಡಿನ ಕೈಗಾರಿಕಾ ಘಟಕಗಳನ್ನು ಜರ್ಮನಿ ಬಾಂಬ್ ದಾಳಿಯಿಂದ ದೂಳೀಪಟ ಮಾಡಿದ ನಂತರವೇ ಅಲ್ಲಿಯ ಕೈಗಾರಿಕೆಗಳು ಹಿಂದುಳಿದ ಪ್ರದೇಶಗಳತ್ತ ತಮ್ಮ ಸವಾರಿ ಬೆಳೆಸಿದ್ದು, ದೇಶ ಹಿಂದುಳಿದ ಪ್ರದೇಶಗಳ ಅಭಿವೃದ್ಧಿಯ ಅಗತ್ಯವನ್ನು ಮನಗಂಡಿದ್ದು. ಅಮೆರಿಕದ ಟೆನೆಸ್ಸಿ ಕಣಿವೆ ಪರಿಯೋಜನೆಯೂ ಹಿಂದುಳಿದ ಪ್ರದೇಶಗಳ ಅಭಿವೃದ್ಧಿಯ ದ್ಯೋತಕವಾಗಿದೆ.

### ಪ್ರದೇಶ ಎಂದರೇನು?

ಭಾರತದ ಸಂದರ್ಭದಲ್ಲಿ 'ಪ್ರದೇಶ' ಎಂದರೆ ಭಾಷೆಯ ಆಧಾರದ ಮೇಲೆ ರಚಿಸಲಾದ ಒಂದು ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶ. ಆದರೆ ಆರ್ಥಿಕಾಭಿವೃದ್ಧಿಯ ದೃಷ್ಟಿಯಿಂದ 'ಪ್ರದೇಶ' ಎಂದರೆ ಒಂದು ರಾಜ್ಯದೊಳಗಿನ, ಆರ್ಥಿಕಾಭಿವೃದ್ಧಿಯ ಮಾನದಂಡದಿಂದ ಅಳೆಯಬಹುದಾದ ಸ್ಥಳವಿಸ್ತಾರ: ರಾಜಾಸ್ಥಾನದ ಮರಳುಗಾಡು ಪ್ರದೇಶ, ಕರ್ನಾಟಕದ ಕರಾವಳಿ ಪ್ರದೇಶ, ಆಂಧ್ರದ ರಾಯಲಸೀಮೆ ಪ್ರದೇಶ ಮುಂತಾಗಿ. ಅಂದರೆ ಪ್ರದೇಶ ಎಂದರೆ ರಾಜ್ಯದೊಳಗಿನ ಆರ್ಥಿಕ ಪ್ರದೇಶ ಎನ್ನಬಹುದು.

ಎಲ್ಲ ಪ್ರದೇಶಗಳೂ ಒಂದೇ ಗತಿಯಲ್ಲಿ ಬೆಳವಣಿಗೆ ಹೊಂದಬೇಕು, ಒಂದೇ ಮಟ್ಟದ ಅಭಿವೃದ್ಧಿ ಪಡೆಯಬೇಕು ಎಂಬುದು ಸರಿಯಾದ ಆಶಯವೇ. ಆದರೂ ಆರ್ಥಿಕವಾಗಿ ಪ್ರತಿ ಪ್ರದೇಶವನ್ನೂ, ಮೊದಲ ವಾಕ್ಯದಲ್ಲಿಯೇ ಹೇಳಿದಂತೆ, ತೂಗಿ, ಅಳೆದು, ಒಂದೇ ಸಮನಾಗಿ ಅಭಿವೃದ್ಧಿಪಡಿಸುವುದು ಸಾಧ್ಯವಿಲ್ಲ. ಆದರೆ ಒಂದು ಪ್ರದೇಶದ ಸಂಪನ್ಮೂಲಗಳ ಅತ್ಯುತ್ತಮ ಬಳಕೆಯಾಗಿ ಅದರಿಂದ ಉಗಮಿಸುವ ಸೌಲಭ್ಯಗಳನ್ನು ಎಲ್ಲ ಪ್ರದೇಶಗಳೂ ಅನುಭವಿಸುವಂತಾಗಬೇಕೆಂಬುದು ಯುಕ್ತ ಆಶಯ ಎನ್ನಬಹುದು. ಸಂತುಲಿತ ಪ್ರಾದೇಶಿಕ ಅಭಿವೃದ್ಧಿಯೆಂದರೆ ಪ್ರತಿ ಪ್ರದೇಶವೂ ಸ್ವಯಂ ಪರಿಪೂರ್ಣತೆಯನ್ನು ಸಾಧಿಸುವುದೆಂದು. ಅಂತೆಯೇ ಪ್ರತಿ ಪ್ರದೇಶವೂ ಒಂದೇ ಘಟ್ಟದ ಅಭಿವೃದ್ಧಿ ಅಥವಾ ಒಂದೇ ಆರ್ಥಿಕ ಮಾದರಿ ಹೊಂದಬೇಕೆಂದೂ ಅಲ್ಲ. ಆರ್ಥಿಕವಾಗಿ ಸಾಧ್ಯವಿರುವಷ್ಟು ಮಟ್ಟಿಗೆ ಕೈಗಾರಿಕೆ ಇತ್ಯಾದಿ ಚಟುವಟಿಕೆಗಳು ಎಲ್ಲ ಪ್ರದೇಶಗಳಿಗೂ ಹಂಚಿ ಹೋಗಬೇಕು. ಆರ್ಥಿಕವಾಗಿ ಮುಂದುವರಿದ ಪ್ರದೇಶಗಳವರು ಅನುಭವಿಸುತ್ತಿರುವ ಸೌಲಭ್ಯಗಳ ಮಟ್ಟಕ್ಕೆ ಹಿಂದುಳಿದ ಪ್ರದೇಶಗಳವರು ಅನುಭವಿಸುವ ಸೌಲಭ್ಯಗಳನ್ನು ಏರಿಸಬೇಕೆಂಬುದು ಇದರ ಗುರಿ. ಇದರ ಸಾಧನೆ ಬೇಸಾಯದ ಅಭಿವೃದ್ಧಿಯಿಂದಾಗಬಹುದು; ಕೈಗಾರಿಕೆಗಳ ಅಭಿವೃದ್ಧಿಯಿಂದಾಗಬಹುದು ಅಥವಾ ವಾಣಿಜ್ಯದ ಬೆಳವಣಿಗೆಯಿಂದಾಗಬಹುದು. ನೆಲೆಸಿರುವವರಿಗೆ ಅಥವಾ ನೆಲೆಸ ಬಯಸುವವರಿಗೆ ಯಾವ ಪ್ರದೇಶವೂ ಇದು ನಿಕೃಷ್ಟವಾಗಿದೆಯೆಂದು ಎನಿಸದಂತೆ ಮಾಡುವುದು ಇದರ ಗುರಿ. ಸಂತುಲಿತ ಪ್ರಾದೇಶಿಕ ಅಭಿವೃದ್ಧಿ ಸಾಮಾಜಿಕಾರ್ಥಿಕ ಸಮಸ್ಯೆಯಾಗಿದೆ.

### ಪ್ರಾದೇಶಿಕ ಅಭಿವೃದ್ಧಿಯ ಅಗತ್ಯ

#### 1 ಶೀಘ್ರ ಆರ್ಥಿಕ ಅಭಿವೃದ್ಧಿ

ರಾಜ್ಯವನ್ನು ಪ್ರದೇಶಗಳನ್ನಾಗಿ ವಿಂಗಡಿಸಿ ಪ್ರತಿ ಪ್ರದೇಶದ ಸ್ಥಳೀಯ ಸಂಪನ್ಮೂಲಗಳನ್ನಾಧರಿಸಿ ಆಯಾ ಪ್ರದೇಶವನ್ನು ಪರಿಣಾಮಕಾರಿಯಾಗಿಯೂ ಶೀಘ್ರವಾಗಿಯೂ ಅಭಿವೃದ್ಧಿಪಡಿಸಬಹುದು. ಇದರಿಂದ ದೇಶದ ಶೀಘ್ರ ಆರ್ಥಿಕ ಅಭಿವೃದ್ಧಿ ಸಾಧ್ಯವಾಗುತ್ತದೆ.

#### 2 ಸಾಮಾಜಿಕ ಅಂತರ ನಿವಾರಣೆ

ಲಾಭೋದ್ದೇಶದ ಆರ್ಥಿಕ ಚಟುವಟಿಕೆಗಳಿಂದ ಆರ್ಥಿಕ ಅಂತರಗಳೂ ತನ್ಮೂಲಕ ಸಾಮಾಜಿಕ ಅಂತರಗಳೂ ಏರ್ಪಡುತ್ತವೆ. ಬಡವ ಬಲ್ಲಿದರ ನಡುವಣ ಅಂತರ ವಿಸ್ತರಿಸುವಂತೆಯೇ ಹಿಂದುಳಿದ-ಮುಂದುವರಿದ ಪ್ರದೇಶಗಳ ಅಂತರವೂ ಬೆಳೆಯುತ್ತದೆ. ಈ ಅಂತರ ವಿಸ್ತರಣೆಯನ್ನು ತಡೆಯಲು ಪ್ರಾದೇಶಿಕ ಅಭಿವೃದ್ಧಿ ನೆರವಾಗುತ್ತದೆ.

---

ದೇ. ನಾ. ಶ್ರೀನಿವಾಸಮೂರ್ತಿ, ಪ್ರಾಂಶುಪಾಲರು, ಕೊಂಗಾಡಿಯಪ್ಪ ಕಾಲೇಜು, ದೊಡ್ಡಬಳ್ಳಾಪುರ 561 203

**3 ಸಂಪನ್ಮೂಲಗಳ ಹಾಳತವಾದ ಬಳಕೆ**

ಪ್ರಾದೇಶಿಕ ಅಭಿವೃದ್ಧಿಯ ವಿಧಾನದಿಂದ ಪ್ರತಿ ಪ್ರದೇಶದ ಸಂಪನ್ಮೂಲಗಳನ್ನು ಹಾಳತವಾಗಿ, ಬೇಕಿರುವಷ್ಟೇ ಬಳಸಿಕೊಂಡು ಸಂಪನ್ಮೂಲಗಳ ಸಂರಕ್ಷಣೆ ಮಾಡಬಹುದು. ಪ್ರದೇಶದ ಸಂಪನ್ಮೂಲಗಳು ಸದುಪಯೋಗಗೊಂಡರೆ ಅವುಗಳ ದುರುಪಯೋಗಕ್ಕೆ ಅವಕಾಶವಿಲ್ಲ.

**4 ರಾಜಕೀಯ ಭದ್ರತೆ**

ಪ್ರಾದೇಶಿಕ ಅಭಿವೃದ್ಧಿಯಿಂದ ರಾಜಕೀಯ ಭದ್ರತೆ ಏರ್ಪಡುತ್ತದೆ. ಪ್ರಾದೇಶಿಕ ಅಸಮತೆಗಳಿಂದಾಗುವ ಅಶಾಂತಿ, ದಂಗೆ, ದೊಂಬಿಗಳ ನಿವಾರಣೆಯಾಗುತ್ತದೆ.

**5 ದೇಶದ ರಕ್ಷಣೆ**

ಪ್ರಾದೇಶಿಕ ಅಭಿವೃದ್ಧಿ ದೇಶದ ರಕ್ಷಣೆಗೆ ನೆರವಾಗುತ್ತದೆ. ಅನಭಿವೃದ್ಧ ಪ್ರದೇಶಗಳು ಆಕ್ರಮಣಕಾರರಿಗೆ ಆಯಕಟ್ಟಿನ ಪ್ರದೇಶಗಳಾಗಬಹುದು. ಅಂತೆಯೇ ಕಡೆಗಣಿಸಲ್ಪಟ್ಟ ಭಾವನೆಯುಳ್ಳ ಜನರೂ ದೇಶದ ಸಮಗ್ರತೆಗೆ ಧಕ್ಕೆ ತರಬಹುದು.

**6 ಸಾಮಾಜಿಕ ಪಿಡುಗುಗಳ ನಿವಾರಣೆ**

ಅಭಿವೃದ್ಧಿ ಕಾರ್ಯಗಳು ಒಂದೆಡೆಯಲ್ಲೇ ಕೇಂದ್ರೀಕೃತವಾದರೆ ಅನೇಕ ಸಾಮಾಜಿಕ ಪಿಡುಗುಗಳು ಉದ್ಭವಿಸುತ್ತವೆ. ನಗರ ವಸತಿ ಸಮಸ್ಯೆ, ಆರೋಗ್ಯ ನೈರ್ಮಲ್ಯಗಳ ಸಮಸ್ಯೆ, ಅತಿ ಜನದಟ್ಟಣೆಯ ಸಮಸ್ಯೆ, ಸಾರಿಗೆ ಸಮಸ್ಯೆ ಮುಂತಾದವು ತೀವ್ರವಾಗುತ್ತವೆ. ಕೊಳೆಗೇರಿಗಳು ಬೆಳೆಯುತ್ತವೆ. ಪ್ರಾದೇಶಿಕ ಅಭಿವೃದ್ಧಿಯ ಮೂಲಕ ಈ ಸಮಸ್ಯೆಗಳನ್ನು ತುಸುಮಟ್ಟಿಗಾದರೂ ನಿವಾರಿಸಬಹುದು.

**ಭಾರತದಲ್ಲಿ ಅಸಮತೆಯ ಸಮಸ್ಯೆ**

ಸರ್ಕಾರಗಳು ಅನೇಕ ಪ್ರಯತ್ನಗಳನ್ನು ಮಾಡುತ್ತಿದ್ದರೂ ಪ್ರಾದೇಶಿಕ ಅಸಮತೆಯ ನಿವಾರಣೆಯಾಗಿಲ್ಲ. ಭಾರತೀಯ ಆರ್ಥಿಕ ಮತ್ತು ವೈಜ್ಞಾನಿಕ ಸಂಶೋಧನಾ ಪ್ರತಿಷ್ಠಾನ 1960–70ರ ದಶಕದಲ್ಲಿ ಕೃಷಿ ವರಮಾನ ಅಭಿವೃದ್ಧಿ ಹೊಂದಿದ ರಾಜ್ಯಗಳಲ್ಲಿ ಅತಿ ಹೆಚ್ಚಿನ ಬೆಳವಣಿಗೆಯನ್ನು ತೋರಿಸಿತೆಂದೂ, ಅದೇ ಬೆಳವಣಿಗೆ ಅಭಿವೃದ್ಧಿ ಹೊಂದದಿರುವ ರಾಜ್ಯಗಳಲ್ಲಿ ತೀರ ನಿಧಾನಗತಿಯದಾಗಿತ್ತೆಂದೂ ವರದಿ ಮಾಡಿದೆ. ರಾಷ್ಟ್ರೀಯ ಸರಾಸರಿ ಕೃಷಿ ವರಮಾನ 1960–70ರ ದಶಕದಲ್ಲಿ ಸೇ 142.6ರಷ್ಟು ಹೆಚ್ಚಿತು. ಪಂಜಾಬಿನಲ್ಲಿ ಅತಿ ಹೆಚ್ಚಿನ ಏರಿಕೆ—224%, ಹರಿಯಾಣದಲ್ಲಿ 273.5%, ಗುಜರಾತಿನಲ್ಲಿ 203%, ರಾಜಾಸ್ಥಾನದಲ್ಲಿ 200% ಏರಿಕೆ ಕಂಡುಬಂತು. ಕರ್ನಾಟಕ, ಒರಿಸ್ಸ, ಜಮ್ಮು ಮತ್ತು ಕಾಶ್ಮೀರ ಮತ್ತು ಕೇರಳ ರಾಜ್ಯಗಳಲ್ಲಿ ಏರಿಕೆ ರಾಷ್ಟ್ರೀಯ ಸರಾಸರಿಗಿಂತ ಹೆಚ್ಚಾಗಿತ್ತು. ಆದರೆ ಇತರ ಎಲ್ಲ ರಾಜ್ಯಗಳಲ್ಲಿ ರಾಷ್ಟ್ರೀಯ ಸರಾಸರಿಗಿಂತ ಕಡಿಮೆಯಿತ್ತು (ಹಿಂದೂಸ್ಥಾನ್ ಟೈಮ್ಸ್).

ಎಕನಾಮಿಕ್ ಟೈಮ್ಸ್ ಮತ್ತೊಂದು ಅಂದಾಜು ಮಾಡಿದೆ. ಅದು ರಾಜ್ಯಗಳಲ್ಲಿ ಬಡತನ ಹಂಚಿಕೆಯಾಗಿರುವ ಬಗ್ಗೆ: 1978ರಲ್ಲಿ ಒಂಬತ್ತು ರಾಜ್ಯಗಳಲ್ಲಿ ರಾಷ್ಟ್ರೀಯ ಸರಾಸರಿಯಾದ 48.73%ಗಿಂತ ಹೆಚ್ಚಿನ ಜನರು ಬಡತನದ ರೇಖೆಯಿಂದ ಕೆಳಗಿದ್ದರು. ಈ ರಾಜ್ಯಗಳೆಂದರೆ ಒರಿಸ್ಸ, ತ್ರಿಪುರ, ಮಧ್ಯಪ್ರದೇಶ, ಬಿಹಾರ, ಪಶ್ಚಿಮ ಬಂಗಾಳ, ತಮಿಳುನಾಡು, ಅಸ್ಸಾಂ, ಉತ್ತರ ಪ್ರದೇಶ ಮತ್ತು ಕರ್ನಾಟಕ. ಅತಿ ಶ್ರೀಮಂತ ದೇಶವಾದ ಪಂಜಾಬಿನ ಸ್ಥಳೀಯ ತಲಾ ಉತ್ಪನ್ನ ರೂ 2,278 ಆಗಿದ್ದು ಆ ರಾಜ್ಯದಲ್ಲಿ ಅತಿ ಕಡಿಮೆ ಪ್ರತಿಶತ (15.13%) ಜನಸಂಖ್ಯೆ ಬಡತನದ ರೇಖೆಯ ಕೆಳಗಿತ್ತು. ಇದರ ಅನಂತರ ಹರಿಯಾಣ (24.84%) ಸ್ಥಾನ ಪಡೆಯಿತು.

**ಅಸಮತೆಯ ಆಧಾರಗಳು**

ಪ್ರೊ. ರಾಜ್‌ಕೃಷ್ಣ ಅಂತರರಾಜ್ಯ ಅಸಮತೆಗೆ ಈ ಕೆಳಗಿನ ಅಂಶಗಳನ್ನು ಆಧಾರವಾಗಿಟ್ಟುಕೊಳ್ಳಬಹುದೆಂದು ಸಲಹೆ ನೀಡುತ್ತಾರೆ:

1 ಆದಾಯ ಸೂಚಿ, ಬಡತನ ಸೂಚಿ ಮತ್ತು ನಿರುದ್ಯೋಗ
2 ಬೇಸಾಯದ ಸೂಚಿಗಳು
3 ಕೈಗಾರಿಕಾ ಸೂಚಿಗಳು
4 ಮೂಲಭೂತ ಬೆಳವಣಿಗೆಯ ಸೂಚಿ
5 ಸಾಮಾಜಿಕ ಸೇವೆಗಳ ಸೂಚಿಗಳು
6 ಹಣಕಾಸಿನ ಹಂಚಿಕೆಯ ಸೂಚಿ.

ಭಾರತದಲ್ಲಿ ಸೇ. 72 ಬಡಜನರು ಏಳು ರಾಜ್ಯಗಳಲ್ಲಿ ತುಂಬಿಕೊಂಡಿದ್ದಾರೆ: ಉತ್ತರ ಪ್ರದೇಶ, ಬಿಹಾರ, ಪಶ್ಚಿಮ ಬಂಗಾಳ, ಮಧ್ಯಪ್ರದೇಶ, ಮಹಾರಾಷ್ಟ್ರ, ತಮಿಳು ನಾಡು ಮತ್ತು ಆಂಧ್ರ ಪ್ರದೇಶ. ಈ ರಾಜ್ಯಗಳಲ್ಲಿರುವ ನಿರುದ್ಯೋಗಿಗಳ ಸಂಖ್ಯೆ ಒಟ್ಟು ನಿರುದ್ಯೋಗಿಗಳ ಸಂಖ್ಯೆಯ ಕ್ಕಿರಷ್ಟಿದೆ. ಸಾಪೇಕ್ಷವಾಗಿ ಹೆಚ್ಚಿನ ತಲಾ ಆದಾಯವಿರುವ ರಾಜ್ಯಗಳಲ್ಲಿ ಕಡಿಮೆ ಬಡತನದ ಅನುಪಾತವಿದೆ. ಪಂಜಾಬಿನಲ್ಲಿ ತಲಾ ವರಮಾನ ಬಿಹಾರದಲ್ಲಿರುವುದರ 2½ಯಷ್ಟಿದೆ. ಬಿಹಾರದಲ್ಲಿ ಬಡತನದ ಅನುಪಾತ (55.5%) ಪಂಜಾಬಿನ ಬಡತನದ ಅನುಪಾತದ (22%) 2½ಯಷ್ಟಿದೆ. 1950ರ ದಶಕದಲ್ಲಿ ಬಡತನದ ಅಂತರರಾಜ್ಯ ಅಂತರಗಳು ಕಡಿಮೆಯಾಗಿದ್ದುವು. ಆದರೆ 1960ರ ಮತ್ತು 1970ರ ದಶಕಗಳಲ್ಲಿ ಈ ಅಂತರಗಳು ಹೆಚ್ಚುತ್ತಾ ಹೋದುವು.

ಕಳೆದ ಮೂರು ದಶಕಗಳ ಪ್ರಯತ್ನಗಳಿಂದಲೂ ರಾಜ್ಯದೊಳಗಿನ ಪ್ರದೇಶಗಳ ಅಂತರಗಳನ್ನೂ ಅಂತರರಾಜ್ಯ ಅಸಮತೆಯನ್ನೂ ನಿವಾರಿಸಲಾಗಿಲ್ಲ. ಅಷ್ಟೇ ಅಲ್ಲ, ಅಸಮತೆಗಳು ಬೆಳೆಯುತ್ತಲೇ ಇವೆ. ರಾಜ್ಯಗಳನ್ನು 'ಭದ್ರಲೋಕ'ಗಳು ಮತ್ತು 'ಶೂದ್ರಲೋಕ'ಗಳು ಎಂದು ವಿಂಗಡಿಸುತ್ತಿರುವುದು ಕಂಡುಬರುತ್ತಿದೆ. ವಿಶ್ವರಾಷ್ಟ್ರ ಸಂಸ್ಥೆಯ ಪರಿಭಾಷೆಯಲ್ಲಿ ಹೇಳುವುದಾದರೆ ದೇಶದಲ್ಲಿ ಗಂಭೀರವಾದ ಉತ್ತರ-ದಕ್ಷಿಣ ಸಮಸ್ಯೆ ಏರ್ಪಡುತ್ತಿದೆ. ಇದಕ್ಕೆ ಕೇಂದ್ರದ ಪಿತೂರಿಯೂ ಕಾರಣವಾಗಿದೆ

**ಕೆಲವು ಸಲಹೆಗಳು**

ಪ್ರಾದೇಶಿಕ ಅಸಮತೆಯನ್ನು ನಿವಾರಿಸಲು ಈ ಕೆಳಗೆ ಕೆಲವು ಸಲಹೆಗಳನ್ನು ನೀಡಲಾಗಿದೆ:

1 ಹಿಂದುಳಿದ ಪ್ರದೇಶಗಳನ್ನು ಗುರುತಿಸಿ, ಘೋಷಿಸಬೇಕು.
2 ಕೇಂದ್ರ ರಾಜ್ಯಗಳಿಗೆ ಹಿಂದುಳಿದ ಪ್ರದೇಶಗಳನ್ನು ಅಭಿವೃದ್ಧಿಪಡಿಸಲು ಹಣ ಒದಗಿಸಬೇಕು.
3 ಪ್ರತಿ ಪ್ರದೇಶಕ್ಕೂ ಪ್ರತ್ಯೇಕ ಅಭಿವೃದ್ಧಿ ಪರಿಯೋಜನೆ ತಯಾರಿಸಬೇಕು.
4 ಹಿಂದುಳಿದ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನಾರಂಭಿಸಬೇಕು.
5 ಗೃಹ ಮತ್ತು ಗ್ರಾಮೀಣ ಕೈಗಾರಿಕೆಗಳನ್ನು ಬೆಳೆಸಬೇಕು.
6 ನಗರ ಪ್ರದೇಶಗಳ ಸುತ್ತಣ ಸಣ್ಣ ಪಟ್ಟಣಗಳನ್ನು ಅಭಿವೃದ್ಧಿಪಡಿಸಬೇಕು.

(ಇದರಲ್ಲಿ ಬ್ಯಾಂಕಿಂಗ್ ವ್ಯವಸ್ಥೆಯ ಪಾತ್ರ ಏನೆಂಬುದನ್ನು ಕುರಿತು ಚಿಂತಿಸಬೇಕು—ಸಂ.)



# ಗ್ರಾಮಾಭಿವೃದ್ಧಿಯಲ್ಲಿ ವಾಣಿಜ್ಯ ಬ್ಯಾಂಕುಗಳ ಪಾತ್ರ ವ್ಯರ್ಥ ಪುನರಾವರ್ತನೆಯೆ?

ಕೆ. ಎಂ. ಎಸ್. ಭಟ್

ಗ್ರಾಮಾಭಿವೃದ್ಧಿಗಾಗಿ ವಾಣಿಜ್ಯ ಬ್ಯಾಂಕುಗಳು ನೇರವಾಗಿ ಆರ್ಥಿಕ ಸಹಾಯ ನೀಡುವುದನ್ನು ಪ್ರಾರಂಭಿಸಿ ಸುಮಾರು 15 ವರ್ಷಗಳು ಕಳೆದುವು. ಈ 15 ವರ್ಷಗಳಲ್ಲಿ ವಾಣಿಜ್ಯ ಬ್ಯಾಂಕುಗಳು ಗ್ರಾಮಾಭಿವೃದ್ಧಿಯ ದೃಷ್ಟಿಯಿಂದ ಸಾಧಿಸಿರುವುದೇನು? ಇವುಗಳ ಸಾಧನೆ ಗ್ರಾಮಾಭಿವೃದ್ಧಿ ಕಾರ್ಯಗಳಲ್ಲಿ ತೊಡಗಿರುವ ಇತರ ಸಂಘ-ಸಂಸ್ಥೆಗಳ ಅನುಕರಣೆಯಂತಾಗಿದೆಯೆ? ಕೇವಲ ಪುನರಾವರ್ತನೆಯಾಗುತ್ತಿದೆಯೆ ಅಥವಾ ಏನಾದರೂ ಸ್ವಂತಿಕೆ ಇದೆಯೆ? ಎಂಬ ಪ್ರಶ್ನೆಗಳನ್ನು ಮುಖ್ಯವಾಗಿ ವಿಶ್ಲೇಷಿಸಬೇಕಾಗಿದೆ.

ಗ್ರಾಮಾಭಿವೃದ್ಧಿಯಲ್ಲಿ ವಾಣಿಜ್ಯ ಬ್ಯಾಂಕುಗಳ ಪಾತ್ರ, ಕಾರ್ಯಕ್ರಮ ಏನು, ಏನಿರಬೇಕು ಎಂಬುದನ್ನು ತಿಳಿಯುವುದು ಅಗತ್ಯ.

## ಅಭಿವೃದ್ಧಿಯ ಸ್ವರೂಪ

ವಾಣಿಜ್ಯ ಬ್ಯಾಂಕುಗಳ ಸಾಧನೆ ಏನು ಎಂದು ತಿಳಿಯಬೇಕಾದರೆ ಗ್ರಾಮಾಭಿವೃದ್ಧಿ ಎಂಬುದರ ಪೂರ್ಣ ಅರ್ಥ ತಿಳಿಯಬೇಕಾಗುತ್ತದೆ; ಮತ್ತು ಎಷ್ಟರ ಮಟ್ಟಿಗೆ ಒಂದು ವಾಣಿಜ್ಯ ಬ್ಯಾಂಕು ತನ್ನ ಆಡಳಿತ ವೈಖರಿ, ರಚನೆ, ಕ್ರಿಯೆಯ ಮೂಲರೂಪವನ್ನು ಬದಲಾಯಿಸದೆ ಅಂತಹ ಕಾರ್ಯನಿರ್ವಹಣೆಯಲ್ಲಿ ತೊಡಗುವುದು ಸಾಧ್ಯಎಂಬುದನ್ನು ಅರಿಯಬೇಕು. ಸೂಕ್ಷ್ಮವಾಗಿ ಒಂದು ಗ್ರಾಮದ ಆರ್ಥಿಕ ಮತ್ತು ಸಾಮಾಜಿಕ ಬೆಳವಣಿಗೆಗೆ ಬೇಕಾದ ಎಲ್ಲ ಉದ್ದೇಶಗಳಿಗೆ ಆರ್ಥಿಕ ಸಹಾಯ, ತಾಂತ್ರಿಕ ಸಲಹೆ, ಸಮೂಹ ನಿರ್ವಹಣೆಯ ಸಾಮರ್ಥ್ಯವನ್ನು ಹೆಚ್ಚಿಸಲು ಸಲಹೆ ಮತ್ತು ಮಾರುಕಟ್ಟೆಯ ಅನುಕೂಲಗಳನ್ನು ಒದಗಿಸಿದಾಗ ಮಾತ್ರ ಗ್ರಾಮಾಭಿವೃದ್ಧಿಯ ಕಾರ್ಯ ತನ್ನಿಂದ ತಾನೆ ಸಾಗುವುದು ಸಾಧ್ಯವಾಗುತ್ತದೆ. ಹಾಗೆಯೇ ಯಾವುದೇ ಗ್ರಾಮಾಭಿವೃದ್ಧಿಯ ಕಾರ್ಯದಲ್ಲಿ ತೊಡಗುವ ಮುನ್ನ, ಆ ಗ್ರಾಮದಲ್ಲಿ ಸರ್ಕಾರ ಮಾತ್ರ ಒದಗಿಸಬಹುದಾದ ಕೆಲವು ವ್ಯವಸ್ಥೆಗಳು—ಮುಖ್ಯವಾಗಿ ಸಾರಿಗೆ-ಸಂಪರ್ಕ ಮತ್ತು ವಿದ್ಯುಚ್ಛಕ್ತಿ—ಸಾಕಷ್ಟು ಪ್ರಮಾಣದಲ್ಲಿ ಇರಬೇಕಾಗುತ್ತದೆ. ಗ್ರಾಮಾಭಿವೃದ್ಧಿಯ ಒಂದು ಮುಖ್ಯ ಅಂಗ ಕೃಷಿ. ಹಳ್ಳಿಯ ಹೆಚ್ಚು ಜನರು ನೇರವಾಗಿ ಕೃಷಿ ಅಥವಾ ಕೃಷಿಗೆ ಸಂಬಂಧಿಸಿದ ಉದ್ಯೋಗಗಳಲ್ಲಿ ತೊಡಗಿರುತ್ತಾರೆ. ಆದ್ದರಿಂದ ಗ್ರಾಮಾಭಿವೃದ್ಧಿ ಎಂದರೆ ನೂರಕ್ಕೆ 90 ಭಾಗ ಕೃಷಿರಂಗ ಮತ್ತು ಅದಕ್ಕೆ ಸಂಬಂಧಿಸಿದ ಇತರ ವಿಭಾಗಗಳಾದ ಹೈನುಗಾರಿಕೆ, ಕೋಳಿ ಕುರಿ ಸಾಕಣೆಯ ಅಭಿವೃದ್ಧಿ. ನಮ್ಮ ಹಳ್ಳಿಯ ಜನರಲ್ಲಿ ವಿದ್ಯಾಭ್ಯಾಸ ಇರುವವರ ಸಂಖ್ಯೆ ಕಡಿಮೆಯಿರುವುದರಿಂದಲೂ ಅವರ ಈಗಿನ ವರಮಾನ ತಮ್ಮ ಜೀವನನಿರ್ವಹಣೆಗೆ ಬೇಕಾಗುವುದಕ್ಕಿಂತ ಕಡಿಮೆಯಿರುವುದರಿಂದಲೂ ಅವರಿಗೆ ಕೃಷಿರಂಗದ ಅಭಿವೃದ್ಧಿಗೆ ಆರ್ಥಿಕ ಸಹಾಯ ಒದಗಿಸುವುದರೊಂದಿಗೆ, ಅಭಿವೃದ್ಧಿಯ ಇತರ ಸಲಹೆ-ಸಹಾಯಗಳನ್ನು—ಅಂದರೆ ತಾಂತ್ರಿಕ ಸಲಹೆ, ಮಾರುಕಟ್ಟೆಯ ವ್ಯವಸ್ಥೆ ಇತ್ಯಾದಿಗಳನ್ನು—ಒದಗಿಸುವುದು ಅಗತ್ಯ. ಇತ್ತೀಚಿನ ವರ್ಷಗಳಲ್ಲಿ ಗ್ರಾಮಾಭಿವೃದ್ಧಿಯ ಪ್ರಯತ್ನದಲ್ಲಿ ಕೂಡಿಸಿಕೊಳ್ಳಬೇಕಾದ ಇನ್ನೊಂದು ಅಂಶವೆಂದರೆ ಹಳ್ಳಿಗರ ಅದರಲ್ಲೂ ಮುಖ್ಯವಾಗಿ 'ಯುವಜನ' ನಿರುದ್ಯೋಗ ಪರಿಹಾರಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳು, ಒಟ್ಟಿನಲ್ಲಿ ನಿರುದ್ಯೋಗ ನಿವಾರಣೆ, ಗ್ರಾಮಾಭಿವೃದ್ಧಿ ಕಾರ್ಯದ ಒಂದು ಅಂಶವಾಗಿರಬೇಕು. ಕೃಷಿರಂಗದ ಅಭಿವೃದ್ಧಿಗೆ ಯಾವುದೇ ಗ್ರಾಮದಲ್ಲಿ ಇರುವ ಕೃಷಿಯೋಗ್ಯ ಭೂಮಿ, ನೀರಾವರಿ ವ್ಯವಸ್ಥೆ ಇವುಗಳಿಗೆ ಮಿತಿಯಿರುವುದರಿಂದ ಮತ್ತು ಹೈನುಗಾರಿಕೆ ಇತ್ಯಾದಿ ಕಸಬುಗಳ ವ್ಯವಸ್ಥೆಯನ್ನು ಅದು ಅವಲಂಬಿಸಿರುವುದರಿಂದ ಗ್ರಾಮದ ಜನರಿಗೆ ಪೂರ್ಣ ಉದ್ಯೋಗ ದೊರಕಿಸಲು ಕೃಷಿರಂಗವನ್ನು ಅಭಿವೃದ್ಧಿಪಡಿಸುವುದಲ್ಲದೆ ಆ ಪ್ರದೇಶದ ಕೃಷಿ ಉತ್ಪನ್ನಗಳನ್ನು ಕಚ್ಚಾ ಸಾಮಾಗ್ರಿಯಾಗಿ ಉಳ್ಳ ಕೈಗಾರಿಕೆಗಳನ್ನು, ಇತರ ಕಸಬುಗಳನ್ನು ಅಥವಾ ಸ್ವೋದ್ಯೋಗ ಯೋಜನೆಗಳನ್ನು ಹಾಕುವುದು ಅನಿವಾರ್ಯವಾಗುತ್ತದೆ. ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣಕ್ಕೆ ಮೊದಲು ಹಿಂದಿನ ಪ್ಯಾರಾಗಳಲ್ಲಿ ವಿವರಿಸಿದ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಹಲವಾರು ಸಂಸ್ಥೆಗಳಿದ್ದುವು. ಉದಾಹರಣೆಗೆ 1 ಅಲ್ಪಾವಧಿ ಆರ್ಥಿಕ ಸಹಾಯಕ್ಕೆ ಸಹಕಾರಿ ಸಂಘಗಳು ಮತ್ತು ಬ್ಯಾಂಕುಗಳು, 2 ದೀರ್ಘಾವಧಿ ಆರ್ಥಿಕ ಸಹಾಯಕ್ಕೆ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು, 3 ಗ್ರಾಮಾಂತರ ಔದ್ಯೋಗೀಕರಣಕ್ಕೆ ಮತ್ತು ಕೃಷಿ ಉತ್ಪನ್ನಗಳನ್ನು ಕಚ್ಚಾಸಾಮಗ್ರಿಯಾಗಿ ಬಳಸುವ ಕೈಗಾರಿಕೆಗಳ ಸ್ಥಾಪನೆಗಾಗಿ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ಇತರ ಜೀವನಾವಶ್ಯಕ ಕೃಷಿ ಸಲಕರಣೆಗಳನ್ನು ಒದಗಿಸುವುದಕ್ಕಾಗಿ ಹಾಗೂ ಕೃಷಿ ಉತ್ಪನ್ನಗಳ ಮಾರಾಟ ವ್ಯವಸ್ಥೆಗಾಗಿ 'ಸೇವಾ ಸಹಕಾರ ಸಂಘಗಳು' ಇದ್ದುವು. 1969ರಲ್ಲಿ ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣದ ಒಂದು ಪ್ರಮುಖ ಉದ್ದೇಶವೆಂದರೆ ಕೃಷಿ ಮತ್ತು ಇತರ ಗ್ರಾಮೀಣ ಆದ್ಯತಾ ರಂಗಗಳಿಗೆ ಆರ್ಥಿಕ ಸಹಾಯ ಒದಗಿಸುವುದಾದರೂ, ಆರ್ಥಿಕ ಸಹಾಯದ ಜೊತೆಯಲ್ಲೆ ಬರಬೇಕಾದ ಸಹಾಯ, ತಾಂತ್ರಿಕ ಸಲಹೆ ಇತ್ಯಾದಿಗಳನ್ನು ಒದಗಿಸುವುದು ಸಾಧ್ಯವಾಗಲಿಲ್ಲ.

ಈ ದಿಸೆಯಲ್ಲಿ ಕೆಲವು ಬ್ಯಾಂಕುಗಳು ತೆಗೆದುಕೊಂಡ ಆಸಕ್ತಿ ಮತ್ತು ನವೋನ್ಮೇಷಶಾಲಿ ಪ್ರಯೋಗಗಳ ಫಲವಾಗಿ ಹೊಸ ಮಾದರಿಯ ರೈತ ಸೇವಾ ಸಹಕಾರ ಸಂಘ ಮುಂತಾದ ಸಂಸ್ಥೆಗಳನ್ನು

---

ಕೆ.ಎಂ.ಎಸ್. ಭಟ್, ವ್ಯವಸ್ಥಾಪಕರು (ಕೃಷಿ ವಿಭಾಗ) ಭಾರತೀಯ ಸ್ಟೇಟ್ ಬ್ಯಾಂಕ್, ಶಿವಮೊಗ್ಗ 577 200

ನಿರ್ಮಿಸಿ ಗ್ರಾಮಾಭಿವೃದ್ಧಿಗೆ ಬೇಕಾದ ಎಲ್ಲಾ ಸೌಕರ್ಯಗಳನ್ನು ಏಕ ಕಾಲದಲ್ಲಿ ಮತ್ತು ಒಂದೇ ಸ್ಥಳದಲ್ಲಿ ಒದಗಿಸುವ ಪ್ರಯತ್ನಗಳು ನಡೆದುವು. ಆದರೆ ಪ್ರಯತ್ನಗಳ ಯಶಸ್ಸು ವರ್ಷಗಳುರುಳಿದಂತೆ ಕಡಿಮೆಯಾಯಿತು ; ಮತ್ತು ಹಲವು ಕಡೆಗಳಲ್ಲಿ ಸಹಕಾರ ರಂಗದ ಇತರ ಸಂಸ್ಥೆಗಳು ಯಾವ ಬಾಧೆಯಿಂದ ನರಳುತ್ತಿದ್ದುವೊ ಅದು ಈ ಹೊಸ ರೂಪದ ಸಂಸ್ಥೆಗಳಿಗೂ ಹಬ್ಬಿತು; ಪರಿಣಾಮವಾಗಿ ಇವುಗಳ ಕಾರ್ಯ ಕುಂಠಿತಗೊಂಡಿತು. ಬ್ಯಾಂಕುಗಳ ರಾಷ್ಟ್ರೀಕರಣದ ಅನಂತರ ವರ್ಷಗಳು ಕಳೆದಂತೆ, ಅದರಲ್ಲೂ 6ನೆಯ ಪಂಚವಾರ್ಷಿಕ ಯೋಜನೆಯ ಕಾಲದಲ್ಲಿ ಭಾರತೀಯ ರಿಸರ್ವ್ ಬ್ಯಾಂಕಿನ ಆದೇಶದಂತೆ ಬ್ಯಾಂಕುಗಳು ಆದ್ಯತಾರಂಗಕ್ಕೆ, ಅದರಲ್ಲೂ ಮುಖ್ಯವಾಗಿ ಕೃಷಿರಂಗಕ್ಕೆ, ಗ್ರಾಮಾಭಿವೃದ್ಧಿಗೆ ತೊಡಗಿಸಬೇಕಾದ ಆರ್ಥಿಕ ಸಹಾಯ ಹೆಚ್ಚುತ್ತಲೇ ಹೋಯಿತು. ಇತ್ತೀಚಿಗಿನ ಆದೇಶದಂತೆ 1985ರ ಮಾರ್ಚ್ 31ರಲ್ಲಿ ಪ್ರತಿ ಬ್ಯಾಂಕು ಕೃಷಿರಂಗಕ್ಕೆ ಒದಗಿಸುವ ಸಾಲವನ್ನು ತಾನು ನೀಡಿರುವ ಒಟ್ಟು ಸಾಲದ ಸೇಕಡ 16ಕ್ಕೆ ಏರಿಸಬೇಕು. ರಾಷ್ಟ್ರೀಕರಣದ ಸಮಯದಲ್ಲಿ ಕೃಷಿರಂಗಕ್ಕೆ ಬ್ಯಾಂಕುಗಳು ನೀಡಿದ್ದ ಸಾಲ ರೂ. 162 ಕೋಟಿಯಾಗಿತ್ತು. 1981ರ ಡಿಸೆಂಬರಿನಲ್ಲಿ ಇದು ರೂ. 4,522 ಕೋಟಿಗೆ ಏರಿತು. ಅಂದರೆ ಬ್ಯಾಂಕುಗಳು 'ಕೃಷಿರಂಗ' ಮತ್ತು ಗ್ರಾಮಾಭಿವೃದ್ಧಿಯ ಕಾರ್ಯದಲ್ಲಿ ಇತರ ಸಂಸ್ಥೆಗಳು ಎದುರಿಸಿದ್ದ ಎಲ್ಲ ಅಡಚಣೆಗಳನ್ನೂ ಎದುರಿಸಿದ್ದರೂ ತಾವು ಹೂಡಿದ ಬಂಡವಾಳದ ಪ್ರಮಾಣ ಮಾತ್ರ ಏಕಪ್ರಕಾರವಾಗಿ ಹೆಚ್ಚುತ್ತಲೇ ಹೋಯಿತು. ಒಟ್ಟಿನಲ್ಲಿ ಬ್ಯಾಂಕುಗಳು ಈ ದಿಸೆಯಲ್ಲಿ ಹೆಚ್ಚು ಎತ್ತರದ ಆರ್ಥಿಕ ಗುರಿಯ ಮಟ್ಟವನ್ನು ತಲುಪುವುದರಲ್ಲಿ ಪ್ರಯತ್ನ ಮುಂದುವರಿಸಿದುವು. 1980ರ ದಶಕದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮತ್ತು ಭಾರತೀಯ ರಿಸರ್ವ್ ಬ್ಯಾಂಕ್ ತೆಗೆದುಕೊಂಡ ಈ ಕೆಳಗೆ ವಿವರಿಸಿರುವ ಕೆಲವು ಪ್ರಮುಖ ನೀತಿಸಂಬಂಧದ ತೀರ್ಮಾನಗಳು ಕೃಷಿ ಮತ್ತು ಗ್ರಾಮಾಭಿವೃದ್ಧಿ ರಂಗಗಳಲ್ಲಿ ಬ್ಯಾಂಕುಗಳು ನಡಸುವ ಚಟುವಟಿಕೆಗಳ ಮೇಲೆ ನೇರ ಉಗ್ರ ಪ್ರತಿಕೂಲ ಪರಿಣಾಮ ಬೀರುವಂತಾಯಿತು.

**ಪರಿಣಾಮಗಳು**

1 ಒಂದು ಪ್ರದೇಶದಲ್ಲಿ ಕೃಷಿರಂಗಕ್ಕೆ, ಗ್ರಾಮಾಭಿವೃದ್ಧಿಗೆ ಸಾಲ ಕೊಡುವ ಬ್ಯಾಂಕುಗಳು ಮತ್ತು ಆ ಬ್ಯಾಂಕುಗಳ ಶಾಖೆಗಳು ತಮ್ಮ ಕೃಷಿಸಾಲವನ್ನು ತಾವು ದತ್ತು ತೆಗೆದುಕೊಂಡ ಗ್ರಾಮಗಳಿಗೆ ಮಾತ್ರ ಮೀಸಲಿಡುತ್ತಿದ್ದುವು. ಅಂದರೆ ಯಾವುದೇ ಗ್ರಾಮ ಅಥವಾ ಒಂದು ನಿರ್ದಿಷ್ಟ ವಲಯ ಒಂದು ಬ್ಯಾಂಕಿನ ಶಾಖೆಗೆ ದತ್ತು ಆಗಿದ್ದಲ್ಲಿ, ಆ ಗ್ರಾಮದ ಒಟ್ಟಾರೆ ಸಾಲದ ಆವಶ್ಯಕತೆಗಳನ್ನು (ಯಾವುದೇ ಉದ್ದೇಶಕ್ಕೆ) ಪೂರೈಸುವುದು ಆ ಬ್ಯಾಂಕಿನ ಜವಾಬ್ದಾರಿಯಾಗಿತ್ತು. ಯಾವುದೇ ಬ್ಯಾಂಕು ಇನ್ನೊಂದು ಬ್ಯಾಂಕು ದತ್ತು ತೆಗೆದುಕೊಂಡ ಗ್ರಾಮಕ್ಕೆ ತನ್ನ ಕಾರ್ಯ ಪರಿಧಿಯನ್ನು ವಿಸ್ತರಿಸಬೇಕಾದಲ್ಲಿ ಆ ಬ್ಯಾಂಕಿನ ಒಪ್ಪಿಗೆ ಪಡೆಯುವುದು ರೂಢಿಯಾಗಿತ್ತು. ಇದರಿಂದಾಗಿ ದತ್ತು ಗ್ರಾಮದಲ್ಲಿ ಸಾಲ ಪಡೆಯುವವರ ಮೇಲೆ, ಗ್ರಾಮವನ್ನು ದತ್ತು ಪಡೆದ ಬ್ಯಾಂಕಿನ ಮೇಲೆ ಅನೌಪಚಾರಿಕವಾಗಿ, ಪರಸ್ಪರ ತಿಳಿಯದಂತೆಯೆ ಸಾಲದ ಬಗ್ಗೆ ಸ್ವಯಂವಿಧಿತ ಸಂಯಮವನ್ನು ಹೇರಿದಂತಾಗಿತ್ತು. ಆದರೆ 1980ರಲ್ಲಿ ಒಬ್ಬ ಕೃಷಿಕನಿಗೆ ತಾನು ಯಾವ ಬ್ಯಾಂಕಿನೊಂದಿಗೆ ವ್ಯವಹರಿಸಬೇಕೆಂಬ ಸ್ವಾತಂತ್ರ್ಯ ಇರಬೇಕು ಮತ್ತು ಒಂದು ಗ್ರಾಮ ಯಾವುದೇ ಬ್ಯಾಂಕಿಗೆ ದತ್ತು ಎಂದ ಮಾತ್ರಕ್ಕೆ ಇತರ ಬ್ಯಾಂಕುಗಳ ಕಾರ್ಯವ್ಯಾಪ್ತಿ ದತ್ತು ಗ್ರಾಮಕ್ಕೆ ಹರಿಯದಂತೆ ತಡೆಯುವುದು ತಾಂತ್ರಿಕವಾಗಿ ಸರಿಯಲ್ಲ ಎಂದು ಭಾರತೀಯ ರಿಸರ್ವ್ ಬ್ಯಾಂಕು ಹೇಳಿತು. ಪರಿಣಾಮವಾಗಿ ಇಂದು ಒಂದೇ ಬ್ಯಾಂಕಿನ ಎರಡು ಅಥವಾ ಹೆಚ್ಚು ಶಾಖೆಗಳು ಮತ್ತು ಬೇರೆ ಬೇರೆ ಬ್ಯಾಂಕುಗಳ ಹಲವು ಶಾಖೆಗಳು ಒಂದೇ ಗ್ರಾಮಕ್ಕೆ ಮುಂಗಡ ನೀಡುವುದು ಸಾಧ್ಯವಾಗಿದೆ. ಬ್ಯಾಂಕು ಮತ್ತು ಗ್ರಾಮಸ್ಥರ ಮೇಲಿನ ಸ್ವಯಂವಿಧಿತ ಸಂಯಮ ಮಾಯವಾಗಿದೆ. ತಮಗೆ ಕೊಟ್ಟಿರುವ ಗುರಿ ತಲುಪುವ ಅವಸರದಲ್ಲಿ ಬ್ಯಾಂಕುಗಳೊಳಗಿನ ಪ್ರತಿಸ್ಪರ್ಧೆ ಮಾರಕವಾಗಿದೆ. ಯಾವುದೇ ಬ್ಯಾಂಕು ಅಥವಾ ಶಾಖೆ ವಲಯ ಅಭಿವೃದ್ಧಿ ನೀತಿಯನ್ನು ಮುಂದುವರಿಸುವುದು ಅಸಾಧ್ಯವಾಗಿದೆ ; ಮಾತ್ರವಲ್ಲದೆ ಇಂದಿನ ಪರಿಸ್ಥಿತಿ ಸಮಯಸಾಧಕರಿಗೆ, ಮಧ್ಯವರ್ತಿ ಜನರಿಗೆ, ಶಿಸ್ತು ಇಲ್ಲದ ಸಾಲಗಾರರಿಗೆ, ರಾಜಕೀಯ ಪುಢಾರಿಗಳಿಗೆ ತಮ್ಮ ವ್ಯವಹಾರವನ್ನು ಸ್ವೇಚ್ಛೆಯಾಗಿ ನಡೆಸಲು ಅನುಕೂಲವಾದ ವಾತಾವರಣವನ್ನು ಕಲ್ಪಿಸಿದೆ.

2 ಹಲವಾರು ವರ್ಷಗಳಿಂದ ಕಟ ಬಾಕಿದಾರನಾಗಿದ್ದು, ತೆಗೆದುಕೊಂಡ ಸಾಲಕ್ಕೆ ಬಡ್ಡಿ ಕೂಡ ತೆರದೆ, ಸಹಕಾರೀ ಬ್ಯಾಂಕುಗಳ ಸಾಲಗಾರರಿಗೆ ನಿರ್ದಿಷ್ಟ ಸಮಯದಲ್ಲಿ ಸಾಲವನ್ನು ಮರುಪಾವತಿ ಮಾಡಿದರೆ ಬಡ್ಡಿ ಮನ್ನಾ ಮಾಡುವುದು ಮತ್ತು ನಿರ್ದಿಷ್ಟ ತಾರೀಖಿನೊಳಗೆ ಕಂತಿನ ಹಣ ಮರುಪಾವತಿ ಮಾಡಿದರೆ ವಿಧಿಸುವ ಬಡ್ಡಿಯಲ್ಲಿ ರಿಯಾಯಿತಿ ತೋರಿಸುವ ಕೆಲವು ರಾಜ್ಯ ಸರಕಾರಗಳ ನಿರ್ಧಾರಗಳು ವಾಣಿಜ್ಯ ಬ್ಯಾಂಕುಗಳ ಗ್ರಾಮೀಣ ಕೃಷಿರಂಗದ ವ್ಯವಹಾರದ ಮೇಲೆ ಪ್ರತಿಕೂಲ ಪರಿಣಾಮವನ್ನುಂಟುಮಾಡಿವೆ. ಇಂಥ ನಿರ್ಧಾರಗಳು ಸಾಲಗಾರರ ಪ್ರಾಮಾಣಿಕತೆಯನ್ನು ಕೆಡಿಸಿರುವುದಲ್ಲದೆ, ಮುಂದೆ ದೊರಕಬಹುದಾದ ಹೆಚ್ಚಿನ ರಿಯಾಯಿತಿಯ ಆಸೆಯಲ್ಲಿ ಮತ್ತಷ್ಟು ಸಾಲಗಾರರು ಕಟಬಾಕಿದಾರರಾಗಲು ಪ್ರಚೋದಿಸಿವೆ. ರಿಯಾಯಿತಿ ನೀತಿಯ ನೆರಳಿನಲ್ಲಿ ಸ್ವಲ್ಪ ಜನರು ದುರ್ಲಾಭ ಪಡೆದುಕೊಳ್ಳಲು ಪ್ರಯತ್ನಿಸುತ್ತಿದ್ದಾರೆಂದರೂ ತಪ್ಪಾಗದು. ಇದೇ ಸಂದರ್ಭದಲ್ಲಿ ತಮಗೆ ವಿಧಿಸಿದ ಆರ್ಥಿಕ ಗುರಿಯ ಮಟ್ಟವನ್ನು ತಲುಪುವ ಅವಸರದಲ್ಲಿ, ಬ್ಯಾಂಕುಗಳ ಕಾರ್ಯನಿರ್ವಹಣೆಯ ರೀತಿಗೂ ಗ್ರಾಮಾಭಿವೃದ್ಧಿ ಕಾರ್ಯದಲ್ಲಿ ತೊಡಗಿರುವ ಇತರ ಸಂಸ್ಥೆಗಳಿಗೂ—ಮುಖ್ಯವಾಗಿ ಸಹಕಾರಿ ಸಂಸ್ಥೆಗಳಿಗೂ—ಯಾವುದೇ ವ್ಯತ್ಯಾಸ ಇಲ್ಲದಂತಾಗಿದೆ. ಅಷ್ಟರಮಟ್ಟಿಗೆ ಕೃಷಿ, ಹೈನುಗಾರಿಕೆ ಇತ್ಯಾದಿ ವಿಷಯಗಳಲ್ಲಿ ಉನ್ನತ ಶಿಕ್ಷಣ ಪಡೆದಿರುವ ಅಧಿಕಾರಿಗಳನ್ನು ಗ್ರಾಮಾಭಿವೃದ್ಧಿಗಾಗಿಯೇ ತನ್ನ ಸಿಬ್ಬಂದಿಯಾಗಿರಿಸಿಕೊಂಡಿರುವ ವಾಣಿಜ್ಯ ಬ್ಯಾಂಕುಗಳ ಇಂದಿನ ಕಾರ್ಯನಿರ್ವಹಣೆಯ ಕಾರ್ಯವನ್ನು ನೋಡಿದರೆ, ಗ್ರಾಮಾಭಿವೃದ್ಧಿಯಲ್ಲಿ ಪೂರ್ಣ ಸೋಲನ್ನು ಅನುಭವಿಸದಿದ್ದರೂ ಗೆಲುವು ಕಾಣದ ಸಹಕಾರಿ ರಂಗದ ಸಂಸ್ಥೆಗಳ ಕಾರ್ಯನೀತಿಯನ್ನು ಅವು ಅನುಸರಿಸುವಂತೆ ಅಥವಾ ಪುನರಾವರ್ತಿಸುವಂತೆ ಕಾಣುತ್ತದೆ. ಇಂಥ ಅನುಕರಣೆ ಅಥವಾ ಪುನರಾವರ್ತನೆ ದೀರ್ಘಕಾಲ ಮುಂದುವರಿದಲ್ಲಿ ಅದು ಗ್ರಾಮಾಭಿವೃದ್ಧಿ ಕಾರ್ಯಕ್ಕೂ ವಾಣಿಜ್ಯ ಬ್ಯಾಂಕುಗಳ ಬೆಳವಣಿಗೆಗೂ ಮಾರಕವಾಗಬಹುದು. ಒಂದು ಅಂದಾಜಿನಂತೆ 1985ರಲ್ಲಿ ಗ್ರಾಮಾಭಿವೃದ್ಧಿಗೆ ಮತ್ತು ಕೃಷಿರಂಗಕ್ಕೆ ಬೇಕಾಗುವ ಆರ್ಥಿಕ ಸಹಾಯ ಸುಮಾರು ರೂ. 16,500 ಕೋಟಿ. ಇಷ್ಟೊಂದು ಬಂಡವಾಳವನ್ನು ವಾಣಿಜ್ಯ ಬ್ಯಾಂಕುಗಳನ್ನು ಬಿಟ್ಟರೆ ಪ್ರತಿ ಹೆಜ್ಜೆಗೂ ಸರಕಾರದ ಆಧಾರವನ್ನು ಅವಲಂಬಿಸಿರುವ ಸಹಕಾರಿ ಸಂಸ್ಥೆಗಳು

ಅಥವಾ ಇನ್ನಾವುದೇ ಹಣಕಾಸಿನ ಸಂಸ್ಥೆ ತೊಡಗಿಸುವುದು ಅಸಾಧ್ಯ. ವಾಣಿಜ್ಯ ಬ್ಯಾಂಕುಗಳ ಈ ಅಗಾಧ ಶಕ್ತಿಗೆ ಕಾರಣ, ಅವುಗಳ ಠೇವಣಿ ಮೊತ್ತ ಮತ್ತು ಸ್ವತಂತ್ರವಾಗಿ ವ್ಯಕ್ತಿಪರ ಪರಿಣತಿಯಿಂದ ವ್ಯವಹರಿಸುವ ಸಿಬ್ಬಂದಿವರ್ಗ. ಆದ್ದರಿಂದ ಗ್ರಾಮಾಭಿವೃದ್ಧಿ ಕಾರ್ಯ ಶೀಘ್ರವಾಗಿ ಅಡಚಣೆ ಇಲ್ಲದೆ ಮುಂದುವರಿಯಬೇಕಾದರೆ, ಈ ಮುಂದಿನ ಕೆಲವು ಕ್ರಮಗಳನ್ನು ಕೈಗೊಳ್ಳುವುದು ಅಗತ್ಯ.

i ಸರ್ಕಾರದ ಮತ್ತು ಸಹಕಾರಿ ಸಂಸ್ಥೆಗಳ ಆರ್ಥಿಕ ಗುರಿಯ ಮಟ್ಟ ತಲುಪುವ ಪ್ರಯತ್ನಗಳ ಅನುಕರಣೆ ಅಥವಾ ಪುನರಾವರ್ತನೆ ಕೊನೆಗಾಣಬೇಕು.

ii ಅದರ ಬದಲಾಗಿ ವಲಯ ಅಭಿವೃದ್ಧಿ ನೀತಿ ಮುಂದುವರಿಯಬೇಕು. ಭಾಗವಹಿಸುವ ಎಲ್ಲರ ಅನುಕೂಲಕ್ಕನುಸಾರವಾಗಿ, ಮೊದಲೇ ನಿಗದಿಪಡಿಸಿದ ಗ್ರಾಮಗಳನ್ನು ಹಂತಹಂತವಾಗಿ ಅಭಿವೃದ್ಧಿಗೊಳಿಸುವುದು ಸರ್ಕಾರ, ದತ್ತು ವಹಿಸದ ಬ್ಯಾಂಕು, ಇತರ ಸಂಬಂಧಪಟ್ಟ ಸಂಸ್ಥೆಗಳು, ಸೇವಾಸಂಘಗಳು ಇವುಗಳ ಜಂಟಿ ಹೊಣೆಯಾಗಬೇಕು.

iii ವಾಣಿಜ್ಯ ಬ್ಯಾಂಕುಗಳಲ್ಲಿ ಕೃಷಿರಂಗ ಮತ್ತು ಗ್ರಾಮಾಭಿವೃದ್ಧಿಗಾಗಿಯೇ ನೇಮಕಗೊಂಡ ಸಿಬ್ಬಂದಿ ವರ್ಗಕ್ಕೆ ನಿರ್ದಿಷ್ಟ ಜವಾಬ್ದಾರಿ ಕೊಟ್ಟು ಆರ್ಥಿಕ ಗುರಿ ಮತ್ತು ಭೌತಿಕ ಗುರಿಗಳನ್ನು ಜೊತೆಜೊತೆಯಾಗಿಯೆ ನಿಗದಿಪಡಿಸಬೇಕು. ಅಂಥ ಗುರಿಯನ್ನು ಸಾಧಿಸುವುದಕ್ಕೆ ಯೋಗ್ಯ ವಾತಾವರಣ ಕಲ್ಪಿಸುವುದು ಅಗತ್ಯ.

iv ಗ್ರಾಮಾಭಿವೃದ್ಧಿಯಲ್ಲೂ ಸಹಾಯ ಪಡೆದ ಗ್ರಾಮದ ಜನರ ಒಟ್ಟು ಸಾಧನೆಯೇನು ಎಂಬುದನ್ನು ಮೌಲ್ಯಾಂಕನದ ಮೂಲಕ ಆಗಾಗ ತಿಳಿದು, ಮುಂದೆ ಕೊಡಬಹುದಾದ ಸಹಾಯವೇ ಮುಂತಾದವನ್ನು ಸಾಧನೆಗೆ ಅನುಗುಣವಾಗಿ ನಿರ್ಧರಿಸಬೇಕು.

v ಕೊನೆಯದಾಗಿ, ವಲಯ ಅಭಿವೃದ್ಧಿ ನೀತಿಯಲ್ಲಿ ಒಟ್ಟು ಗ್ರಾಮದ ಕೃಷಿರಂಗದ ಅಭಿವೃದ್ಧಿ ಕಾರ್ಯಗಳಲ್ಲಿ ಒಬ್ಬ ವ್ಯಕ್ತಿಯ ಸ್ವಾತಂತ್ರ್ಯವನ್ನು ಸ್ವಲ್ಪಮಟ್ಟಿಗೆ ಮೊಟಕು ಮಾಡಬೇಕಾಗಿ ಬಂದರೂ ಅದು ದೇಶದ ಒಟ್ಟು ಜನರ ಹಿತದೃಷ್ಟಿಯಿಂದ ಅಗತ್ಯವಾದಲ್ಲಿ ಅಂತಹ ಕಾರ್ಯ ಮುಂದುವರಿಸಲು ಸರ್ಕಾರ ಬದ್ಧವಾಗಿರಬೇಕು. ಇದಕ್ಕೆ ಕಾನೂನಿನ ಬೆಂಬಲ ಇರಬೇಕು.

ವಾಣಿಜ್ಯ ಬ್ಯಾಂಕುಗಳು ಮತ್ತು ಸರ್ಕಾರ ಮೇಲೆ ತಿಳಿಸಿದ ಕ್ರಮಗಳನ್ನು ತೆಗೆದುಕೊಳ್ಳದೆ ಕೇವಲ ಆರ್ಥಿಕ ಮತ್ತು ಭೌತಿಕ ಗುರಿ ಸಾಧಿಸುವುದನ್ನು ಮುಂದುವರಿಸಿದರೆ ವಾಣಿಜ್ಯ ಬ್ಯಾಂಕುಗಳ ಗ್ರಾಮಾಭಿವೃದ್ಧಿ ಕಾರ್ಯ ಬರೀ ಸಹಕಾರಿ ಬ್ಯಾಂಕು ಸಂಸ್ಥೆಗಳ ಅನುಕರಣೆ ಮತ್ತು ಪುನರಾವರ್ತನೆಯಾಗುವುದಲ್ಲದೆ, ವರ್ಷಗಳು ಕಳೆದಂತೆ ವಾಣಿಜ್ಯ ಬ್ಯಾಂಕುಗಳ ಶಕ್ತಿ ಕುಂದಿ ಆರೋಗ್ಯ ಕೆಡಬಹುದು.



## ಕೆಲವು ಕೂಟ ಪ್ರಶ್ನೆಗಳು

ದೇಶದ ಮೂಲೆಮೂಲೆಯಲ್ಲೂ ಇರುವ ಅತ್ಯಂತ ದುರ್ಬಲವರ್ಗಗಳನ್ನು ತಲಪುವಂತೆ ಮಾಡಲು ಬ್ಯಾಂಕುಗಳು ತಮ್ಮ ಮುಂದೆ ಇರುವ ಗುರಿಗಳನ್ನು ಸಾಧಿಸುವ ಕೆಲಸ ಅತ್ಯಂತ ಬೃಹತ್ತಾದ್ದು. ಸಂಘಟನೆಯ ವ್ಯವಸ್ಥೆಯಲ್ಲೇ ಕ್ರಾಂತಿಯಾಗದಿದ್ದರೆ ಉದ್ದಿಷ್ಟ ಗುಂಪುಗಳಿಗೆ ಉದರಿ ತಲಪಿಸುವ ಕಾರ್ಯ ಕಠಿಣವಾದೀತು. ಈ ಮುಂದಿನ ಪ್ರಶ್ನೆಗಳನ್ನು ಆಳವಾಗಿ ಪರಿಶೀಲಿಸುವುದು ಅಗತ್ಯ :

೧ ಮುಖ್ಯವಾಗಿ ಶಾಖಾಮಟ್ಟದಲ್ಲಿ ಯಾವ ಬಗೆಯ ಸಂಘಟನೆಯ ಚೌಕಟ್ಟು ಇರಬೇಕು ? ಅದಕ್ಕೆ ತಗಲುವ ವೆಚ್ಚದ ದೃಷ್ಟಿಯಿಂದ ಆಗುವ ಪರಿಣಾಮಗಳೇನು ?

೨ ಹೆಚ್ಚಿನ ಸಂಖ್ಯೆಯಲ್ಲಿ ಉದ್ದಿಷ್ಟ ಗುಂಪುಗಳಿಗೆ ಸೇವೆ ಸಲ್ಲಿಸಬೇಕಾದರೆ ಅದಕ್ಕೆ ಬೇರೆ ಬಗೆಯ ದೃಷ್ಟಿಯೇ ಅಗತ್ಯವಾದೀತು. ಈಗಿನ ಬ್ಯಾಂಕಿಂಗ್ ವಿನಿಮಯನಗಳ ಚೌಕಟ್ಟಿನೊಳಗೆ ಅದನ್ನು ಅಳವಡಿಸಲು ಸಾಧ್ಯವಾಗದೆ ಹೋದೀತು. ಕೆಲಸದ ವೇಳೆ, ಸಿಬ್ಬಂದಿಯ ಧೋರಣೆ, ಕಾರ್ಯಪಾತ್ರಗಳು, ಉತ್ತರದಾಯಿತ್ವ ಮತ್ತು ಇಂಥ ವಿಚಾರಗಳಿಗೆ ಗಮನ ನೀಡಬೇಕಾದೀತು.

೩ ಪಟ್ಟಣಿಗ ಉದ್ಯೋಗಾರ್ಥಿಗಳಿಗೂ ಗ್ರಾಮೀಣ ಉದ್ಯೋಗಾವಕಾಶಗಳಿಗೂ ಇರುವ ಅಸಾಮ್ಯವನ್ನು ಪರಿಹರಿಸಬೇಕು.

೪ ಸಾಲ ಪಡೆಯುವವರನ್ನು ಸರಿಯಾಗಿ ಗುರುತಿಸುವುದು ಬ್ಯಾಂಕರುಗಳ ನೈಜ ಸಮಸ್ಯೆ. ಶಾಖಾ ನಿರ್ವಹಣೆಯ ಸದ್ಯದ ಚೌಕಟ್ಟು ಹಾಗೂ ಅವುಗಳ ವ್ಯವಸ್ಥೆಗಳೊಳಗೆ ಈ ಸಮಸ್ಯೆಯನ್ನು ಪರಿಹರಿಸಲು ಯಾವ ದೃಷ್ಟಿ ತಳೆಯಬೇಕು ?

೫ ಸರ್ಕಾರದಿಂದ ಪ್ರಾಯೋಜಿತವಾದ ನಾನಾ ಯೋಜನೆಗಳ ಸಂದರ್ಭದಲ್ಲಿ ಸಾಕಷ್ಟು ಗಮನ ಸೆಳೆದಿರುವ ಒಂದು ಪ್ರಶ್ನೆಯೆಂದರೆ ಬಡ್ಡಿ ಸಹಾಯಧನ ಹಾಗೂ ಬಂಡವಾಳ ಸಹಾಯಧನವನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ನೀಡುವುದನ್ನು ಕುರಿತದ್ದು. ಈ ಪ್ರಶ್ನೆಯನ್ನು ನಾವು ಹೇಗೆ ಪರಿಹರಿಸಬೇಕು ?

—**ಬ್ಯಾಂಕ್ ಆಫ್ ಬರೋಡ** (ಹಿನ್ನೆಲೆ ಪ್ರಬಂಧ)

# ಗ್ರಾಮಾಭಿವೃದ್ಧಿ ಮತ್ತು ಗ್ರಾಮೀಣ ಬ್ಯಾಂಕುಗಳು

ಅ. ಚ. ಅಶೋಕಕುಮಾರ

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸುವ ಯೋಚನೆ 1945ರಷ್ಟು ಹಳೆಯದು. ಕೃಷಿ ಹಣಕಾಸು ಉಪಸಮಿತಿ (ಗಾಡ್ಗಿಲ್ ಸಮಿತಿ, 1945) ಕೃಷಿ ಉದರಿ ನಿಗಮಗಳನ್ನು ಎಲ್ಲ ಪ್ರಾಂತ್ಯಗಳಲ್ಲಿ ಸ್ಥಾಪಿಸಬೇಕೆಂದು ಶಿಫಾರಸು ಮಾಡಿತ್ತು. ಇದು ಸ್ವಾಯತ್ತ ಸಂಸ್ಥೆಯಾಗಿರಬೇಕು ಮತ್ತು ರಾಜ್ಯ ಸರ್ಕಾರದ ಆಶ್ರಯದಲ್ಲಿರಬೇಕೆಂದು ಅಭಿಪ್ರಾಯಪಟ್ಟಿತ್ತು. ಇದರ ಬಂಡವಾಳದಲ್ಲಿ ರಾಜ್ಯ ಸರ್ಕಾರ ಪ್ರತಿಶತ 50, ಉಳಿದವುಗಳನ್ನು ವಾಣಿಜ್ಯ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು ಮತ್ತು ಮಾರುಕಟ್ಟೆ ಸಮಿತಿ/ನಿಗಮಗಳು ಭರಿಸತಕ್ಕದ್ದು ಎಂದು ಸೂಚಿಸಿತ್ತು. ಆದರೆ ಸಹಕಾರ ಸಂಘಗಳು ಕೃಷಿ ಹಣಕಾಸು ಉಪಸಮಿತಿಯ ಈ ಸಲಹೆಯನ್ನು ಉಗ್ರವಾಗಿ ಪ್ರತಿಭಟಿಸಿದುವು. 1946ರ ಸಹಕಾರ ಯೋಜನೆ ಸಮಿತಿ ಸಹ ಈ ಸಲಹೆಗೆ ವಿರೋಧ ವ್ಯಕ್ತಪಡಿಸಿತು. 1949ರ ಗ್ರಾಮೀಣ ಬ್ಯಾಂಕಿಂಗ್ ವಿಚಾರಣಾ ಸಮಿತಿ ಇದನ್ನು ಪುರಸ್ಕರಿಸಲಿಲ್ಲ. ಬದಲಾಗಿ ಸಹಕಾರಿ ಉದರಿ ಸಂರಚನೆಗೆ ಒಲವು ತೋರಿಸಿತು. ಸಹಕಾರಿ ಉದರಿ ಸಂರಚನೆಯಿಲ್ಲದ ಸ್ಥಳಗಳಲ್ಲಿ ನಿಗಮಗಳು ಅಥವಾ ಕೃಷಿ ಬ್ಯಾಂಕುಗಳನ್ನು ತೆರೆಯಲು ಸಲಹೆ ನೀಡಿತು. 1954ರ ಗ್ರಾಮೀಣ ಉದರಿ ಸಮೀಕ್ಷೆಯೂ ಇದು ಅಪ್ರಯೋಜನಕಾರಿ ಎಂದು ತಿಳಿಸಿತು. 1967ರಲ್ಲಿ ವಾಣಿಜ್ಯ ಬ್ಯಾಂಕುಗಳ ಮೇಲೆ ಸಾಮಾಜಿಕ ನಿಯಂತ್ರಣ ತಂದ ಮೇಲೆ ಗ್ರಾಮೀಣ ಬ್ಯಾಂಕಿಂಗ್ ವಿಚಾರಣಾ ಸಮಿತಿ ಮತ್ತು ಗ್ರಾಮೀಣ ಉದರಿ ಸಮೀಕ್ಷೆಯ ವರದಿ ತನ್ನ ಪ್ರಭಾವ ಬೀರಲು ಪ್ರಾರಂಭಿಸಿತು.

1945ರಲ್ಲಿ ಗಾಡ್ಗಿಲ್ ಸಮಿತಿ ನೀಡಿದ ಕೃಷಿ ಉದರಿ ನಿಗಮದ ಸೂತ್ರವನ್ನು ಪರಿಶೀಲಿಸಲು ಮತ್ತೊಂದು ತಂಡದ ನೇಮಕವಾಯಿತು. ಸಹಕಾರ ತತ್ವ ಎಲ್ಲಿ ಅಭಿವೃದ್ಧಿಯಾಗಿಲ್ಲವೊ ಅಂತಹ ರಾಜ್ಯಗಳಾದ ಅಸ್ಸಾಮ್, ಬಿಹಾರ, ಪಶ್ಚಿಮ ಬಂಗಾಳ, ಒರಿಸ್ಸ, ರಾಜಸ್ಥಾನ, ತ್ರಿಪುರ ಮತ್ತು ಮಣಿಪುರದಲ್ಲಿ ತಾತ್ಕಾಲಿಕವಾಗಿ ಇದನ್ನು ಜಾರಿಗೆ ತರಲು ಅನುಮತಿ ನೀಡಿತು. ಈ ಸಲಹೆಗೆ ಭಾರತೀಯ ರಿಸರ್ವ್ ಬ್ಯಾಂಕು ಮತ್ತು ಯೋಜನಾ ಆಯೋಗ ಒಪ್ಪಿಗೆ ನೀಡಿತು. 1968ರಲ್ಲಿ ಸಂಸತ್ತು ರಾಜ್ಯ ಕೃಷಿ ಉದರಿ ನಿಗಮ ವಿಧೇಯಕವನ್ನು ಮಂಡಿಸಿತು. 1968ರ ಡಿಸೆಂಬರ್ 20ರಂದು ಈ ಅಧಿನಿಯಮಕ್ಕೆ ರಾಷ್ಟ್ರಪತಿಯ ಅಂಗೀಕಾರ ದೊರಕಿತು. ಬಂಡವಾಳದಲ್ಲಿ 30%ನ್ನು ಕೇಂದ್ರ ಸರ್ಕಾರವೂ 20%ನ್ನು ಭಾರತೀಯ ರಿಸರ್ವ್ ಬ್ಯಾಂಕೂ 20%ನ್ನು ರಾಜ್ಯ ಸರ್ಕಾರವೂ ಉಳಿದ 30%ನ್ನು ಆಹಾರ ನಿಗಮ, ಭಾರತೀಯ ಸ್ಟೇಟ್ ಬ್ಯಾಂಕು, ಸಹವರ್ತಿ ಬ್ಯಾಂಕುಗಳು ಮತ್ತಿತರ ವಾಣಿಜ್ಯ ಬ್ಯಾಂಕುಗಳೂ ಭರಿಸಬೇಕೆಂದು ತೀರ್ಮಾನಿಸಲಾಯಿತು. ಈ ಮಸೂದೆಯನ್ನು ಪ್ರತಿಯೊಂದು ರಾಜ್ಯವೂ ಅನುಮೋದಿಸಬೇಕಾಗಿತ್ತು. ಮುಂಬಯಿಯಲ್ಲಿ 1965ರಲ್ಲಿ ನಡೆದ ರಾಜ್ಯ ಸಹಕಾರ ಸಚಿವರ ಸಭೆಯಲ್ಲಿ ಇದಕ್ಕೆ ತೀವ್ರವಾದ ಪ್ರತಿಭಟನೆ ವ್ಯಕ್ತವಾಯಿತು. ಸಹಕಾರಿ ಬ್ಯಾಂಕುಗಳಿಗೆ ಇದರಿಂದ ತೊಂದರೆಯಾಗುತ್ತದೆ ಎಂಬ ಭಾವನೆ ಇದಕ್ಕೆ ಕಾರಣ. ಆದರೆ 1966ರಲ್ಲಿ ಸೇರಿದ್ದ ಮುಖ್ಯಮಂತ್ರಿಗಳ ಸಭೆಯಲ್ಲಿ ಇದಕ್ಕೆ ಅನುಮೋದನೆ ದೊರಕಿತು. ಇಷ್ಟಾದರೂ ರಾಜ್ಯಗಳ ಪ್ರತಿಕ್ರಿಯೆ ಅಷ್ಟೇನೂ ಸಹಕಾರಿಯಾಗಿರಲಿಲ್ಲವಾದ್ದರಿಂದ ಇದು ಜಾರಿಗೆ ಬರಲೇ ಇಲ್ಲ.

1972ರಲ್ಲಿ ಬ್ಯಾಂಕಿಂಗ್ ಆಯೋಗ ಎರಡು ರೀತಿಯ ಗ್ರಾಮೀಣ ಬ್ಯಾಂಕುಗಳನ್ನು ತೆರೆಯುವ ಸಲಹೆ ನೀಡಿತು : i ಸಹಕಾರಿ ಬ್ಯಾಂಕು, ii ವಾಣಿಜ್ಯ ಬ್ಯಾಂಕುಗಳ ಆಶ್ರಯದ/ಪ್ರಾಯೋಜನೆಗೆ ಒಳಪಟ್ಟ ಬ್ಯಾಂಕುಗಳು.

ಎಲ್ಲಿ ಸಹಕಾರಿ ಬ್ಯಾಂಕುಗಳು ಚೆನ್ನಾಗಿ ಕೆಲಸ ಮಾಡುತ್ತಿವೆಯೋ ಅಲ್ಲಿ ಸಹಕಾರಿ ಬ್ಯಾಂಕುಗಳ ಶಾಖೆಗಳನ್ನು ಅಥವಾ ಹೊಸ ಸಹಕಾರಿ ಬ್ಯಾಂಕುಗಳನ್ನು ತೆರೆಯುವುದು. ಇನ್ನುಳಿದ ಕಡೆಗಳಲ್ಲಿ ವಾಣಿಜ್ಯ ಬ್ಯಾಂಕುಗಳ ಆಶ್ರಯದಲ್ಲಿ ಶಾಖೆಗಳನ್ನು ತೆರೆಯುವುದು. ಇದಕ್ಕೆ ಪ್ರಾಯೋಜಕ ಬ್ಯಾಂಕು ಪ್ರತಿಶತ 51 ಬಂಡವಾಳ ಹೂಡಬೇಕು. ಉಳಿದವನ್ನು ಆ ಪ್ರದೇಶದ ಜನರಿಗೆ ಷೇರುಗಳನ್ನು ನೀಡಿ ಪಡೆಯಬೇಕು.

ಇದೂ ಕಾರ್ಯರೂಪಕ್ಕೆ ಬರಲಿಲ್ಲ. 1969ರಲ್ಲಿ 14 ಬ್ಯಾಂಕುಗಳ ರಾಷ್ಟ್ರೀಕರಣವಾದ ಮೇಲೆ ದುರ್ಬಲ ವರ್ಗದವರಿಗೆ ಆರ್ಥಿಕ ನೆರವು ನೀಡಬೇಕೆಂಬ ಒತ್ತಾಯ ಬಲವಾಯಿತು. 1976ರಲ್ಲಿ ಕೆಲವು ಹಣಕಾಸು ಸಚಿವರು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆಯಾಗಬೇಕೆಂದು ತಿಳಿಸಿದರು. ಇದರ ಪ್ರಕಾರ 1975ರ ಜುಲೈ 1ರಂದು ಇದು ವರದಿ ಸಲ್ಲಿಸಿತು. ರಾಷ್ಟ್ರೀಕರಣವಾದ ಮೇಲೆ ವಾಣಿಜ್ಯ ಬ್ಯಾಂಕುಗಳು ಕೃಷಿ ಅಭಿವೃದ್ಧಿಗೆ ಅಪಾರ ಸಾಲವನ್ನು ನೀಡುತ್ತಿದ್ದರೂ ಎರಡು ಸಮಸ್ಯೆಗಳನ್ನು ಎದುರಿಸಬೇಕಾಯಿತು. i ವಿಪರೀತ ವೆಚ್ಚ, ii ಸಿಬ್ಬಂದಿ ವರ್ಗದವರ ನಡವಳಿಕೆ. ಶಾಖೆಗಳನ್ನು ಗ್ರಾಮೀಣ ಪ್ರದೇಶದಲ್ಲಿ ತೆರೆಯಲು ಆಗುತ್ತಿದ್ದ ವಿಪರೀತ ಖರ್ಚು. ಸಿಬ್ಬಂದಿಯವರು ಬಹುತೇಕ ಪಟ್ಟಣಿಗ ಮತ್ತು ಅರೆಪಟ್ಟಣಿಗರಾಗಿದ್ದು ಗ್ರಾಮೀಣ ಜನತೆಯ ಜೊತೆ ಹೊಂದಿಕೊಳ್ಳಲು ಬಹಳ ತೊಂದರೆ ಪಡುತ್ತಿದ್ದರು. ಗ್ರಾಮೀಣ ಜೀವನದ ಬಗ್ಗೆ ಒಲವು ಕಮ್ಮಿ ಇತ್ತು. ಇವುಗಳೆಲ್ಲ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಉದಯಕ್ಕೆ ಕಾರಣವಾದುವು.

## ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು

ಶ್ರೀ ನರಸಿಂಹನ್ ತಂಡದ ವರದಿಯನ್ನು ಒಪ್ಪಿಕೊಂಡ ಕೇಂದ್ರ ಸರ್ಕಾರ ಎಲ್ಲ ರಾಜ್ಯಗಳ ಮುಖ್ಯಮಂತ್ರಿಗಳು, ವಾಣಿಜ್ಯ ಬ್ಯಾಂಕುಗಳ ಅಧ್ಯಕ್ಷರು, ಸಹಕಾರಿ ಸಂಘಗಳ ಅಧ್ಯಕ್ಷರು ಮತ್ತು ಭೂ ಅಭಿವೃದ್ಧಿ ಬ್ಯಾಂಕಿನ ಅಧ್ಯಕ್ಷರೊಡನೆ ಸಮಾಲೋಚನೆ ನಡಸಿ ಏಪ್ರಿಲ್ 1, 1977ರಂದು 50 ಗ್ರಾಮೀಣ ಬ್ಯಾಂಕುಗಳನ್ನು ತೆರೆಯಲು ನಿರ್ಧರಿಸಿತು. ಸೆಪ್ಟಂಬರ್ 26, 1975ರಂದು ಒಂದು ಸುಗ್ರೀವಾಜ್ಞೆ

---

ಅ. ಚ. ಅಶೋಕಕುಮಾರ, ವ್ಯವಸ್ಥಾಪಕರು, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಹೊಂಗಹಳ್ಳಿ, ಕರ್ನಾಟಕ

ಹೊರಡಿಸಿತು. ಇದು 1976ರಲ್ಲಿ ಗ್ರಾಮೀಣ ಬ್ಯಾಂಕುಗಳ ಅಧಿನಿಯಮವಾಗಿ ರೂಪುಗೊಂಡಿತು. ಅಕ್ಟೋಬರ್ 2, 1975ರಂದು ಐದು ಗ್ರಾಮೀಣ ಬ್ಯಾಂಕುಗಳ ಸ್ಥಾಪನೆಯಾಯಿತು. ಇಂದು 170 ಗ್ರಾಮೀಣ ಬ್ಯಾಂಕುಗಳಿವೆ. ಇವು ರೂ. 550 ಕೋಟಿ ಠೇವಣಿ ಸಂಗ್ರಹಿಸಿವೆ ; ರೂ. 650 ಕೋಟಿ ಮುಂಗಡಗಳನ್ನು ನೀಡಿವೆ.

ಜೂನ್ 23, 1977ರಂದು ಭಾರತೀಯ ರಿಸರ್ವ್ ಬ್ಯಾಂಕು ಪ್ರಾ. ಎಂ. ಎಲ್. ದಂತವಾಲಾ ಅವರ ಅಧ್ಯಕ್ಷತೆಯಲ್ಲಿ ಗ್ರಾಮೀಣ ಬ್ಯಾಂಕುಗಳ ಕೆಲಸವನ್ನು ಪರಿಶೀಲಿಸಲು ಒಂದು ಸಮಿತಿಯನ್ನು ರಚಿಸಿತು. ಇದು ಮುಖ್ಯವಾಗಿ :

ಅ) ಪ್ರಾರಂಭ ಮಾಡಿದ ಉದ್ದೇಶಗಳಿಗೆ ಅನುಗುಣವಾಗಿ ಪ್ರಗತಿ ಸಾಧಿಸಿದೆಯೇ ಎಂಬುದನ್ನು ಪರಿಶೀಲಿಸುವುದು.

ಆ) ಗ್ರಾಮೀಣ ಉದರಿ ಕ್ಷೇತ್ರದಲ್ಲಿ ಇದು ತನ್ನ ನಿರ್ದಿಷ್ಟವಾದ ಪಾತ್ರವೇನು ಎಂಬುದನ್ನು ಗುರ್ತಿಸುವುದು.

ಇ) ಇದರ ಕಾರ್ಯವಿಧಾನಗಳಲ್ಲಿ ಪ್ರಗತಿ ಅಥವಾ ಸುಧಾರಣೆಯನ್ನು ಕಂಡುಹಿಡಿಯುವುದು.

ಇದು ಫೆಬ್ರವರಿ 16, 1978ರಲ್ಲಿ ತನ್ನ ವರದಿ ಸಲ್ಲಿಸಿತು :

'ಗ್ರಾಮೀಣ ಬ್ಯಾಂಕುಗಳು ಎಷ್ಟೋ ಎಡರು ತೊಡರುಗಳನ್ನು ಅನುಭವಿಸುತ್ತಿದ್ದರೂ ಕೇವಲ ಎರಡು ವರ್ಷಗಳಲ್ಲಿ ಗಮನಾರ್ಹವಾದ ಪ್ರಗತಿ ಸಾಧಿಸಿವೆ. ಗ್ರಾಮೀಣ ಜನತೆಯಲ್ಲಿ ಒಂದು ಹೊಸ ಪ್ರಭಾವ ಬೀರಲು ಸಾಧ್ಯವಾಗಿದೆ.'

ಆದುದರಿಂದ ಸರ್ಕಾರ ಇನ್ನೂ ಹೊಸ ಬ್ಯಾಂಕುಗಳನ್ನು ತೀವ್ರವಾಗಿ ತೆರೆಯಲು ನಿರ್ಧರಿಸಿತು. 1983ರ ಡಿಸೆಂಬರ್ ವೇಳೆಗೆ 266 ಜಿಲ್ಲೆಗಳಲ್ಲಿ 160 ಗ್ರಾಮೀಣ ಬ್ಯಾಂಕುಗಳ ಸ್ಥಾಪನೆ ಆಯಿತು. ಆರನೆಯ ಯೋಜನೆಯ ಕೊನೆಯ ವೇಳೆಗೆ, ಅಂದರೆ ಮಾರ್ಚ್ 3, 1985,ರಲ್ಲಿ ಮೊದಲು ನಿರ್ಧಾರ ಮಾಡಿದ 170 ಗ್ರಾಮೀಣ ಬ್ಯಾಂಕುಗಳಿಗೆ ಬದಲಾಗಿ 190 ಗ್ರಾಮೀಣ ಬ್ಯಾಂಕುಗಳನ್ನು ತೆರೆಯಲು ನಿರ್ಧರಿಸಲಾಯಿತು. ಆದರೆ ಇಂದು ಒಟ್ಟು 170 ಗ್ರಾಮೀಣ ಬ್ಯಾಂಕುಗಳಿವೆ. ಏಳನೆಯ ಯೋಜನೆಯ ಅಂತ್ಯದಲ್ಲಿ ಎಲ್ಲಾ ಜಿಲ್ಲೆಗಳಲ್ಲಿಯೂ ಗ್ರಾಮೀಣ ಬ್ಯಾಂಕುಗಳನ್ನು ತೆರೆಯಲು ಉದ್ದೇಶವಿದೆ.

### ಧ್ಯೇಯಗಳು

ಗ್ರಾಮೀಣ ಬ್ಯಾಂಕುಗಳ ಮುಖ್ಯ ಧ್ಯೇಯವೆಂದರೆ ವ್ಯವಸಾಯ, ವ್ಯಾಪಾರ ಮತ್ತು ಹಳ್ಳಿಗಾಡಿನ ಉತ್ಪಾದನ ಚಟುವಟಿಕೆಗಳಿಗೆ, ಅದರಲ್ಲೂ ಸಣ್ಣ, ಅತಿ ಸಣ್ಣ ಕೈಗಾರಿಕೆಗೆ, ಕೃಷಿ ಕಾರ್ಮಿಕರು ಮತ್ತು ಕುಶಲಕರ್ಮಿಗಳಿಗೆ ಸಾಲ ಸೌಲಭ್ಯವನ್ನೊದಗಿಸುವ ಮುಖಾಂತರ ಗ್ರಾಮೀಣ ಪ್ರದೇಶದ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಪಡಿಸಲು ಸಹಾಯ ಮಾಡುವುದು. ದುರ್ಬಲ ವರ್ಗದವರಿಗೆ ಮತ್ತು ಸಣ್ಣ ಕೈಗಾರಿಕೆಗೆ ಮಾತ್ರ ಸಾಲ ನೀಡುವುದರಿಂದ ಹಳ್ಳಿಯ ಎಲ್ಲಾ ಜನರಿಗೆ ಆರ್ಥಿಕ ನೆರವು ನೀಡಲು ಸಾಧ್ಯವಾಗಲಿಲ್ಲ. ಐದು ಎಕರೆಗಿಂತ ಜಾಸ್ತಿ ಹೊಂದಿರುವ ರೈತರಿಗೆ ಆರ್ಥಿಕ ನೆರವು ನೀಡುವ ಹಾಗಿಲ್ಲ.

### ಕಾರ್ಯವಿಧಾನ

1949ರ ಬ್ಯಾಂಕಿಂಗ್ ಅಧಿನಿಯಮದ ಪ್ರಕರಣ 5(ಬಿ)ಯಲ್ಲಿ ಹೇಳಿರುವ ರೀತ್ಯ ಗ್ರಾಮೀಣ ಬ್ಯಾಂಕುಗಳು ಎಲ್ಲಾ ತರಹೆಯ ಬ್ಯಾಂಕಿಂಗ್ ವ್ಯವಹಾರಗಳನ್ನು ಮಾಡಬಹುದಾಗಿದೆ.

### ಸಂಪನ್ಮೂಲಗಳು

ಗ್ರಾಮೀಣ ಬ್ಯಾಂಕುಗಳಿಗೆ ಸಾಲ ನೀಡಿಕೆಗೆ ಬಂಡವಾಳ ಈ ಮುಂದಿನ ಬಾಬುಗಳಿಂದ ಬರುತ್ತವೆ :

(ಅ) ಷೇರು ಧನ,

(ಆ) ಠೇವಣಿಗಳ ಸಂಗ್ರಹಣೆ,

(ಇ) ಪುನರ್ಧನ ನೆರವು : ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್, ಭಾರತೀಯ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್ ಮತ್ತು ಪ್ರಾಯೋಜಕ ಬ್ಯಾಂಕು.

ಅಧಿಕೃತ ಷೇರು ಬಂಡವಾಳ ರೂ. 100ರ ಒಂದು ಲಕ್ಷ ಷೇರುಗಳು, ಪಾವತಿಯಾದ ಬಂಡವಾಳ 25 ಲಕ್ಷ. ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ ಮತ್ತು ಪ್ರಾಯೋಜಕ ಬ್ಯಾಂಕುಗಳಿಂದ 50 : 15 : 35ರ ಪ್ರಮಾಣದಲ್ಲಿ ಬರುತ್ತವೆ.

### ರಿಯಾಯತಿ

ನಗದು ಮೀಸಲು ಅನುಪಾತ ಮತ್ತು ಪರಿನಿಯತ ದ್ರವತ್ವ ಅನುಪಾತ : ಭಾರತೀಯ ರಿಸರ್ವ್ ಬ್ಯಾಂಕು 1924ರ ಅಧಿನಿಯಮ 42ರ ಪ್ರಕಾರ ಗ್ರಾಮೀಣ ಬ್ಯಾಂಕುಗಳು ತಮ್ಮ ಒಟ್ಟು ಅವಧಿ ಮತ್ತು ಅವಧೀತರ ಠೇವಣಿಗಳ ಮೇಲೆ ಪ್ರತಿಶತ 3ನ್ನು ನಗದು ಮೀಸಲು ಅನುಪಾತವಾಗಿಡಬೇಕು. ಇದು ವಾಣಿಜ್ಯ ಬ್ಯಾಂಕುಗಳಿಗೆ 9%ಇದೆ. ಒಟ್ಟು ಬೇಡಿಕೆ ಹಾಗೂ ಸಾವಧಿ ಹೊಣೆಗಾರಿಕೆಯ ಮೇಲೆ ಪ್ರತಿಶತ 25ನ್ನು ಪರಿನಿಯತ ದ್ರವತ್ವ ಅನುಪಾತವಾಗಿಡಬೇಕು. ವಾಣಿಜ್ಯ ಬ್ಯಾಂಕುಗಳಿಗೆ ಇದು ಪ್ರತಿಶತ 35 ಆಗಿರುತ್ತದೆ.

ಮಾರ್ಚ್ 30, 1979ರಂದು ಭಾರತೀಯ ರಿಸರ್ವ್ ಬ್ಯಾಂಕು ಕೇಂದ್ರ ಸರ್ಕಾರದ ಸಲಹೆಯ ಮೇರೆ ವ್ಯವಸಾಯ ಮತ್ತು ಗ್ರಾಮೀಣ ಅಭಿವೃದ್ಧಿಗೆ ಸಂಘ ಸಂಸ್ಥೆಗಳಿಂದ ದೊರಕುತ್ತಿರುವ ಸಾಲಸೌಲಭ್ಯದ ಬಗ್ಗೆ ಅಧ್ಯಯನ ನಡೆಸಲು ಶ್ರೀ ಬಿ. ಶಿವರಾಮನ್‌ರವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ನೇಮಿಸಿತು. ಇದರ ಮುಖ್ಯವಾದ ಸಲಹೆಯ ಫಲವೆಂದರೆ ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು (ನಬಾರ್ಡ್) ಸ್ಥಾಪನೆ. ಜುಲೈ 12, 1982ರಂದು ಇದರ ಉದಯ. ಇದು ಗ್ರಾಮೀಣ ಬ್ಯಾಂಕಿನ ಎಲ್ಲಾ ಆಡಳಿತಾತ್ಮಕ ಸಲಹೆ, ಶಾಖೆ ತೆರೆಯುವ ಬಗ್ಗೆ ಪರವಾನಗಿ ಮುಂತಾದ ಎಲ್ಲಾ ಕೆಲಸಗಳನ್ನು ವಹಿಸಿಕೊಂಡಿತು.

### ಸ್ವಸಾಮರ್ಥ್ಯ

ಬ್ಯಾಂಕುಗಳು, ಅದರಲ್ಲೂ ಗ್ರಾಮೀಣ ಬ್ಯಾಂಕುಗಳು, ಲಾಭ ಮಾಡುವುದಕ್ಕಾಗಿ ಕೆಲಸ ಮಾಡುತ್ತವೆ ಎಂದು ತಿಳಿಯುವುದು ಉಚಿತವಲ್ಲ. ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳನ್ನು ನಿವಾರಣೆ ಮಾಡುವುದರಲ್ಲಿ ಆರ್ಥಿಕ ನೆರವನ್ನು ನೀಡುತ್ತವೆ. ಪ್ರಾದೇಶಿಕ ಗ್ರಾಮೀಣ ಬ್ಯಾಂಕಿನ ಸ್ಥಾಪನೆಯ ಮುಖ್ಯ ಉದ್ದೇಶವೇ ಗ್ರಾಮೀಣ ಜನರ ಆರ್ಥಿಕ ಸ್ಥಿತಿಯನ್ನು ಸುಧಾರಿಸುವುದು. ಅಂದರೆ ಸ್ವಸಾಮರ್ಥ್ಯವಿಲ್ಲದೆ ಸಾಮಾಜಿಕ ಗುರಿಯನ್ನು ಮುಟ್ಟುವುದು ಎಂದರ್ಥವಲ್ಲ. ಸಾಮಾಜಿಕ ಹೊಣೆಯ ಭಾಗ ಸ್ವಸಾಮರ್ಥ್ಯವೂ ಸಹ. ನಿರಂತರ ನಷ್ಟ ಹೊಂದಿ ಬಂಡವಾಳ ಕರಗಿ ಗ್ರಾಹಕರ ಠೇವಣಿಯೂ ಕಡಿಮೆಯಾದರೆ ಕೆಲವೇ ವರ್ಷಗಳಲ್ಲಿ ಬ್ಯಾಂಕಿನ ಅಸ್ತಿತ್ವಕ್ಕೆ ಧಕ್ಕೆಯಾಗಿ ಸಾಮಾಜಿಕ ಹೊಣೆಯನ್ನು ಭರಿಸುವ ಶಕ್ತಿಯೇ ಇಲ್ಲದಂತಾಗುತ್ತದೆ.

ಎಂ. ನರಸಿಂಹನ್ ಅವರ ನೇತೃತ್ವದಲ್ಲಿ ಗ್ರಾಮೀಣ ಬ್ಯಾಂಕಿನ ಬಗ್ಗೆ ನೇಮಕವಾದ ಸಮಿತಿ ಈ ರೀತಿ ಹೇಳಿತು: 'ಸ್ವಸಾಮರ್ಥ್ಯ ಬ್ಯಾಂಕಿಗೆ ಇರಲೇಬೇಕು. ಸಾಮಾಜಿಕ ಹೊಣೆಯನ್ನು ಭರಿಸುವ ಪ್ರಯತ್ನದಲ್ಲಿ ನಷ್ಟ ಹೊಂದಬೇಕಾಗಿಲ್ಲ. ಕೆಲವು ಸಮಯದ ಮೇಲಾದರೂ ಅವು ಲಾಭ ಗಳಿಸಲೇಬೇಕು. ವಾಣಿಜ್ಯ ಬ್ಯಾಂಕುಗಳ ಗ್ರಾಮೀಣ ಶಾಖೆಗಳು ನಷ್ಟ ಹೊಂದಿದರೂ ಅದನ್ನು ಸರಿದೂಗಿಸಲು ಪಟ್ಟಣ ಶಾಖೆಗಳು ಇವೆ. ಆದರೆ ಈ ತರಹದ ಸರಿದೂಗುವಿಕೆ ಗ್ರಾಮೀಣ ಬ್ಯಾಂಕುಗಳಿಗೆ ಸಾಧ್ಯವಿಲ್ಲ.

ಗ್ರಾಮೀಣ ಬ್ಯಾಂಕುಗಳ ಈ ಎಲ್ಲಾ ನ್ಯೂನತೆಗಳನ್ನು ಗಮನದಲ್ಲಿಟ್ಟುಕೊಂಡು ಕಾರ್ಯವನ್ನು ಪರಿಶೀಲಿಸಲು 1977ರಲ್ಲಿ ಶ್ರೀ ದಂತವಾಲ ಸಮಿತಿಯ ನೇಮಕವಾಯಿತು.

ಅದರ ವರದಿಯ ಪ್ರಕಾರ ಸ್ವಸಾಮರ್ಥ್ಯ ಹೊಂದಬೇಕಾದರೆ ಒಂದು ಶಾಖೆ ಒಟ್ಟು ರೂ. 6 ಲಕ್ಷದಿಂದ 6.50 ಲಕ್ಷ ಸಾಲ ನೀಡಬೇಕು; ಮತ್ತು ಒಂದು ಬ್ಯಾಂಕಿಗೆ ಇಂತಹ 30 ಶಾಖೆಗಳಿದ್ದು ಅದರ ಒಟ್ಟು ಸಾಲ ಎರಡು ಕೋಟಿಗಳಾಗಬೇಕು ಮತ್ತು ಇಂತಹ ಬ್ಯಾಂಕು ಸ್ವಸಾಮರ್ಥ್ಯ ಗಳಿಸಬೇಕಾದರೆ ಮೂರು ಅಥವಾ ನಾಲ್ಕು ವರ್ಷಗಳಾಗಬೇಕು.

ನಾಲ್ಕು ವರ್ಷಗಳಾದರೂ ಇವು ಲಾಭ ಗಳಿಸಲೇ ಇಲ್ಲ. ಆದುದರಿಂದ ಡಿಸೆಂಬರ್ 13, 1979ರಂದು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಬಗ್ಗೆ ಸ್ಟೀರಿಂಗ್ ಸಮಿತಿ ತುರ್ತಾಗಿ ಅಧ್ಯಯನ ಮಾಡಬೇಕೆಂದು ಸೂಚಿಸಿತು.

(ಅ) ಡಿಸೆಂಬರ್ 31, 1978ರಂದು ಮೂರು ಕೋಟಿ ರೂ. ಸಾಲ ನೀಡಿರುವ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಸಮಿತಿ ಸೂಚಿಸಿರುವಂತೆ ಲಾಭ ಗಳಿಸುತ್ತಿವೆಯೋ?

(ಆ) ಇಲ್ಲದಿದ್ದಲ್ಲಿ ಆದಾಯ ಮತ್ತು ವೆಚ್ಚವನ್ನು ಪರಿಶೀಲಿಸಿ ಮುಖ್ಯ ಕಾರಣಗಳನ್ನು ಕಂಡುಹಿಡಿಯುವುದು.

(ಇ) ರೂ. ಆರು ಲಕ್ಷ ಸಾಲ ನೀಡಿರುವ ಶಾಖೆಗಳ ಲಾಭಪ್ರದತೆ ಮತ್ತು ಇನ್ನುಳಿದ ಸಮಸ್ಯೆಗಳು.

ಸ್ಟೀರಿಂಗ್ ಸಮಿತಿ 15 ಆಯ್ದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಅಧ್ಯಯನದಿಂದ ಈ ತೀರ್ಮಾನಕ್ಕೆ ಬಂತು. ಎಲ್ಲಾ ಬ್ಯಾಂಕುಗಳು ಸ್ವಸಾಮರ್ಥ್ಯ ಹೊಂದಲು ಅಸಾಧ್ಯ. ಏಕೆಂದರೆ ಕೆಲವು ಶಾಖೆಗಳು ಎಂತಹ ಸ್ಥಳದಲ್ಲಿವೆಯೆಂದರೆ, ಅಲ್ಲಿ ಸಂಪನ್ಮೂಲಗಳು ಸಿಗದೆ ಇರುವ ಪರಿಸ್ಥಿತಿ. ಕೆಲವು ಶಾಖೆಗಳನ್ನು ವಿಸ್ತರಿಸಲು ಸಾಧ್ಯವಿಲ್ಲ. ಆದರೆ ಪ್ರದೇಶ ಸೀಮಿತ. ವಾಣಿಜ್ಯ ಬ್ಯಾಂಕುಗಳ ಪೈಪೋಟಿ. ಆದರೂ ಈ ಎಲ್ಲ ಎಡರು ತೊಡರುಗಳಿದ್ದರೂ ಎಪ್ಪತ್ತು ಶಾಖೆಗಳ ಅನಂತರ ಸ್ವಸಾಮರ್ಥ್ಯ ಹೊಂದುತ್ತವೆ ಮತ್ತು ಲಾಭ ಗಳಿಸುತ್ತವೆ.

1977ರಲ್ಲಿದ್ದ 48 ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಅಧ್ಯಯನಕ್ಕೊಳಪಡಿಸಲಾಯಿತು. ಜೂನ್ 1983ರಲ್ಲಿ ಇವಕ್ಕೆ 6 ವರ್ಷ ಮುಗಿದಿದ್ದುವು. 1983ರಲ್ಲಿ ಶಾಖೆಗಳ ಸಂಖ್ಯೆ 4,279, ಠೇವಣಿ 423.21 ಕೋಟಿ ರೂಪಾಯಿಗಳು. ಮುಂಗಡ 521.13 ಕೋಟಿ ರೂಪಾಯಿಗಳು. ಅವಧಿ ಮೀರಿದ ಸಾಲ/ಸುಸ್ತಿ ಪ್ರತಿಶತ 27.94ರಷ್ಟಿದ್ದು ಎಲ್ಲಾ 142 ಗ್ರಾಮೀಣ ಬ್ಯಾಂಕುಗಳ ಅವಧಿ ಮೀರಿದ ಸಾಲ ಪ್ರತಿಶತ 25.4.

ಈ 48 ಬ್ಯಾಂಕುಗಳ ಪೈಕಿ 1981ರಲ್ಲಿ 33 ಲಾಭ ಗಳಿಸಿದರೆ 1982ರಲ್ಲಿ 26 ಮಾತ್ರ ಲಾಭ ಮಾಡಿದ್ದುವು. ಇನ್ನು ಕೆಲವು ಬ್ಯಾಂಕುಗಳಲ್ಲಿ ಪ್ರತಿ ವರ್ಷದ ನಷ್ಟವನ್ನು ಕೂಡಿದರೆ ಅವುಗಳ ಪಾವತಿಯಾದ ಬಂಡವಾಳಕ್ಕಿಂತ ಜಾಸ್ತಿಯಾಗಿದೆ.

ಗ್ರಾಮೀಣ ಬ್ಯಾಂಕುಗಳ ಆದಾಯ ಮುಖ್ಯವಾಗಿ ಅವು ನೀಡಿದ ಸಾಲ ಮತ್ತು ಮುಂಗಡಗಳ ಮೇಲಿನ ಬಡ್ಡಿ ಮತ್ತು ಇತರ ಬ್ಯಾಂಕುಗಳಲ್ಲಿ ಇಟ್ಟ ಠೇವಣಿಯಿಂದ ಬರುವ ಬಡ್ಡಿ. ಒಟ್ಟು ಆದಾಯದಲ್ಲಿ ಮೇಲ್ಕಂಡ ಬಾಬುಗಳಿಂದ ಬರುವ ಆದಾಯ ಪ್ರತಿಶತ 70ರಿಂದ 80. ತರಗು ಮತ್ತು ಸೋಡಿಯಿಂದ ಬರುವ ಆದಾಯ ಅತ್ಯಲ್ಪ.

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಮುಖ್ಯವಾದ ವೆಚ್ಚವೆಂದರೆ ಸಿಬ್ಬಂದಿ ಖರ್ಚು ಮತ್ತು ಠೇವಣಿಗಳ ಮೇಲೆ ಕೊಡುವ ಬಡ್ಡಿ.

1976ರಲ್ಲಿ 491 ಶಾಖೆಗಳಿದ್ದ ಗ್ರಾಮೀಣ ಬ್ಯಾಂಕುಗಳು 1983ರಲ್ಲಿ 6,812 ಶಾಖೆಗಳನ್ನು ಹೊಂದಿದ್ದುವು (14 ಪಟ್ಟು ಜಾಸ್ತಿ). 1981ರ ಜೂನ್‌ನಲ್ಲಿ ಎಲ್ಲಾ ವಾಣಿಜ್ಯ ಬ್ಯಾಂಕುಗಳ ಒಟ್ಟು ಶಾಖೆಗಳಲ್ಲಿ ಗ್ರಾಮೀಣ ಬ್ಯಾಂಕುಗಳ ಶಾಖೆಗಳು ಪ್ರತಿಶತ 10 ಇದ್ದುವು. 1982ರಲ್ಲಿ ಅವುಗಳ ಸಂಖ್ಯೆ ಪ್ರತಿಶತ 15ಕ್ಕೇರಿತು. ಅಂದರೆ 40,828ರಲ್ಲಿ 6.812. 1983ರ ಜೂನ್ ವೇಳೆಗೆ ಪ್ರತಿಶತ 16.19ಕ್ಕೇರಿತು. ಅಂದರೆ 4,2078ರಲ್ಲಿ 6,812. ಇನ್ನೂ 4,483 ಶಾಖೆಗಳನ್ನು ತೆರೆಯಲು ಪರವಾನಗಿ ಇದೆ. ಅಂದರೆ 1985ರ ಮಾರ್ಚ್ ವೇಳೆಗೆ ಪ್ರತಿಶತ 24 ಆಗುತ್ತದೆ. 1983ರ ಜೂನ್‌ನಲ್ಲಿ ಅವಧಿ ಮೀರಿದ ಸಾಲ 158 ಕೋಟಿ. ಅಂದರೆ ಪ್ರತಿಶತ 25.4.

ಪ್ರಾದೇಶಿಕ ಗ್ರಾಮೀಣ ಬ್ಯಾಂಕಿನ ಠೇವಣಿಗಳು, ಮುಂಗಡಗಳು, ಶಾಖೆಗಳು ಮತ್ತು ಅವುಗಳ ಸರಾಸರಿಯ ಒಂದು ನೋಟ

| | ಒಟ್ಟು | | | | ಸರಾಸರಿ | | |
|---|---|---|---|---|---|---|---|
| ವರ್ಷ | ವಾಣಿಜ್ಯ ಬ್ಯಾಂಕು | ಶಾಖೆಗಳು | ಠೇವಣಿ (ಕೋಟಿ ರೂ.) | ಮುಂಗಡ | ಶಾಖೆಗಳು | ಠೇವಣಿ (ಕೋಟಿ ರೂ.) | ಮುಂಗಡ |
| 1976 | 40 | 491 | 8 | 8 | 12 | 0·2 | 0·2 |
| 1972 | 48 | 1187 | 33 | 43 | 25 | 0·69 | 0·89 |
| 1975 | 51 | 1762 | 74 | 122 | 35 | 1·45 | 2·39 |
| 1979 | 60 | 2420 | 123 | 167 | 40 | 2·05 | 2·78 |
| 1980 | 85 | 3279 | 200 | 243 | 39 | 2·35 | 2·86 |
| 1981 | 107 | 4795 | 336 | 407 | 45 | 3·14 | 3,80 |
| 1982 | 124 | 6191 | 502 | 577 | 50 | 4·05 | 4·65 |
| ಜೂನ್ 1983 | 142 | 6812 | 535 | 624 | 48 | 3·77 | 4·39 |

ಸರಾಸರಿ ಠೇವಣಿ, ಮುಂಗಡ : ಶಾಖೆಯೊಂದಕ್ಕೆ : 1983ರ ಜೂನ್‌ನಲ್ಲಿದ್ದಂತೆ

| | ಒಟ್ಟು | | ಶಾಖೆಯೊಂದಕ್ಕೆ | |
|---|---|---|---|---|
| | ಖಾತೆಗಳು | ಮೊತ್ತ (ಲಕ್ಷ ರೂಪಾಯಿಗಳು) | ಖಾತೆಗಳು | ಮೊತ್ತ (ಲಕ್ಷ ರೂ.) |
| ಠೇವಣಿ | 84,26,206 | 53,486·73 | 1237 | 7·85 |
| ಮುಂಗಡ | 38,45,449 | 62,369·50 | 566 | 9·16 |
| ಅವಧಿ ಮೀರಿದ ಸಾಲ | 12,63,516 | 15,840·54 | 185 | 2,35 |

ಮುಂಗಡ ಠೇವಣಿ ಅನುಪಾತ 117%

1983ರ ಜೂನ್‌ನಲ್ಲಿದ್ದಂತೆ ಮುಂಗಡದ ವಿವರಗಳು

(ಲಕ್ಷ ರೂಪಾಯಿಗಳು)

| | ಮೌಲ್ಯ | ಪ್ರತಿಶತ |
|---|---|---|
| ಅಲ್ಪಾವಧಿ ಸಾಲ (ಬೆಳೆ) | 10,879·70 | 17·44 |
| ಅವಧಿ ಸಾಲ—ಕೃಷಿ | 15,595·43 | 25·00 |
| ಕೃಷಿಯೇತರ ಚಟುವಟಿಕೆಗಳಿಗೆ | 11,709·90 | 18·77 |
| ಗ್ರಾಮೀಣ ಕುಶಲಕರ್ಮಿಗಳು, ಗ್ರಾಮೀಣ ಮತ್ತು ಗುಡಿಕೈಗಾರಿಕೆ | 3,486·11 | 5·59 |
| ಸಣ್ಣ ಉದ್ಯಮಿಗಳು | 14,425·64 | 23·13 |
| ಅನುಭೋಗ ಸಾಲ | 258·64 | 0·42 |
| ಇತರ ನೇರ ಸಾಲ | 3,700·51 | 5·03 |
| ಪರೋಕ್ಷ ಸಾಲ | 2,314·17 | 3·72 |
| | 62,369·50 | 100·00 |

ಇಲ್ಲಿಯ ತನಕ ನಾವು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಹುಟ್ಟು ಮತ್ತು ಬೆಳವಣಿಗೆಯನ್ನು ಅವಲೋಕಿಸಿದೆವು.

ಇಷ್ಟೆಲ್ಲಾ ರಿಯಾಯತಿ, ಅನುಕೂಲ ಮತ್ತು ಅನೇಕ ಸೌಲಭ್ಯಗಳನ್ನು ನೀಡಿದ್ದರೂ ಈ ಬ್ಯಾಂಕುಗಳು ಲಾಭಪ್ರದವಾಗಿ ಕೆಲಸ ಮಾಡುತ್ತಿಲ್ಲ. ಮುಂಚೆಯೇ ತಿಳಿಸಿರುವ ಹಾಗೆ ಯಾವುದೇ ಸಂಸ್ಥೆಯೊಂದು ನಿರಂತರವಾಗಿ ನಷ್ಟ ಅನುಭವಿಸುತ್ತಿದ್ದರೆ ಅದಕ್ಕೆ ಉಳಿಗಾಲವಿಲ್ಲ.

ಈ ನ್ಯೂನತೆಗಳು ಏಕೆ ಎಂಬುದನ್ನು ಸ್ವಲ್ಪ ವಿಚಾರ ಮಾಡೋಣ.

### ಸಿಬ್ಬಂದಿ ಸಮಸ್ಯೆಗಳು

ಸಿಬ್ಬಂದಿಗೆ ನಾನಾ ತರಹ ಸಮಸ್ಯೆಗಳು. ಸಿಬ್ಬಂದಿಗೆ ಸರಿಯಾದ ತರಬೇತಿ ಇಲ್ಲ. ತರಬೇತಿ ನೀಡುವುದು ಪ್ರಾಯೋಜಕ ಬ್ಯಾಂಕಿನ ಕರ್ತವ್ಯವಾದರೂ ಅದು ಅಷ್ಟಾಗಿ ಗಮನ ನೀಡುತ್ತಿಲ್ಲ. ಕೆಲವು ಕಡೆ ಪೂರ್ತಿ ತರಬೇತಿ ನೀಡಿದ್ದರೂ ಅಂಥವರು ನೇರವಾಗಿ ಶಾಖೆಗೆ ಹೋಗಿ ಕೆಲಸ ಮಾಡಬೇಕಾಗಿರುವುದರಿಂದ ಹಲವಾರು ತಪ್ಪುಗಳಾಗುತ್ತವೆ.

### ವೇತನ

ವಾಣಿಜ್ಯ ಬ್ಯಾಂಕುಗಳಿಗೂ ಇವಕ್ಕೂ ಇರುವ ಅಂತರ ಬಹಳ. ಕೆಲವು ವರ್ಷ ಸಿಬ್ಬಂದಿಯವರು ವೇತನದ ಬಗ್ಗೆ ಮೌನವಾಗಿದ್ದರು. ಆಮೇಲೆ ಒಂದೇ ರೀತಿಯ ಕೆಲಸಕ್ಕೆ ವೇತನಗಳಲ್ಲಿರುವ ಅಂತರ ಕಂಡು ಅಸಹನೆಯಾಗಿದೆ. ಇದರಿಂದ ಲಂಚ ಮುಂತಾದ ಭ್ರಷ್ಟಾಚಾರಗಳಿಗೆಡೆಯುಂಟಾಗಿದೆ.

### ಬಡ್ತಿ

ಗ್ರಾಮೀಣ ಬ್ಯಾಂಕುಗಳ ಪ್ರದೇಶ ಸೀಮಿತ. ಕೆಲವು ಶಾಖೆಗಳನ್ನು ತೆರೆದ ಮೇಲೆ ಇವು ತಟಸ್ಥವಾಗಬೇಕಾಗಿದೆ. ಶಾಖೆಯಲ್ಲಿರುವವರು ಕಿರಿಯ ಗುಮಾಸ್ತ, ಹಿರಿಯ ಗುಮಾಸ್ತ, ಕ್ಷೇತ್ರಾಧಿಕಾರಿ ಮತ್ತು ಶಾಖಾವ್ಯವಸ್ಥಾಪಕ. ಕಿರಿಯ ಗುಮಾಸ್ತ ಹಿರಿಯ ಗುಮಾಸ್ತನಾಗಬೇಕಾದರೆ ಹಲವು ವರ್ಷಗಳೇ ಬೇಕು. ಆಮೇಲೆ ಶಾಖಾವ್ಯವಸ್ಥಾಪಕನಾಗಬಹುದು. ಆದರೆ ಶಾಖಾವ್ಯವಸ್ಥಾಪಕ ಅದೇ ಸ್ಥಾನದಲ್ಲಿಯೇ ನಿವೃತ್ತಿ ಹೊಂದಬೇಕು. ಶಾಖಾವ್ಯವಸ್ಥಾಪಕರಲ್ಲಿ ಭ್ರಷ್ಟಾಚಾರ ಬಹಳ ಇದೆಯೆಂದು ದೂರುಗಳಿವೆ. ಸರ್ಕಾರಿ ಕಛೇರಿ, ಸಹಕಾರಿ ಕ್ಷೇತ್ರ, ಸಹಕಾರಿ ಬ್ಯಾಂಕುಗಳ ತರಹ ಇಲ್ಲಿಯೂ ಬಹಳ ಲಂಚದ ಹಾವಳಿ ತಲೆ ಹಾಕಿದೆ ಎಂದು ತಿಳಿದುಬಂದಿದೆ.

### ಅವಿಧೇಯತೆ

ಇದು ಕೂಡ ಬಹಳ ಇದೆ. ಆಡಳಿತ ಕಛೇರಿಯವರ ಆದೇಶಗಳನ್ನು ಪಾಲಿಸದೇ ಇರುವುದು ಒಂದು ಉದಾಹರಣೆ : ಶಾಖಾವ್ಯವಸ್ಥಾಪಕರ ತೊಂದರೆ. ಹಣ ದುರುಪಯೋಗದ ಆರೋಪ. ಮೊದಲ ನೋಟಕ್ಕೆ ಅದು ನಿಜವೆಂದು ತಿಳಿಯಿತು. ತಾತ್ಕಾಲಿಕವಾಗಿ ವಜಾ ಮಾಡಲು ತೀರ್ಮಾನ. ಅದರಂತೆ ಆದೇಶ ಹೊರಡಿಸಿ ಬದಲಿ ವ್ಯವಸ್ಥಾಪಕರಿಗೆ ಬೀಗದಕೈ ಕೊಡಲು ಅಪ್ಪಣೆಯಾಯಿತು. ಅದನ್ನು ನಿರಾಕರಿಸಿದ ಪ್ರಸಂಗ ಸಂಭವಿಸಿತು. ಪ್ರಧಾನ ಕಛೇರಿಯಿಂದ ಪ್ರಧಾನ ವ್ಯವಸ್ಥಾಪಕರು ಆಗಮಿಸಿದರು. ಅವರು ಹೇಳಿದರೂ ಒಪ್ಪಲಿಲ್ಲ. ಆ ಶಾಖೆಯ ವ್ಯವಸ್ಥಾಪಕರ ಪ್ರಕಾರ ಅಧ್ಯಕ್ಷರು ಮಾತ್ರ ಮೇಲಧಿಕಾರಿ. ಅವರು ಮಾತ್ರ ತನಗೆ ಆದೇಶ ಕೊಡಲು ಸಾಧ್ಯ ಎಂದರು. ಅನಂತರ

ಪೋಲಿಸರನ್ನು ಕರೆದುಕೊಂಡು ಹೋಗಿ ಅವರ ಬೀಗದಕೈಗಳನ್ನು ವಶಪಡಿಸಿಕೊಳ್ಳಬೇಕಾಯಿತು.

ಇನ್ನು ಹಲವಾರು ಶಾಖೆಗಳಲ್ಲಿ ತಾತ್ಕಾಲಿಕ ವಜಾ ಮಾಡಲು ಬದಲಿ ವ್ಯವಸ್ಥಾಪಕರ ಕೊರತೆ ಇರುವುದರಿಂದ ಮಾಡಲು ಆಗಿಲ್ಲ. ಅಂದರೆ ಗ್ರಾಮೀಣ ಬ್ಯಾಂಕುಗಳನ್ನು ನಿರ್ವಹಿಸಲೂ ಆಗುತ್ತಿಲ್ಲ ಎಂಬುದು ಸ್ಪಷ್ಟ. ಹಳ್ಳಿಗಳಲ್ಲಿ ಎಲ್ಲರಿಗೂ ಇವರು ಸಾಲ ಕೊಡಲು ಸಾಧ್ಯವಿಲ್ಲ. ಅಂದರೆ ಐದು ಎಕರೆಗಿಂತ ಹೆಚ್ಚು ಇರುವ ರೈತ ಇವರ ವ್ಯಾಪ್ತಿಗೆ ಬರುವುದಿಲ್ಲ. ಆತ ಮತ್ತೆ ಹತ್ತಿರದ ವಾಣಿಜ್ಯ ಬ್ಯಾಂಕಿಗೇ ಹೋಗಬೇಕು. ವಾಣಿಜ್ಯ ಬ್ಯಾಂಕು ನೀಡುವ ಎಲ್ಲಾ ರೀತಿಯ ಇತರ ಸೇವೆಗಳನ್ನು—ಅಂದರೆ ಅಂಚೆ ವರ್ಗಾವಣೆ, ಹುಂಡಿ ನೀಡಿಕೆ, ಪರ ಊರಿನ ಚೆಕ್ಕುಗಳನ್ನು ತೆಗೆದುಕೊಳ್ಳುವುದು —ಈ ಬ್ಯಾಂಕುಗಳು ನೀಡಲು ಸಾಧ್ಯವಿಲ್ಲ. ಈ ಸೇವೆಗಳನ್ನು ನೀಡಬಹುದಾದರೂ ನೀಡುತ್ತಿಲ್ಲ/ನೀಡಲು ಆಗುತ್ತಿಲ್ಲ. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಪ್ರಾರಂಭವಾಗಿ 9 ವರ್ಷಗಳಾದರೂ ನಿರೀಕ್ಷಿತ ಮಟ್ಟಕ್ಕೆ ಬಂದಿಲ್ಲದಿರುವುದು ಶೋಚನೀಯ.

### ಉಪಸಂಹಾರ

ಇತ್ತೀಚೆಗೆ ವಾಣಿಜ್ಯ ಬ್ಯಾಂಕುಗಳ ಗ್ರಾಮೀಣ ಶಾಖೆಗಳು ಚೆನ್ನಾಗಿ ಕೆಲಸ ಮಾಡುತ್ತಿವೆ. ದುರ್ಬಲ ವರ್ಗದವರ ಆಶೋತ್ತರಕ್ಕೆ ಅನುಗುಣವಾಗಿ ಕೆಲಸ ಮಾಡುತ್ತಿವೆ. ಈಗ ಇರುವ ಎಲ್ಲಾ ಗ್ರಾಮೀಣ ಬ್ಯಾಂಕುಗಳನ್ನು ವಾಣಿಜ್ಯ ಬ್ಯಾಂಕುಗಳಲ್ಲಿ ವಿಲೀನಗೊಳಿಸುವುದು ಯುಕ್ತ. ವಾಣಿಜ್ಯ ಬ್ಯಾಂಕುಗಳು ಗ್ರಾಮೀಣ ಬ್ಯಾಂಕುಗಳ ಎಲ್ಲಾ ನ್ಯೂನತೆಗಳನ್ನು ಹೋಗಲಾಡಿಸಿ ಲಾಭಪ್ರದತೆಯತ್ತ ಖಂಡಿತ ಮುಂದುವರಿಯುತ್ತವೆ ಎಂಬುದರಲ್ಲಿ ಸಂದೇಹವಿಲ್ಲ.



## ಗ್ರಾಮೀಣ ಬ್ಯಾಂಕಿಗೆ ಕಾಯಕಲ್ಪ

ಸರಿಯಾದ ಸಿಬ್ಬಂದಿಯಿದ್ದರೆ ಗ್ರಾಮೀಣ ಬ್ಯಾಂಕುಗಳು ಸಣ್ಣ ರೈತನ, ಕುಶಲಕರ್ಮಿಯ, ಕೃಷಿ ಕಾರ್ಮಿಕನ ಉಳಿತಾಯಗಳನ್ನು ಕ್ರೋಢೀಕರಿಸುವಲ್ಲಿ ಮಹತ್ತರ ಪಾತ್ರ ವಹಿಸಬಲ್ಲುವು. ಹಳ್ಳಿಗಳಲ್ಲಿ ಬ್ಯಾಂಕಿಂಗ್ ಅಭ್ಯಾಸ ನಿಧಾನವಾಗಿ ದೃಢವಾಗಿ ಬೆಳೆಯುತ್ತಿದೆ. ಈ ಬ್ಯಾಂಕುಗಳು ಏಕೆ ಹಿನ್ನಡೆಯಬಾರದೆಂಬುದಕ್ಕೆ ಇದೀಗ ಕಾರಣ, ಈ ಬ್ಯಾಂಕುಗಳ ಸಮಸ್ಯೆಗಳೇನೆಂಬುದು ಸಾರಾಸಗಟಾಗಿ ಗೊತ್ತುಂಟು. ವಾಣಿಜ್ಯ ಬ್ಯಾಂಕುಗಳ ಶಾಖಾವಿಸ್ತರಣ ನೀತಿಯ ವಿಚಾರವಾಗಿ ಸರ್ಕಾರದ 'ಪುನರಾಲೋಚನೆ'ಯಿಂದಾಗಿ ಗ್ರಾಮ ಪ್ರದೇಶಗಳಲ್ಲಿ ಇವುಗಳ ಸ್ಥಿತಿ ಅಪಾಯಕ್ಕೆ ಒಳಗಾಗಿದೆ. ವಾಣಿಜ್ಯ ಬ್ಯಾಂಕುಗಳು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳೊಂದಿಗೆ ಸ್ಪರ್ಧಿಸಲು ಅವಕಾಶ ನೀಡಬೇಕೆಂಬುದು ವಿಚಾರ. ಅಂತಿಮವಾಗಿ ಗ್ರಾಮೀಣ ಬ್ಯಾಂಕುಗಳಿಗೆ ಈಗಾಗಲೇ ಕೊರೆದಿಟ್ಟಿರುವ ಕ್ಷೇತ್ರವನ್ನು ವಾಣಿಜ್ಯ ಬ್ಯಾಂಕುಗಳು ಆಕ್ರಮಿಸಿಕೊಳ್ಳುವುವೆಂಬುದು ಇದರ ಅರ್ಥ. ಎರಡನೆಯದಾಗಿ, ಈ ಗ್ರಾಮೀಣ ಬ್ಯಾಂಕುಗಳ ಪೈಕಿ ಕೆಲವು ಅನುಕೂಲತಮ ಗಾತ್ರವನ್ನೂ ಮೀರಿ ಬೆಳೆದಿವೆ ; ತತ್ಫಲವಾಗಿ ಪ್ರಸಕ್ತ ಚೌಕಟ್ಟಿನೊಳಗೆ ಇವುಗಳ ನಿರ್ವಹಣೆ ಅಸಾಧ್ಯವಾಗಿದೆ. ಆದ್ದರಿಂದ ಇವನ್ನು ಪುನರ್ರಚಿಸಬೇಕು. ಹೀಗೆ ಮಾಡಬೇಕಾದರೆ ಪ್ರಾದೇಶಿಕ ಬ್ಯಾಂಕ್ ಅಧಿನಿಯಮಕ್ಕೆ ತಿದ್ದುಪಡಿ ಅಗತ್ಯವಾದೀತು.

—'ಹಿಂದೂ' ಪತ್ರಿಕೆ (11 ಅಕ್ಟೋಬರ್ 1984)

# ಉದರಿ ಪ್ರಾಧಿಕರಣ ಯೋಜನೆ

ಐ. ಕೋದಂಡರಾವ್

ಯೋಜಿಸು ಇಲ್ಲವೇ ಅಳಿದುಹೋಗು. ಇದು ಸರ್ವಕಾಲೀನವಾದ ಸತ್ಯ. ಯೋಜನೆ ಎಂದರೆ ಭವಿಷ್ಯದ ಬಗ್ಗೆ ಚಿಂತನೆ. ಒಂದು ಗುರಿಯನ್ನು ಸಾಧಿಸಲು ನಮ್ಮಲ್ಲಿರುವ ಸಲಕರಣೆಗಳನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳುವ ಬಗ್ಗೆ ಕೆಲವು ಕ್ರಮಗಳನ್ನು ಹಾಕಿಕೊಂಡು ಅವನ್ನು ಸರಿಯಾದ ರೀತಿಯಲ್ಲಿ ಅನುಷ್ಠಾನಕ್ಕೆ ತರುವುದು. ನಮ್ಮಲ್ಲಿರುವ ಮಿತಿಯಾದ ಸಾಧನ ಸಂಪತ್ತನ್ನು ನಮ್ಮ ಗುರಿಯ ಸಾಧನೆಗಾಗಿ ಆದ್ಯತೆಯ ಮೇರೆಗೆ ಎಚ್ಚರಿಕೆಯಿಂದ ಉಪಯೋಗಿಸಿಕೊಳ್ಳುವುದು ತುಂಬ ಅಗತ್ಯ. ಸ್ವಾತಂತ್ರ್ಯವನ್ನು ಪಡೆದುಕೊಂಡ ನಂತರ ನಮ್ಮ ದೇಶ ಪ್ರಗತಿ ಸಾಧಿಸಲು ಪಂಚವಾರ್ಷಿಕ ಯೋಜನೆಗಳನ್ನು ಹಾಕಿಕೊಂಡಿತು. ಈ ಪಂಚವಾರ್ಷಿಕ ಯೋಜನೆಗಳ ಮೂಲಕ ನಮ್ಮ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪ್ರಗತಿಯನ್ನು ಸಾಧಿಸಲು ನಾವು ಹೊರಟಿದ್ದೇವೆ. ಈ ಪಂಚವಾರ್ಷಿಕ ಯೋಜನೆಗಳ ಮುಖ್ಯ ಉದ್ದೇಶವೇನೆಂದರೆ ಮಿತಿಯಾದ ಸಾಧನ ಸಂಪತ್ತನ್ನು ಉತ್ತಮ ರೀತಿಯಲ್ಲಿ ಉಪಯೋಗಿಸಿಕೊಳ್ಳುವುದು.

ಈ ನಿಟ್ಟಿನಲ್ಲಿ ನಮ್ಮಲ್ಲಿರುವ ಮಿತಿಯಾದ ನಿಧಿಯನ್ನು ಅತ್ಯಂತ ಆವಶ್ಯಕವಾದ, ಉತ್ಪನ್ನಕ್ಕೆ ಪೂರಕವಾದ ಕಾರ್ಯಗಳಲ್ಲಿ ತೊಡಗಿಸುವುದು ಅತ್ಯಾವಶ್ಯಕ. ಭಾರತೀಯ ರಿಸರ್ವ್ ಬ್ಯಾಂಕ್ ನಮ್ಮ ದೇಶದ ಹಣಕಾಸಿನ ವ್ಯವಹಾರವನ್ನು ನಡೆಸುತ್ತದೆ ಮತ್ತು ನಿಯಂತ್ರಿಸುತ್ತದೆ. ಅದರಲ್ಲಿ ಉದರಿ ನಿಯಂತ್ರಣ ಒಂದು ಮುಖ್ಯ ಕಾರ್ಯಾಚರಣೆ. ಭಾರತೀಯ ರಿಸರ್ವ್ ಬ್ಯಾಂಕ್ ಉದರಿಯನ್ನು ಅಥವಾ ಹಣಕಾಸಿನ ವ್ಯವಹಾರವನ್ನು ಎರಡು ರೀತಿಯಲ್ಲಿ ನಿಯಂತ್ರಿಸುತ್ತದೆ. ಗಾತ್ರಾತ್ಮಕ ಉದರಿ ನಿಯಂತ್ರಣ ಒಟ್ಟು ಬ್ಯಾಂಕ್ ಉದರಿಯ ಗಾತ್ರವನ್ನು ನಿಯಂತ್ರಿಸುತ್ತದೆ. ಗುಣಾತ್ಮಕ ಉದರಿ ನಿಯಂತ್ರಣ ಕೆಲವು ನಿರ್ದಿಷ್ಟ ವಲಯಗಳ/ವಸ್ತುಗಳ ಉದರಿಯನ್ನು ನಿಯಂತ್ರಿಸುತ್ತದೆ. ಉದರಿ ಪ್ರಾಧಿಕರಣ ಯೋಜನೆ (ಕ್ರೆಡಿಟ್ ಆಥರೈಸೇಷನ್ ಸ್ಕೀಮ್) ಒಂದು ನಿರ್ದಿಷ್ಟ ವಲಯದ ದೊಡ್ಡ ಸಾಲಗಾರ ವರ್ಗದ ಉದರಿಯನ್ನು ನಿಯಂತ್ರಿಸುವುದು.

### ಉದರಿ ಪ್ರಾಧಿಕರಣ ಯೋಜನೆ ಎಂದರೇನು ?

ಈ ಯೋಜನೆ 1965ರ ನವೆಂಬರ್‌ನಲ್ಲಿ ಜಾರಿಗೆ ಬಂತು. ಈ ಯೋಜನೆಯ ಅನ್ವಯ ಯಾವುದೇ ಒಂದು ವಾಣಿಜ್ಯ ಬ್ಯಾಂಕು ಒಬ್ಬ ಸಾಲಗಾರನಿಗೆ ರೂ. ಒಂದು ಕೋಟಿ ಅಥವಾ ಅದಕ್ಕೂ ಹೆಚ್ಚಿನ ಹಣವನ್ನು ಸಾಲವಾಗಿ ಕೊಡಬೇಕಾದಲ್ಲಿ ಅದು ರಿಸರ್ವ್ ಬ್ಯಾಂಕಿನ ಪೂರ್ವ ಪ್ರಾಧಿಕರಣವನ್ನು ಪಡೆಯಬೇಕು. ಈ ಸಾಲ ಹೊಸದಾಗಿ ರೂ. ಒಂದು ಕೋಟಿಯನ್ನು, ಅಥವಾ ಇರುವ ಸಾಲದ ಮಿತಿಯನ್ನು ಹೆಚ್ಚಿಸಿದಾಗ ರೂ. ಒಂದು ಕೋಟಿಯನ್ನು ಮುಟ್ಟಿದಲ್ಲಿ (ಆಧಾರ ಸಹಿತ ಅಥವಾ ಆಧಾರ ರಹಿತ) ರಿಸರ್ವ್ ಬ್ಯಾಂಕಿನ ಪೂರ್ವ ಪ್ರಾಧಿಕರಣವನ್ನು ತೆಗೆದುಕೊಳ್ಳಬೇಕು.

ಐ. ಕೋದಂಡರಾವ್, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು

ಬ್ಯಾಂಕುಗಳು ರಾಷ್ಟ್ರೀಕರಣವಾದ ಮೇಲೆ ಈ ಯೋಜನೆಯ ಮಹತ್ವ ಹೆಚ್ಚಿದೆ. ನಮ್ಮ ದೇಶದ ಪುರೋಭಿವೃದ್ಧಿಗೆ ಗ್ರಾಮೀಣ ಅಭಿವೃದ್ಧಿಯಾಗಬೇಕು. ಇದನ್ನು ಸಾಧಿಸಲು ಕೃಷಿ ಮತ್ತು ಸಣ್ಣ ಕೈಗಾರಿಕಾ ಕ್ಷೇತ್ರಗಳನ್ನು ಸುಧಾರಿಸಬೇಕು. ಆದ್ದರಿಂದ ಈ ಕ್ಷೇತ್ರಗಳನ್ನು 'ಆದ್ಯತಾ ವಲಯ' ಎಂದು ತೀರ್ಮಾನಿಸಿ ಸಾಲದ ಹೆಚ್ಚುವರಿ ಸೌಲಭ್ಯವನ್ನು ಈ ವಲಯಕ್ಕೆ ಕೊಡಬೇಕೆಂದು ಯೋಜಿಸಲಾಗಿದೆ. ಇದನ್ನು ಸಾಧಿಸಲು ನಮ್ಮಲ್ಲಿರುವ ಮಿತಿಯಾದ ಉದರಿ ಯಾವನೋ ಒಬ್ಬ ಅಥವಾ ಒಂದು ವಲಯದ ಸಾಲಗಾರನಿಗೆ ಸಿಗುವ ಬದಲು ಎಲ್ಲಾ ವಲಯಗಳಿಗೂ ಸಿಗುವಂತೆ ಮಾಡಬೇಕು. ಉದರಿ ಪ್ರಾಧಿಕರಣ ಯೋಜನೆ ಮೇಲೆ ಹೇಳಿದ ಉದ್ದೇಶವನ್ನು ಸಾಧಿಸಲು ಭಾರತೀಯ ರಿಸರ್ವ್ ಬ್ಯಾಂಕಿಗೆ ಒಂದು ಸಾಧನವಾಗಿದೆ.

### ಯೋಜನೆಯ ಗುರಿಗಳು

1. ನಮ್ಮ ಯೋಜನೆಗಳಿಗನುಸಾರವಾಗಿ ಉದರಿಯನ್ನು ನೀಡುವುದು ಮತ್ತು ಅದು ಸರಿಯಾದ ಕಾರ್ಯಕ್ಕಾಗಿ ಉಪಯೋಗಿಸಲ್ಪಟ್ಟಿದೆಯೇ ಎಂಬುದನ್ನು ನೋಡುವುದು.
2. ದೊಡ್ಡ ಸಾಲಗಾರರ ಮೇಲೆ ಹಣಕಾಸಿನ ಶಿಸ್ತನ್ನು ಹೇರುವುದು, ಅಂದರೆ ಸಾಲಗಾರರು ಅನಾವಶ್ಯಕವಾದ ರೀತಿಯಲ್ಲಿ ಉದರಿಯನ್ನು ಉಪಯೋಗಿಸುವುದನ್ನು ತಡೆಯುವುದು.
3. ಒಬ್ಬ ಸಾಲಗಾರ ಒಂದಕ್ಕಿಂತಲೂ ಹೆಚ್ಚು ಬ್ಯಾಂಕುಗಳಿಂದ ಸಾಲವನ್ನು ಪಡೆದಿದ್ದಲ್ಲಿ ಅಂಥ ಪ್ರಸ್ತಾವನೆಯನ್ನು ಎಲ್ಲಾ ಬ್ಯಾಂಕುಗಳ ಮಾಹಿತಿಯ ಆಧಾರದ ಮೇಲೆ ನಿರ್ಧಾರಣ ಮಾಡುವುದು.
4. ಉದರಿ ನಿರ್ಧಾರಣ ತಂತ್ರವನ್ನು ಉತ್ತಮಪಡಿಸುವುದು ಮತ್ತು ಅದನ್ನು ಹಿಂಪಡೆಯುವ ಬಗ್ಗೆ ಅನುಸರಿಸಬೇಕಾದ ಕ್ರಮ.

ಈ ಯೋಜನೆಯಡಿಯಲ್ಲಿ ಖಾಸಗಿ ಹಾಗೂ ಸಾರ್ವಜನಿಕ ವಲಯದಲ್ಲಿನ ಸಾಲಗಾರರೆಲ್ಲರಿಗೂ ದುಡಿಯುವ ಬಂಡವಾಳ ಹಾಗೂ ಅಥವಾ ಸಾಲದ ರೂಪದಲ್ಲಿ ಉದರಿ ದೊರೆಯುತ್ತದೆ.

ದುಡಿಯುವ ಬಂಡವಾಳದ ರೂಪದಲ್ಲಿ ಸಾಲವನ್ನು ಕೊಡಬೇಕಾದಲ್ಲಿ ವಾಣಿಜ್ಯ ಬ್ಯಾಂಕುಗಳು ಭಾರತೀಯ ರಿಸರ್ವ್ ಬ್ಯಾಂಕಿನ ಪೂರ್ವಪ್ರಾಧಿಕರಣವನ್ನು ಈ ಸಂದರ್ಭಗಳಲ್ಲಿ ಪಡೆಯಬೇಕಾಗಿದೆ:

1. ಒಬ್ಬ ಸಾಲಗಾರನಿಗೆ ಹೊಸದಾಗಿ ದುಡಿಯುವ ಬಂಡವಾಳ ರೂ. 4 ಕೋಟಿ ಅಥವಾ ಅದಕ್ಕಿಂತ ಹೆಚ್ಚಾಗಿ ಕೊಟ್ಟಲ್ಲಿ,
2. ಒಬ್ಬ ಸಾಲಗಾರನಿಗೆ ಹೆಚ್ಚಿನ ದುಡಿಯುವ ಬಂಡವಾಳವನ್ನು ಆಧಾರ ಸಹಿತ ಅಥವಾ ಆಧಾರ ರಹಿತ ಕೊಟ್ಟಾಗ ಅದು ರೂ. 4 ಕೋಟಿಯಷ್ಟು ಆದಲ್ಲಿ.

ಈಗಾಗಲೇ ಈ ಯೋಜನೆಯಡಿಯಲ್ಲಿ ಮಂಜೂರು ಮಾಡಿರತಕ್ಕ ಉದರಿಯನ್ನು ಏರಿಸಿದಲ್ಲಿ ಹಾಗೂ ಉದರಿಯ ಪತ್ರ ಮತ್ತು ಖಾತರಿಯ ಮೇಲೆ ಉದರಿಯ ಸೌಕರ್ಯ ನೀಡದಾಗ ಭಾರತೀಯ ರಿಸರ್ವ್ ಬ್ಯಾಂಕಿನ ಪೂರ್ವಪ್ರಾಧಿಕರಣವನ್ನು ತೆಗೆದುಕೊಳ್ಳಬೇಕು.

### ಅವಧಿ ಸಾಲ

ಖಾಸಗಿ ಮತ್ತು ಸಾರ್ವಜನಿಕ ವಲಯದ ಸಾಲಗಾರರಿಗೆ ಮಧ್ಯಮಾವಧಿ ಮತ್ತು ದೀರ್ಘಾವಧಿ (ಮುಂದೂಡಿದ ಪಾವತಿ ಖಾತರಿಗಳು ಸೇರಿ) ಸಾಲದ ಮಿತಿ ಅನುಕ್ರಮವಾಗಿ ರೂ. 25 ಲಕ್ಷ ಮತ್ತು ರೂ. ಒಂದು ಕೋಟಿ ಇದೆ.

### ವಿಧಾನ

ಈ ಯೋಜನೆಯಡಿಯಲ್ಲಿ ವಾಣಿಜ್ಯ ಬ್ಯಾಂಕುಗಳು ತಮ್ಮ ಸಾಲಗಾರರ ವಿವರವಾದ ದತ್ತಾಂಶವನ್ನು ಸಂಗ್ರಹಿಸಿ, ಪರಿಶೀಲಿಸಿ ಈ ಮುಂದಿನ ನಿಗದಿಪಡಿಸಿದ ನಮೂನೆ ತಃಖ್ತೆಗಳಲ್ಲಿ ಒದಗಿಸುವಂತೆ ರಿಸರ್ವ್ ಬ್ಯಾಂಕ್ ಆದೇಶಿಸಿದೆ.

**ನಮೂನೆ 1:** ಒಬ್ಬ ಸಾಲಗಾರನಿಗೆ ಒಟ್ಟಾರೆ ಬ್ಯಾಂಕಿಂಗ್ ಮಾಧ್ಯಮದಿಂದ ಲಭ್ಯವಿರುವ ವಿವರಗಳು ಮತ್ತು ಅದರ ಉಪಯುಕ್ತತೆ.

**ನಮೂನೆ 2:** ಸಾಲಗಾರನ ದುಡಿಯುವ ಬಂಡವಾಳದ ಅಗತ್ಯ ಮತ್ತು ಬ್ಯಾಂಕಿನಿಂದ ದೊರೆಯಬಹುದಾದ ಸಾಲ—ಇದನ್ನೊಳಗೊಂಡ ತಃಖ್ತೆ. ಇವೆರಡರ ಅಂತರವನ್ನು ತುಂಬಲು ಸಾಲಗಾರನ ಸಾಮರ್ಥ್ಯವನ್ನು ಸಹ ಈ ತಃಖ್ತೆಯಲ್ಲಿ ನಮೂದಿಸಿರಬೇಕು.

**ನಮೂನೆ 3:** ಸಾಲಗಾರನ ಆರ್ಥಿಕ ಪರಿಸ್ಥಿತಿಯ ಬಗ್ಗೆ ತೌಲನಿಕ ತಃಖ್ತೆ ಹಾಗೂ ವಿಶ್ಲೇಷಿಸಿದ ಆಸ್ತಿ ಹೊಣೆ ತಃಖ್ತೆ ಮತ್ತು ಆದಾಯ ಪಟ್ಟಿ.

**ನಮೂನೆ 4:** ನಗದು ಹರಿವಿನ ತಃಖ್ತೆ.

**ನಮೂನೆ 5:** ಪರಿಯೋಜನೆಯ ವೆಚ್ಚ ಮತ್ತು ಅದನ್ನು ಭರಿಸಲು ಇರುವ ದಾರಿ (ಸಾವಧಿ ಸಾಲದ ಬಗ್ಗೆ).

ಈ ತಃಖ್ತೆಗಳನ್ನು ಯಾವ ರೀತಿ ರೂಪಿಸಿದ್ದಾರೆಂದರೆ, ಅವು ಸಾಲ ನೀಡುವ ವಾಣಿಜ್ಯ ಬ್ಯಾಂಕ್ ಮತ್ತು ರಿಸರ್ವ್ ಬ್ಯಾಂಕ್ ಇವೆರಡಕ್ಕೂ ಪರಿಪೂರ್ಣವಾದ ಮತ್ತು ವ್ಯಾಪಕವಾದ ವಿವರಗಳನ್ನು ಕೊಡಬಲ್ಲವಾಗಿದ್ದು ಸಾಲದ ಪ್ರಸ್ತಾವನೆಯ ಬಗ್ಗೆ ಸರಿಯಾದ ಮೌಲ್ಯಮಾಪನವನ್ನು ಮತ್ತು ಆರ್ಥಿಕ ಸ್ಥಿತಿಯ ನಿರ್ಧಾರಣೆಯನ್ನು ಮಾಡಲು ಸಹಾಯಕವಾಗಿರುತ್ತದೆ.

ವಾಣಿಜ್ಯ ಬ್ಯಾಂಕುಗಳು ಸಾಲಗಾರ ಉದ್ಯಮಗಳ ಕೆಲಸದ ಬಗ್ಗೆ, ಅಂದರೆ ಅಂತರ ನಿಗಮಿತ ಸಾಲ ನೀಡುವಿಕೆ ಅಥವಾ ಹೂಡುವಿಕೆ, ಹೆಚ್ಚುವರಿ ದಾಸ್ತಾನು ಸೇರಿಸುವಿಕೆ ಅಲ್ಪಾವಧಿ ಹಣವನ್ನು ಸ್ಥಿರ ಆಸ್ತಿಗಳ ಖರೀದಿಗಾಗಿ ತಿರುಗಿಸುವಿಕೆ ಇವೇ ಮುಂತಾದ ಕೆಲವು ಅಂಶಗಳ ಮೇಲೆ ತಮ್ಮ ನಿರ್ದಿಷ್ಟವಾದ ಹೇಳಿಕೆಯನ್ನು ಕೊಡಬೇಕಾಗುವುದು. ಇದರಿಂದ ವಾಣಿಜ್ಯ ಬ್ಯಾಂಕುಗಳ ಉದರಿಯ ಮಿತಿ ತೀರ್ಮಾನ ಮಾಡುವಾಗ ಸಾಲಗಾರನಿಗೆ ನಿಜವಾಗಿ ಇರುವ ಹಣದ ಆವಶ್ಯಕತೆ ಮತ್ತು ಉದರಿಯ ನಿರ್ಧಾರಣೆ ಇವುಗಳ ಮೇಲೆ ಮಂಜೂರಾತಿ ಮಾಡಬೇಕಾಗುತ್ತದೆ. ವಾಣಿಜ್ಯ ಬ್ಯಾಂಕುಗಳು ಈ ಉದರಿ ಪ್ರಸ್ತಾವನೆಗಳನ್ನು ರಿಸರ್ವ್ ಬ್ಯಾಂಕಿಗೆ ರವಾನಿಸುವ ಮೊದಲು ಅಂತರ ಉದರಿ ಸೌಲಭ್ಯಗಳನ್ನು ತಮ್ಮ ಯೋಗ್ಯನಾದ ನಿಯಂತ್ರಕನಿಂದ ಶಿಫಾರಸ್ಸು ಮಾಡಿಸಬೇಕು.

ಈ ಕೆಳಕಂಡ ಪ್ರಸಂಗಗಳಲ್ಲಿ ವಾಣಿಜ್ಯ ಬ್ಯಾಂಕುಗಳ ರಿಸರ್ವ್ ಬ್ಯಾಂಕಿನ ಪೂರ್ವನಿರ್ಧಾರಣೆಯನ್ನು ತೆಗೆದುಕೊಳ್ಳಬೇಕಾಗಿಲ್ಲ:

1 ಪರಸ್ಥಳದ ಮೂರನೆ ವ್ಯಕ್ತಿಕನ ಚೆಕ್ಕು/ಡ್ರಾಫ್ಟ್‌ಗಳನ್ನು ಖರೀದಿ ಮಾಡಿದಾಗ,
2 ಸಾಲಗಾರನ ಹೆಸರಿನಲ್ಲಿರುವ ಸಾವಧಿ ಠೇವಣಿಯನ್ನು ಆಧಾರವಾಗಿಟ್ಟುಕೊಂಡು ಸಾಲವನ್ನು ಮಂಜೂರು ಮಾಡುವಾಗ,
3 ಈಗಾಗಲೇ ಇರುವಂಥ ಸಾಲಸೌಲಭ್ಯದಲ್ಲಿ ತಾತ್ಕಾಲಿಕ ದುಡಿಯುವ ಬಂಡವಾಳದ ಮಿತಿ ಸೇಕಡ 10ರ ವರೆಗೆ ಅಥವಾ ರೂ. 50 ಲಕ್ಷ ಇವೆರಡರಲ್ಲಿ ಯಾವುದು ಕಮ್ಮಿ ಇದೆಯೋ ಅದು ಮೂರು ತಿಂಗಳಿಗಿಂತಲೂ ಹೆಚ್ಚಿಲ್ಲದೆ,
4 ಹೆಚ್ಚಿನ ಸಾಲಸೌಲಭ್ಯಗಳ ಬಿಡುಗಡೆ ರಿಸರ್ವ್ ಬ್ಯಾಂಕಿನಲ್ಲಿ ಅದರ ಅನುಮತಿಗಾಗಿ ಕಾಯುತ್ತಿದ್ದಲ್ಲಿ ಮಧ್ಯಕಾಲೀನ ದುಡಿಯುವ ಬಂಡವಾಳ ಮಿತಿ ರೂ. 50 ಲಕ್ಷದ ವರೆಗೆ.

ಈ ಮೇಲ್ಕಾಣಿಸಿದ 3 ಮತ್ತು 4ನೆಯ ಬಾಬುಗಳಲ್ಲಿ ಅವಧಿ ಮೀರಿ ಬಾಕಿಯಿರುವ ಉದರಿ ಯಾವ ಸಮಯದಲ್ಲೇ ಆಗಲಿ ರೂ. 50 ಲಕ್ಷಗಳನ್ನು ಮೀರಬಾರದು. ಈ ರೀತಿ ವಿನಾಯಿತಿಸಿದ ವರ್ಗಗಳಿಗೆ ಸೇರಿದ ಮಂಜೂರಾತಿ ಮಾಡಿದ ಸಾಲದ ಮಿತಿಗಳನ್ನು ರಿಸರ್ವ್ ಬ್ಯಾಂಕಿಗೆ ವರದಿ ಮಾಡಬೇಕು.

### ಸಾಲದ ನಿರ್ಧಾರಣೆಯ ಕ್ರಮ

ಭಾರತೀಯ ರಿಸರ್ವ್ ಬ್ಯಾಂಕ್ ತನಗೆ ಬಂದ ಸಾಲದ ಪ್ರಸ್ತಾವನೆಗಳನ್ನು ಈ ಕೆಲವು ಅಂಶಗಳನ್ನು ಗಮನದಲ್ಲಿಟ್ಟುಕೊಂಡು ನಿರ್ಧಾರಣ ಮಾಡುತ್ತದೆ. ನಮ್ಮ ಅರ್ಥವ್ಯವಸ್ಥೆಯಲ್ಲಿ ಸಾಲಗಾರನ ವ್ಯವಹಾರದ ಪಾತ್ರ, ಉದರಿಯ ಆವಶ್ಯಕತೆ ಮತ್ತು ಅವನು ಆರ್ಥಿಕ ಶಿಸ್ತನ್ನು ಪಾಲಿಸುತ್ತಾನೆಯೇ ಎಂಬುವು ಈ ಕೆಲವು ಅಂಶಗಳು. ಉದರಿ ಪ್ರಸ್ತಾವನೆಗಳನ್ನು ಬ್ಯಾಂಕುಗಳಿಗೆ ಕೊಟ್ಟಿರುವ ಮಾರ್ಗದರ್ಶಿ ವಿಧಾನಗಳ ಮೇಲೆಯೇ ಪರಿಶೀಲಿಸಲಾಗುತ್ತದೆ.

1 ಸಾಲಗಾರನ ದಾಸ್ತಾನು ಮತ್ತು ಪ್ರಾಪ್ಯಗಳ ಹೆಚ್ಚುವಿಕೆಯ ಸೂತ್ರ
2 ಸಾಲಗಾರನ ಉತ್ಪಾದನೆ/ಮಾರಾಟ ಯೋಜನೆ
3 ನಿಧಿಯ ಉಪಯುಕ್ತತೆ
4 ಸಾಲಗಾರನ ಸ್ವಂತ ಅಥವಾ ದೀರ್ಘಾವಧಿ ನಿಧಿಯಿಂದ ದುಡಿಯುವ ಬಂಡವಾಳಕ್ಕೆ ಬರುವಂತಹ ಕೊಡುಗೆ.

ರಿಸರ್ವ್ ಬ್ಯಾಂಕ್ ಈ ಮೇಲ್ಕಾಣಿಸಿದ ತಳಹದಿಯ ಮೇಲೆ ತನ್ನ ಒಪ್ಪಿಗೆಯನ್ನು ಕಡಿಮೆ ಸಾಲದ ಮಿತಿಗೆ ಕೊಡಬಹುದು. ಜೊತೆಗೆ ಯುಕ್ತವಾದ ಕೆಲವು ಕರಾರುಗಳನ್ನು ಉದರಿ ಪ್ರಸ್ತಾವನೆಯ ಆಚರಣೆ ಬಗ್ಗೆ ಹಾಕಬಹುದು.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ರಿಸರ್ವ್ ಬ್ಯಾಂಕ್ ವಾಣಿಜ್ಯ ಬ್ಯಾಂಕುಗಳ ಸಾಲದ ಹಣದ ಸುರಕ್ಷತೆಯ ಬಗ್ಗೆ ತಾನು ಬಾಧ್ಯತೆ ವಹಿಸಿಕೊಳ್ಳುವುದಿಲ್ಲ. ಅದರ ಸುರಕ್ಷತೆ ಮತ್ತು ಮುಂದಿನ ವಸೂಲಿ ಕ್ರಮ ಸಾಲ ನೀಡುವ ಬ್ಯಾಂಕುಗಳ ಮೇಲೆಯೇ ಇರುತ್ತವೆ. ಇಂದಿನ ಬದಲಾಗುತ್ತಿರುವ ಆರ್ಥಿಕ ಪರಿಸ್ಥಿತಿಯಲ್ಲಿ ಉದರಿ ಪ್ರಾಧಿಕರಣ ಯೋಜನೆಯ ಗುರಿಗಳು ಮತ್ತು ವ್ಯಾಪ್ತಿಯನ್ನು ಮಾರ್ಪ

ಡಿಸುವ ಬಗ್ಗೆ ಅಧ್ಯಯನ ಮಾಡಿ ಶಿಫಾರಸ್ಸುಗಳನ್ನು ಮಾಡಲು 1982ರ ಅಕ್ಟೋಬರ್ 25ರಂದು ಶ್ರೀ ಎಸ್. ಎಸ್. ಮರಾಠೆ ಯವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಿಸರ್ವ್ ಬ್ಯಾಂಕ್ ರಚಿಸಿತು. ಈ ಸಮಿತಿ ತನ್ನ ವರದಿಯನ್ನು 1983ರ ಜುಲೈಯಲ್ಲಿ ಸಲ್ಲಿಸಿತು. ಈ ವರದಿಯ ಪ್ರಕಾರ ಸಾಲ ನೀಡುವ ಬ್ಯಾಂಕ್ ಹಾಗೂ ಸಾಲಗಾರ ಇಬ್ಬರೂ ಈ ಮುಂದಿನ ಐದು ನಿಯಮಗಳನ್ನು ಪಾಲಿಸಿದಲ್ಲಿ ಅಂಥ ಪ್ರಸ್ತಾವನೆಗಳನ್ನು, ಅವು ಉದರಿ ಪ್ರಾಧಿಕರಣ ಯೋಜನೆಯಡಿ ಇದ್ದರೆ, 'ವೇಗಪಥ' ಎಂಬ ಯೋಜನೆಯಲ್ಲಿರಿಸಿ ತಮ್ಮ ವಿಚಕ್ಷಣೆಯಲ್ಲಿ ಸಾಲಗಾರನ ಹೆಚ್ಚಿನ ಮಿತಿಯಲ್ಲಿ ಶೇಕಡ 50ರಷ್ಟನ್ನು ರಿಸರ್ವ್ ಬ್ಯಾಂಕಿನ ಪೂರ್ವಪ್ರಾಧಿಕರಣಕ್ಕೋಸ್ಕರ ಕಾಯದೆ ಬಿಡುಗಡೆ ಮಾಡಬಹುದು. ಆ ಐದು ನಿಯಮಗಳು ಇವು :

1 ಉತ್ಪಾದನೆ, ಬಿಕರಿ, ಸಂಚಿತ ಆಸ್ತಿ ಇತ್ಯಾದಿಗಳ ಅಂದಾಜಿನ ಸಮಂಜಸತೆಯ ಮೇರೆಗೆ,
2 ರಿಸರ್ವ್ ಬ್ಯಾಂಕಿನ ಸೂತ್ರಗಳಿಗನುಸಾರವಾಗಿ ಸಂಚಿತ ಆಸ್ತಿಗಳ ಮತ್ತು ಜವಾಬ್ದಾರಿಗಳ ಸರಿಯಾದ ವರ್ಗೀಕರಣ,
3 ಪ್ರಸ್ತುತ ಅನುಪಾತ ಸಾಧನೆ ಬಗ್ಗೆ 1.35 : 1 (ವಿನಾಯಿತಿ ಪಟ್ಟಿಗೆ ಸೇರದೇ ಇದ್ದಲ್ಲಿ),
4 ಸಾಲಗಾರನ ತ್ರೈಮಾಸಿಕ ಕಾರ್ಯಾಚರಣೆಯ ತಃಖ್ತೆ ಮತ್ತು ವಾರ್ಷಿಕ ಲೆಕ್ಕಪತ್ರಗಳ ಪ್ರಾಮಾಣಿಕ ಸಲ್ಲಿಸುವಿಕೆ,
5 ಸಾಲಗಾರನ ವಾರ್ಷಿಕ ಸಾಲದ ಅಗತ್ಯದ ಬಗ್ಗೆ ವಾಣಿಜ್ಯ ಬ್ಯಾಂಕುಗಳಿಂದ ಕ್ರಮಬದ್ಧವಾದ ಪುನರ್ವಿಮರ್ಶೆ.

ಉದರಿ ಪ್ರಸ್ತಾವನೆಯನ್ನು ಈ ಪದ್ಧತಿಯಡಿಯಲ್ಲಿ ಬೇಕಾದ ಅಗತ್ಯಗಳನ್ನು ತೃಪ್ತಿಪಡಿಸಿದ ಬಗ್ಗೆ ನಿಯೋಜಿತ ಹಿರಿಯ ಅಧಿಕಾರಿಯಿಂದ ದೃಢೀಕರಿಸಿರಬೇಕು. ವಾಣಿಜ್ಯ ಬ್ಯಾಂಕುಗಳು ರಫ್ತು ಸರಕು ಉತ್ಪಾದನೆಯ ಘಟಕಗಳ ಹಿಂದಿನ ಮೂರು ವರ್ಷಗಳ ಸರಾಸರಿ ವಾರ್ಷಿಕ ರಫ್ತು ಮತ್ತು ಮುಂದಿನ ವರ್ಷಗಳಲ್ಲಿನ ರಫ್ತು, ಆ ಘಟಕದ ಉತ್ಪಾದನೆಯ ಸೇ. 75ಕ್ಕಿಂತಲೂ ಕಡಿಮೆ ಬೀಳದಿದ್ದಲ್ಲಿ ಅಂತಹ ಘಟಕಗಳ ಹೆಚ್ಚುವರಿ ಮಿತಿಯ ಸೇ. 75ರಷ್ಟನ್ನು ಭಾರತೀಯ ರಿಸರ್ವ್ ಬ್ಯಾಂಕಿನ ಪೂರ್ವಪ್ರಾಧಿಕರಣವಿಲ್ಲದೆ ಮಂಜೂರು ಮಾಡಬಹುದು.

ಈ ಮೇಲಿನ ಯೋಜನೆ 1984ರ ಏಪ್ರಿಲ್ 1ರಿಂದ ಜಾರಿಯಲ್ಲಿದೆ. 'ವೇಗಪಥ' ವಿಧಾನದಲ್ಲಿ ಒಂದು ಉದರಿ ಪ್ರಸ್ತಾವನೆಯನ್ನು ಸೇರಿಸಲು ಟಂಡನ್ ಸಮಿತಿ ಮತ್ತು ಚೋರೆ ಸಮಿತಿ ನೀಡಿರುವ ದಾಸ್ತಾನು ಮತ್ತು ಪ್ರಾಪ್ಯಗಳ ಹೆಚ್ಚಳದ ಬಗೆಗಿನ ಮಾನಕಗಳನ್ನು ಅನುಸರಿಸಬೇಕು. ಜೊತೆಗೆ ಸಾಲಗಾರನ ಖಾತೆಯನ್ನು ಕ್ರಮವಾಗಿ ಪ್ರತಿ ವರ್ಷವೂ ಪುನರ್ವಿಮರ್ಶೆ ಮಾಡುವುದು ಅಗತ್ಯ.

ಈಗ ಬ್ಯಾಂಕುಗಳು ಸಾಲ ಪ್ರಸ್ತಾವನೆಯ ವಿಲೇವಾರಿಯನ್ನು ಅತ್ಯಂತ ವೇಗವಾಗಿ ಮಾಡಬೇಕಾಗಿದೆ. ರೂ. 50 ಲಕ್ಷ ಅಥವಾ ಅದಕ್ಕಿಂತ ಹೆಚ್ಚಿನ ದುಡಿಯುವ ಬಂಡವಾಳದ ಮಿತಿಯ ಸಾಲ ಪ್ರಸ್ತಾವನೆಯನ್ನು ಬ್ಯಾಂಕರ್ ಅದು ತನ್ನ ಕೈಗೆ ಬಂದ ನಾಲ್ಕು ತಿಂಗಳೊಳಗೆ ವಿಲೇವಾರಿ ಮಾಡಬೇಕಾಗಿದೆ. ಇದನ್ನು ಸಾಧಿಸಲು, ಬ್ಯಾಂಕರ್ ತನ್ನ ಪ್ರಸಕ್ತ ಕಾರ್ಯವಿಧಾನವನ್ನು ಪರಿಶೀಲಿಸಿಕೊಂಡು ಪ್ರಸ್ತಾವನೆಯ ಸಂಸ್ಕರಣೆಯಲ್ಲಿ ಅನಾವಶ್ಯಕವಾದ ಕೆಲವು ಹಂತಗಳನ್ನು ಕೈಬಿಡಬೇಕಾಗಿದೆ.

ದೊಡ್ಡ ಉದರಿ ಪ್ರಸ್ತಾವನೆಯ ಸಂಸ್ಕರಣೆಯನ್ನು ಬ್ಯಾಂಕಿನ ವಿವಿಧ ಹಂತಗಳಲ್ಲಿ (ಅಂದರೆ ಶಾಖಾ/ಪ್ರಾದೇಶಿಕ/ವಲಯ ಮತ್ತು ಪ್ರಧಾನ ಕಛೇರಿ) ಒಂದೇ ಸಮಯದಲ್ಲಿ ಮಾಡಲು ಸಾಧ್ಯವೇ ಎಂಬುದನ್ನು ಸಮಯದ ಉಳಿತಾಯದ ದೃಷ್ಟಿಯಿಂದ ಪರಿಶೀಲಿಸಬೇಕು. ಸಾಲ ಪ್ರಸ್ತಾವನೆಯ ವಿಲೆವಾರಿಯನ್ನು ಉತ್ತಮಪಡಿಸಲು ವಾಣಿಜ್ಯ ಬ್ಯಾಂಕು, ಸಾಲಗಾರ ಹಾಗೂ ರಿಸರ್ವ್ ಬ್ಯಾಂಕ್ ಒಂದೆಡೆ ಸೇರಿ ವಿಲೆವಾರಿ ಮಾಡುವುದು ಸೂಕ್ತ. ಉದರಿ ಪ್ರಾಧಿಕರಣ ಯೋಜನೆಯ ಆವಶ್ಯಕತೆ ಇಲ್ಲ ಎಂದೂ ಅದರಿಂದ ಉಪಯೋಗವಾಗುವುದಕ್ಕಿಂತಲೂ ತೊಂದರೆಯೇ ಹೆಚ್ಚಾಗಿದೆ ಎಂದೂ ಕೆಲವರು ವಾದಿಸುತ್ತಾರೆ. ಆದರೆ ಉದರಿ ಪ್ರಾಧಿಕರಣ ಯೋಜನೆಯನ್ನು ಮತ್ತು ಅದರ ಉಪಯುಕ್ತತೆಯನ್ನು ವಿವರವಾಗಿ ಗಮನಿಸಿದಲ್ಲಿ, ಈ ಯೋಜನೆ ರಿಸರ್ವ್ ಬ್ಯಾಂಕಿನ ಉದರಿ ನಿಯಂತ್ರಣ ಅಸ್ತ್ರಗಳಲ್ಲಿ ಮುಖ್ಯವಾದದ್ದು ಎಂದು ನಿಸ್ಸಂಶಯವಾಗಿ ಹೇಳಬಹುದು.



## ರಿಸರ್ವ್ ಬ್ಯಾಂಕ್ ವರದಿಯಿಂದ

ಬ್ಯಾಂಕ್ ಉದರಿಯಲ್ಲಿ ಸಾಕಷ್ಟು ಶಿಸ್ತನ್ನು ಉಳಿಸಿಕೊಳ್ಳುವುದಕ್ಕೆ ಸಂಬಂಧಿಸಿದಂತೆ ಕೆಲವು ಅಪೇಕ್ಷಿತಗಳನ್ನು ಪೂರೈಸತಕ್ಕದ್ದೆಂಬ ನಿಯಮಕ್ಕೆ ಒಳಪಟ್ಟು ಬ್ಯಾಂಕುಗಳು ಈಗ ಉದರಿ ಪ್ರಾಧಿಕರಣ ಯೋಜನೆಯ ವ್ಯಾಪ್ತಿಗೆ ಒಳಪಡುವ ದುಡಿಯುವ ಬಂಡವಾಳ ಮಿತಿಗಳ ಮಂಜೂರಾತಿಗಾಗಿ ಬರುವ ಬೇಡಿಕೆಗಳನ್ನು 'ವೇಗಪಥ'ದಲ್ಲಿ ತೊಡಗಿಸಬಹುದಾಗಿದೆ ; ಮತ್ತು ಪ್ರಧಾನವಾಗಿ ರಫ್ತು ಅನುಸ್ಥಾಪಿತ (ಎಕ್ಸ್‌ಪೋರ್ಟ್ ಓರಿಯೆಂಟೆಡ್) ತಯಾರಿಕಾ ಘಟಕಗಳಿಗೆ ಸಂಬಂಧಿಸಿದಂತೆ ಸೂಚಿತ ಅಧಿಕ ಮಿತಿಗಳ ಸೇಕಡ 75ನ್ನೂ, ಇತರ ಎಲ್ಲ ತಯಾರಿಕಾ ಘಟಕಗಳಿಗೂ ಸಂಬಂಧಿಸಿದಂತೆ ಸೇ. 50ರಷ್ಟನ್ನೂ, ತಮ್ಮ ಸ್ವಂತ ವಿವೇಚನೆಗೆ ಒಳಪಟ್ಟು, ಬಿಡುಗಡೆ ಮಾಡಬಹುದು. ಇದಕ್ಕಾಗಿ ರಿಸರ್ವ್ ಬ್ಯಾಂಕಿನ ಪೂರ್ವಭಾವಿ ಉದರಿ ಪ್ರಾಧಿಕರಣಕ್ಕಾಗಿ ಕಾಯಬೇಕಾದ್ದಿಲ್ಲ. ರಿಸರ್ವ್ ಬ್ಯಾಂಕಿನಲ್ಲಿ ಯಥಾಕ್ರಮದಲ್ಲಿ ನಡಸಲಾದ ಸಮೀಕ್ಷೆಯಿಂದ ಬ್ಯಾಂಕು ಮಂಜೂರು ಮಾಡಿದ ಉದರಿ ಮಿತಿಗಳು ಅಗತ್ಯಾಧಾರಿತವಲ್ಲವೆಂದೋ, ಅತಿಯೆಂದೋ ವ್ಯಕ್ತಪಟ್ಟಲ್ಲಿ ಇದನ್ನು ಸರಿಪಡಿಸಲು ಕ್ರಮ ತೆಗೆದುಕೊಳ್ಳಬೇಕೆಂದು ಬ್ಯಾಂಕಿಗೆ ಸಲಹೆ ನೀಡಲಾಗುತ್ತದೆ.

**—ಭಾರತೀಯ ರಿಸರ್ವ್ ಬ್ಯಾಂಕ್ ವಾರ್ಷಿಕ ವರದಿ** (1983–84)

# ಬ್ಯಾಂಕುಗಳ ನಿಧಿನಿರ್ವಹಣೆ

**ಕೆ. ರಮೇಶ್**

ಬ್ಯಾಂಕುಗಳು ತಮ್ಮ ವಹಿವಾಟುಗಳನ್ನು ಸಮರ್ಪಕವಾಗಿ ನಡೆಸಿಕೊಂಡು ಹೋಗಬೇಕಾದರೆ ಅವುಗಳ ನಿಧಿಗಳ ನಿರ್ವಹಣೆ ಮುಖ್ಯವಾದ ಅಂಶವೆಂದು ಪರಿಗಣಿಸಬೇಕು. ಬ್ಯಾಂಕುಗಳ ಒಂದು ಮುಖ್ಯ ಉದ್ದೇಶ ಲಾಭಗಳಿಕೆ. ಲಾಭಗಳಿಕೆ ನಿಧಿಗಳ ನಿರ್ವಹಣೆಯನ್ನು ಅವಲಂಬಿಸಿರುವುದರಿಂದ ಇದು ಪ್ರಾಮುಖ್ಯ ಪಡೆದಿದೆ. ಜಾಣತನದಿಂದ ನಿಧಿ ಹೂಡಿ ಬಂಡವಾಳದಾರರಿಗೆ ಅತ್ಯಂತ ಹೆಚ್ಚಿನ ಲಾಭ ಹಾಗೂ ಠೇವಣಿದಾರರಿಗೆ ಅತಿ ಹೆಚ್ಚಿನ ಭದ್ರತೆ ಗಳಿಸಿಕೊಡುವುದೇ ಉತ್ತಮ ಬ್ಯಾಂಕರನ ಸಲ್ಲಕ್ಷಣವೆಂದು ಭಾವಿಸಲಾಗಿದೆ.

ಪ್ರತಿಯೊಂದು ಬ್ಯಾಂಕಿನ ನಿಧಿಯೂ ಮೂರು ಮುಖ್ಯ ಮೂಲಗಳಿಂದ ಬರುತ್ತದೆ. ಅಂದರೆ ಷೇರು ಬಂಡವಾಳ, ಮೀಸಲು ನಿಧಿಗಳು (ರಿಸರ್ವ್ ಫಂಡ್) ಮತ್ತು ಜನರಿಂದ ಸ್ವೀಕರಿಸಲಾದ ಠೇವಣಿಗಳು. ಈ ಮೂರರಲ್ಲಿ ಕಡೆಯದಾದ, ಜನಗಳಿಂದ ಸ್ವೀಕರಿಸಲಾದ ಠೇವಣಿಗಳೇ ಬ್ಯಾಂಕಿನ ದುಡಿಯುವ ನಿಧಿಯಲ್ಲಿ (ವರ್ಕಿಂಗ್ ಫಂಡ್ಸ್) ಬಹಳ ಹೆಚ್ಚಿನ ಭಾಗದಲ್ಲಿರುತ್ತವೆ. ಈ ನಿಧಿ ಬ್ಯಾಂಕಿನ ಹೊಣೆ. ಏಕೆಂದರೆ ಇದನ್ನು ಸಾಮಾನ್ಯವಾಗಿ ಠೇವಣಿದಾರ ಕೇಳಿದಾಗ ವಾಪಸ್ಸು ನೀಡಬೇಕು. ಅಂತೆಯೇ ಈ ನಿಧಿ ಬ್ಯಾಂಕಿನ ಸ್ವತ್ತೂ ಆಗಿರುತ್ತದೆ. ಹೇಗೆಂದರೆ, ಈ ನಿಧಿಯನ್ನು ಬಡ್ಡಿ ದೊರಕಿಸುವ ಆಸ್ತಿಗಳಲ್ಲಿ ವಿನಿಯೋಜಿಸಬಹುದು. ಬ್ಯಾಂಕಿನ ಸ್ಥಿತಿಗತಿ, ಅದರ ವ್ಯವಹಾರ ಸರಿಯಾಗಿ ನಡೆಯುತ್ತಿದೆಯೇ ಇಲ್ಲವೇ ಎಂಬುದು ಬ್ಯಾಂಕಿನ ನಿಧಿಯನ್ನು ಯಾವ ರೀತಿಯಲ್ಲಿ ಯಾವ ವಿಧವಾದ ಸ್ವತ್ತಿನ ಮೇಲೆ ವಿನಿಯೋಜಿಸಲಾಗಿದೆ ಎಂಬುದನ್ನು ವಿಶ್ಲೇಷಿಸುವುದರಿಂದ ತಿಳಿಯುತ್ತದೆ.

ಎರಡನೆಯದಾಗಿ ಬ್ಯಾಂಕು ತನ್ನ ಭದ್ರತೆಯನ್ನು ಕಾಪಾಡಿಕೊಳ್ಳಬೇಕು. ಇದನ್ನು ಎರಡು ವಿಧಗಳಲ್ಲಿ ಚರ್ಚಿಸಬಹುದು. ದ್ರವತ್ವ ಮತ್ತು ಪರಿವರ್ತನೀಯತೆ. ಬ್ಯಾಂಕಿನ ಯಶಸ್ಸು ಠೇವಣಿದಾರರು ಬ್ಯಾಂಕಿನಲ್ಲಿಟ್ಟಿರುವ ನಂಬಿಕೆಯನ್ನವಲಂಬಿಸಿರುವುದರಿಂದ ಬ್ಯಾಂಕು ಸಾಕಷ್ಟು ಹಣವನ್ನು ನಗದು ರೂಪದಲ್ಲಿ ಇಟ್ಟಿರಬೇಕು. ಬ್ಯಾಂಕು ಹೊಂದಿರುವ ಸ್ವತ್ತುಗಳನ್ನು ಬೇರೆ ಬ್ಯಾಂಕುಗಳಿಗೆ ಅಥವಾ ರಿಸರ್ವ್ ಬ್ಯಾಂಕಿಗೆ ಸುಲಭವಾಗಿ ವರ್ಗಾಯಿಸುವಂತಿರಬೇಕು.

ಆದ್ದರಿಂದ ಒಂದು ಬ್ಯಾಂಕು ಯಾವುದೇ ಸ್ವತ್ತನ್ನು ಪಡೆಯುವಾಗ ಈ ಎರಡು ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು. ಮೊದಲನೆಯದಾಗಿ ಆ ಸ್ವತ್ತು ಷೇರುದಾರರಿಗೆ ಅತಿ ಹೆಚ್ಚು ಲಾಭ ಗಳಿಸಿಕೊಡಬೇಕು. ಹಾಗೂ ದ್ರವ್ಯರೂಪದ ಹಣ ಬ್ಯಾಂಕಿನ ಖಜಾನೆಯಲ್ಲಿ ಠೇವಣಿದಾರರ ಬೇಡಿಕೆಯನ್ನು ಪೂರೈಸಲು ಸಾಕಷ್ಟಿರಬೇಕು.

ಆದರೆ ಈ ಎರಡೂ ವಿಷಯಗಳು ವಿರುದ್ಧ ದಿಕ್ಕಿನಲ್ಲಿರುತ್ತವೆಂದರೆ ತಪ್ಪಾಗಲಾರದು. ಹೆಚ್ಚು ನಗದನ್ನು ಬ್ಯಾಂಕು ತನ್ನ ಖಜಾನೆಯಲ್ಲಿರಿಸಿದರೆ ಆ ಹಣಕ್ಕೆ ಬರುವ ವರಮಾನ ಸೊನ್ನೆ. ಅಥವಾ ಬ್ಯಾಂಕು ತನ್ನ ನಿಧಿಯನ್ನು ಹೆಚ್ಚು ಆದಾಯ ಬರುವ ಸ್ವತ್ತುಗಳಲ್ಲಿ ತೊಡಗಿಸಿ, ಸಾಲಗಳನ್ನು ಕೊಟ್ಟರೆ ಖಜಾನೆಯಲ್ಲಿರುವ ಹಣ ಕಡಿಮೆಯಾಗುತ್ತದೆ. ಇದರಿಂದ ಠೇವಣಿದಾರರಿಗೆ ಬ್ಯಾಂಕಿನಲ್ಲಿ ನಂಬಿಕೆ ಕಡಿಮೆಯಾಗಬಹುದು. ಆದ್ದರಿಂದ ಬುದ್ಧಿವಂತ ಬ್ಯಾಂಕರ್ ದ್ರವತ್ವ ಹಾಗೂ ಲಾಭಪ್ರದತೆ ಇವೆರಡರ ನಡುವೆ ಚಿನ್ನದ ಗೆರೆಯನ್ನು ಎಳೆಯಬೇಕು. ಅಂದರೆ ಬ್ಯಾಂಕಿನ ನಿಧಿನಿರ್ವಹಣೆ ಹೆಚ್ಚು ಲಾಭ ಗಳಿಸಿಕೊಡುವುದರ ಜತೆಗೆ ದ್ರವತ್ವದಿಂದಲೂ ಕೂಡಿರಬೇಕು.

ನಿಧಿಗಳ ನಿರ್ವಹಣೆಯ ವಿಚಾರವನ್ನು ಇನ್ನೊಂದು ರೀತಿಯಲ್ಲಿ ಚರ್ಚಿಸಬಹುದು. ಅದೆಂದರೆ, ಬ್ಯಾಂಕು ತನ್ನ ಠೇವಣಿಯಲ್ಲಿ ಸೇ. 36ರಷ್ಟು ಹಣವನ್ನು ಪರಿನಿಯತ ದ್ರವತ್ವ ಅನುಪಾತದಂತೆ ಕಡ್ಡಾಯವಾಗಿ ರಿಸರ್ವ್ ಬ್ಯಾಂಕಿನಲ್ಲಿ ಅಥವಾ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಲ್ಲಿ ಠೇವಣಿಯಾಗಿಡಬೇಕು. ಇದಕ್ಕೆ ದೊರೆಯುವ ಸರಾಸರಿ ಬಡ್ಡಿ ಸೇ. 7ರಷ್ಟು ಮಾತ್ರ. ಸೇಕಡ 9ರಷ್ಟು ಹಣವನ್ನು ನಗದು ಮೀಸಲು ಅನುಪಾತ ವಿಧಿಯಂತೆ ರಿಸರ್ವ್ ಬ್ಯಾಂಕಿನಲ್ಲಿಡಬೇಕು. ಇದಕ್ಕೆ ಬರುವ ಬಡ್ಡಿ ಅತಿ ಕಮ್ಮಿ. ಇನ್ನು ಉಳಿದ ಸೇಕಡ 58ರಷ್ಟು ಹಣದಲ್ಲಿ ರಿಸರ್ವ್ ಬ್ಯಾಂಕಿನ ಆದೇಶದ ಪ್ರಕಾರ ಸೇಕಡ 40ರಷ್ಟನ್ನು ಆದ್ಯತಾ ವಲಯಗಳಿಗೆ ಸಾಲ ನೀಡಲು ಮೀಸಲಾಗಿಡಬೇಕು.

ಆದ್ಯತಾ ವಲಯ ಸಾಲದಿಂದ ಬರುವ ವರಮಾನ ಕಡಿಮೆ. ಏಕೆಂದರೆ, ಈ ಕ್ಷೇತ್ರಗಳಿಗೆ ಕಡಿಮೆ ಬಡ್ಡಿದರದಲ್ಲಿ ಸಾಲ ನೀಡಬೇಕು. ಸಾಲ ವಸೂಲಿಯೂ ಉತ್ತಮವಾಗಿರುವುದಿಲ್ಲ. ಸಾಲ ಉಸ್ತುವಾರಿ ವೆಚ್ಚವೂ ಹೆಚ್ಚು. ಆದರೆ ಆದ್ಯತಾ ವಲಯಗಳಿಗೆ ಸಾಲ ನೀಡುವುದರಿಂದ ಸಾಮಾಜಿಕ ಏಳಿಗೆಗೆ ಸಹಾಯವಾಗುವುದರಿಂದ (ಸಾಮಾಜಿಕ ಬ್ಯಾಂಕಿಂಗ್) ಅದು ಹೆಚ್ಚು ಲಾಭ ನೀಡದಿದ್ದರೂ ಅದನ್ನು ಪ್ರೋತ್ಸಾಹಿಸಬೇಕಾದ್ದು ಬ್ಯಾಂಕುಗಳ ಕರ್ತವ್ಯ.

ಕಡೆಯದಾಗಿ ಸೇಕಡ 58ರಲ್ಲಿ ಉಳಿದ ಸೇಕಡ 60ರಷ್ಟನ್ನು ಮಾತ್ರ ಬ್ಯಾಂಕುಗಳು ತಮಗೆ ಬೇಕಾದ ಹಾಗೆ ಉಪಯೋಗಿಸಿಕೊಳ್ಳಬಹುದು. ಬ್ಯಾಂಕು ಪಡೆಯುವ ಲಾಭದಲ್ಲಿ ಈ ಹಣ ಬಹಳ ಮುಖ್ಯ ಪಾತ್ರ ವಹಿಸುತ್ತದೆ. ಏಕೆಂದರೆ ಈ ಉಳಿದಿರುವ ಹಣವನ್ನು ಮಾತ್ರ ಬ್ಯಾಂಕುಗಳು ಗರಿಷ್ಠ ಬಡ್ಡಿದರದಲ್ಲಿ (ಸೇಕಡ 18) ಸಾಲ ನೀಡಬಹುದು. ಈ ನಿಧಿ ಬ್ಯಾಂಕಿಗೆ ಅತ್ಯಂತ ಹೆಚ್ಚು ಲಾಭ ನೀಡಿದರೂ ಇದು ದ್ರವತ್ವ ಹಾಗೂ ಸುಭದ್ರತೆಯಿಂದ ಹೊರತಾಗಿರುತ್ತದೆ. ಆದ್ದರಿಂದ ಈ ಕ್ಷೇತ್ರಗಳಲ್ಲಿ ಹಣ ತೊಡಗಿಸುವಾಗ ಬ್ಯಾಂಕುಗಳು ಜಾಗರೂಕವಾಗಿರಬೇಕು.

ರಿಸರ್ವ್ ಬ್ಯಾಂಕಿನ ಹಿಡಿತದಿಂದಾಗಿ ಬ್ಯಾಂಕುಗಳು ತಮ್ಮ ನಿಧಿಗಳ ನಿರ್ವಹಣೆಯಲ್ಲಿ ಸಂಪೂರ್ಣ ಸ್ವಾತಂತ್ರ್ಯ ಹೊಂದಿರುವುದಿಲ್ಲ. ಎಲ್ಲಕ್ಕೂ ರಿಸರ್ವ್ ಬ್ಯಾಂಕಿನ ಸೂಚನೆಯನ್ನೇ ಅನುಸರಿಸಬೇಕಾಗಿದೆ. ಆದ್ದರಿಂದ ಬ್ಯಾಂಕುಗಳು ತಮ್ಮ ನಿಧಿ ಹಂಚಿಕೆಯನ್ನು ಸೂಚಿತ ಕ್ಷೇತ್ರಗಳಲ್ಲಿ ಬುದ್ಧಿವಂತಿಕೆಯಿಂದ ಮಾಡಬೇಕಾಗಿದೆ.

ಕೆ. ರಮೇಶ್, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ಶಾಖೆ



# ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಘ

ಎಂ. ವಿ. ಮುರಳೀಧರ

ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಕೈಗಾರಿಕೆ ಅಥವಾ ಕೃಷಿ, ದೊಡ್ಡ ಕೈಗಾರಿಕೆ ಅಥವಾ ಸಣ್ಣ ಕೈಗಾರಿಕೆ, ಗುಡಿ ಕೈಗಾರಿಕೆ, ನಗರ ಬೆಳವಣಿಗೆ ಅಥವಾ ಗ್ರಾಮ ಉಪನಗರ ಬೆಳವಣಿಗೆ, ಈ ರೀತಿ ಹಲವಾರು ದ್ವಂದ್ವಗಳಲ್ಲಿ ನೀತಿಗಳನ್ನು ನಿರೂಪಿಸದಿದ್ದುದು ಬಹುಶಃ ಮಿಶ್ರ ಆರ್ಥಿಕ ನೀತಿಯ ಪ್ರಭಾವವಿದ್ದರೂ ಇರಬಹುದು. ಅಂದಿನಿಂದ ಇಂದಿನವರೆಗೆ ಹಲವಾರು ಕಾರ್ಯಕ್ರಮಗಳು, ಹಲವಾರು ಯೋಜನೆಗಳು. ಯಾವುದರಲ್ಲೂ ಸರಿಯಾದ ಬಿಗಿ ಇರದೆ ಕೆಲವು ಕಾರ್ಯಕ್ರಮಗಳು ಬಂದ ತೀವ್ರಗತಿಯಲ್ಲೇ ತಮ್ಮ ವೈಶಿಷ್ಟ್ಯ ಕಳೆದುಕೊಂಡವು. ಉದಾ : ಸಮುದಾಯ ಬೆಳವಣಿಗೆ ಯೋಜನೆ, ಗ್ರಾಮಾಭಿವೃದ್ಧಿಗೆ ದಿಢೀರ್ ಯೋಜನೆ.

ಗ್ರಾಮಾಭಿವೃದ್ಧಿಗೆ ನಿಜವಾಗಿ ಒತ್ತುಕೊಟ್ಟ ಕಾರ್ಯಕ್ರಮವೆಂದರೆ 1977ರಲ್ಲಿ ರೂಪಿತಗೊಂಡ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ. ಅಂದು ರೂಪಿತಗೊಂಡ ಯೋಜನೆಯಲ್ಲಿ, ಹಲವಾರು ಸಮಸ್ಯೆಗಳನ್ನು ಬಿಂಬಿಸುವಂಥ 20 ಜಿಲ್ಲೆಗಳನ್ನು ಮಾತ್ರ ಆರಿಸಿಕೊಂಡು, ಯೋಜನೆಯನ್ನು ಪ್ರಾಯೋಗಿಕ ಮಾದರಿಯಲ್ಲಿ ಜಾರಿಗೆ ತರಲಾಯಿತು. ಯಾವುದೇ ಒಂದು ಕಾರ್ಯಕ್ರಮದ ಉಪಯೋಗ ಅಥವಾ ಅನುಪಯೋಗ ಹಾಗೂ ಅದು ದೇಶದ ಆರ್ಥಿಕ ನೀತಿಯ ಮೇಲೆ ಬೀರಬಹುದಾದ ಪರಿಣಾಮ, ಅದಕ್ಕೆ ಬೇಕಾದ ಅಗತ್ಯ ಅಧೋರಚನೆ ಇವೆಲ್ಲವನ್ನೂ ಸುದೀರ್ಘವಾಗಿ ಅಭ್ಯಸಿಸಬೇಕಾದರೆ ಅದಕ್ಕೆ ಅಗತ್ಯವಾದ ಪೂರ್ಣಾವಧಿಯನ್ನು ಪೂರೈಸಬೇಕಾಗಿದೆ. ಅಂದರೆ 1978-79ರಲ್ಲಿ ಸರ್ಕಾರ ನಿರ್ಧರಿಸಿದಂತೆ, ಪ್ರತಿವರ್ಷ 300 ಅಭಿವೃದ್ಧಿ ಕ್ಷೇತ್ರಗಳಂತೆ 1987ರ ವೇಳೆಗೆ ದೇಶದ ಎಲ್ಲ ಕ್ಷೇತ್ರಗಳನ್ನು ತಲುಪುವುದು ಉದ್ದೇಶ. ಈ ಕ್ರಮದಲ್ಲಿ, ಈ ಯೋಜನೆಯ ಪ್ರಗತಿಯನ್ನು ಎಲ್ಲ ದೃಷ್ಟಿಕೋನಗಳಿಂದಲೂ ನಿರ್ವಹಿಸುವ ಅವಕಾಶವಿದ್ದು, ಯಾವುದೇ ಅವಧಿಯಲ್ಲಿ ಇದು ಆರ್ಥಿಕ ಪರಿಸ್ಥಿತಿಯ ಮೇಲೆ ದುಷ್ಪರಿಣಾಮ ಬೀರುವುದಿಲ್ಲವೆಂದು ಭಾವಿಸಲಾಗಿತ್ತು.

ಆದರೆ ಆತುರಾತುರದಲ್ಲಿ ಈ ಕಾರ್ಯಕ್ರಮವನ್ನು ಎಲ್ಲ 5,011 ಅಭಿವೃದ್ಧಿ ಕ್ಷೇತ್ರಗಳಿಗೂ ಹರಡಿರುವುದರಿಂದ ಅಗತ್ಯ ಅಧೋರಚನೆಗಳ ಕೊರತೆಯಿಂದಾಗಿ ಈ ಯೋಜನೆ ಉದ್ದೇಶಿಸಿದ ಫಲವನ್ನು ನೀಡದೆ, ತನ್ನದೇ ಆದ ಹಲವಾರು ಸಮಸ್ಯೆಗಳನ್ನು ಸೃಷ್ಟಿಸಿರುವುದನ್ನು ಕಾಣಬಹುದು.

## ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಘ

ಈ ಬೃಹದಾಕಾರದ ಯೋಜನೆಯ ಅಡಿಯಲ್ಲಿ ಕಾರ್ಯಕ್ರಮಗಳನ್ನು ಅಗತ್ಯವಾದ ರೀತಿಯಲ್ಲಿ ರೂಪಿಸಲು ಹಾಗೂ ಅವನ್ನು ಅರ್ಹ ಫಲಾನುಭವಿಗಳಿಗೆ ಮಾತ್ರ ವಿಸ್ತರಿಸಲು ಸರ್ಕಾರ ಹಲವಾರು ಕ್ರಮಗಳನ್ನು ಕೈಗೊಂಡಿದೆ. ಐದಾರು ಅಭಿವೃದ್ಧಿ ಕ್ಷೇತ್ರಗಳನ್ನು ಒಳಗೊಂಡ ಪ್ರತಿ ಜಿಲ್ಲೆಯಲ್ಲಿ ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಅಭಿಕರಣ (ಡಿಆರ್‌ಡಿಎ), ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಘ (ಡಿಆರ್‌ಡಿಎಸ್) ಜಿಲ್ಲಾ ಕೈಗಾರಿಕಾ ಕೇಂದ್ರ (ಡಿಐಸಿ) ಇವು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಕೈಗೊಂಡ ಯೋಜನೆಗಳು ನಿರೀಕ್ಷಿಸಿದ ಹಾದಿಯಲ್ಲಿ ಸಾಗಿ ಗುರಿ ಮುಟ್ಟುವಂತೆ, ಸರ್ವತೋಮುಖವಾದ ಪ್ರಗತಿ ಸಾಧಿಸುವಂತೆ ಮಾಡುವ ಉದ್ದೇಶದಿಂದ ರೂಪಿತವಾಗಿವೆ.

ಜಿಲ್ಲಾ ಗ್ರಾಮೀಣ ಅಭಿವೃದ್ಧಿ ಸಂಘವನ್ನು 1979ರ ಏಪ್ರಿಲ್ 1ರಂದು ಸ್ಥಾಪಿಸಲಾಯಿತು. ಈ ಸಂಸ್ಥೆ ಭಾರತದ ಕೃಷಿರಂಗವನ್ನು ಆಧುನಿಕಗೊಳಿಸಿ ಕೃಷಿ ಕಾರ್ಯ ಲಾಭದಾಯಕವಾಗುವಂತೆ ಪರಿವರ್ತಿಸಲು ಅಗತ್ಯವೆನಿಸುವ ಎಲ್ಲ ಕಾರ್ಯಕ್ರಮಗಳನ್ನು ತನ್ನ ವ್ಯಾಪ್ತಿಯಲ್ಲಿ ಒಳಗೊಂಡಿದೆ.

## ಧ್ಯೇಯೋದ್ದೇಶಗಳು

1 ಬೆಳವಣಿಗೆ ಸಾಧಿಸಬೇಕಾದ ಗ್ರಾಮ ಅಥವಾ ಗ್ರಾಮಗುಚ್ಛಗಳನ್ನು ಪ್ರತಿಯೊಂದು ಅಭಿವೃದ್ಧಿ ಕ್ಷೇತ್ರದಲ್ಲಿಯೂ ಗುರುತಿಸುವುದು.

2 ಸಣ್ಣ ರೈತರು, ಅತಿಸಣ್ಣ ರೈತರು, ಕೃಷಿ ಕಾರ್ಮಿಕರು, ಗ್ರಾಮೀಣ ಕುಶಲಕರ್ಮಿಗಳು, ಅನುಸೂಚಿತ ಜಾತಿ ಹಾಗೂ ಪಂಗಡಗಳಿಗೆ ಸೇರಿದವರು ಇಂಥವರ ಕುಟುಂಬಗಳನ್ನು ಗುರುತಿಸಿ ಅವರನ್ನು ದಾರಿದ್ರ್ಯ ರೇಖೆಯಿಂದ ಮೇಲೆತ್ತಲು ಪ್ರಯತ್ನಿಸುವುದು.

3 ಅವರಿಗಾಗಿ ಈ ಮುಂದಿನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು :

(ಅ) ಸಣ್ಣ ನೀರಾವರಿಗಾಗಿ ಕೊಳವೆ ಬಾವಿ ತೋಡಿಸುವುದು, ಹಳೆಯ ರೀತಿಯ ಬಾವಿಗಳಿಗೆ ಕಲ್ಲು ಕಟ್ಟಿಸುವುದು, ಹೆಚ್ಚು ಆಳ ತೋಡಿಸುವುದು, ಹೂಳೆತ್ತಿಸುವುದು, ವಿದ್ಯುಚ್ಛಕ್ತಿ ಅಥವಾ ಯಂತ್ರಗಳ ಬಳಕೆ ಇತ್ಯಾದಿ.

(ಆ) ಪಶುಸಂಗೋಪನ—ಉತ್ತಮ ತಳಿಯ ಮತ್ತು ಸುಧಾರಿತ ಹಸು, ಎಮ್ಮೆ, ಕುರಿ, ಕೋಳಿ, ಹಂದಿ, ಎತ್ತು ಇವನ್ನು ಖರೀದಿಸಿ ಸಾಲದ ರೂಪದಲ್ಲಿ ಹಂಚಿಸುವುದು.

(ಇ) ಗುಡಿ ಕೈಗಾರಿಕೆ, ಖಾದಿ, ತಂಬಾಕು, ಖಾದ್ಯ ತೈಲಗಳ ತಯಾರಿಕೆ, ಜೇನು ಸಾಕಾಣಿಕೆ, ಮಡಕೆ ಕುಡಿಕೆ ತಯಾರಿಕೆ, ಸುಣ್ಣ ತಯಾರಿಕೆ ಮುಂತಾದ ಗ್ರಾಮ ಕೈಗಾರಿಕೆಗಳಿಗೆ ಪ್ರೋತ್ಸಾಹ ಕೊಡುವುದು.

(ಈ) ಸೌಲಭ್ಯಗಳು ಅಥವಾ ವ್ಯಾಪಾರಗಳ ಅಭಿವೃದ್ಧಿ—ಎತ್ತಿನ ಗಾಡಿಗಳು, ಚರ್ಮ ಸಾಮಗ್ರಿಗಳು, ಬಟ್ಟೆ ಹೊಲಿಯುವ ಯಂತ್ರ, ಸಣ್ಣ ರೀತಿಯ ಯಂತ್ರಗಳನ್ನು ಸರಿಪಡಿಸಲು ಬೇಕಾಗುವ ಕಾರ್ಯಾಗಾರ, ಈ ರೀತಿಯ

ಎಂ. ವಿ. ಮುರಳೀಧರ, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಹಿರಿಯೂರು

ಸೌಲಭ್ಯಗಳನ್ನು ಒದಗಿಸಿ ವ್ಯಾಪಾರವನ್ನು ಅಭಿವೃದ್ಧಿಗೊಳಿಸುವುದು.

(ಉ) ಇತರ—ರೇಷ್ಮೆ ಕೈಗಾರಿಕೆ, ಮೀನು ಸಾಕಣೆ, ತೋಟಗಾರಿಕೆ ಇವನ್ನು ಅಭಿವೃದ್ಧಿಪಡಿಸುವುದು.

4 ಮೇಲೆ ಸೂಚಿಸಿದ ಕಾರ್ಯಕ್ರಮಗಳನ್ನು ಕೈಗೊಳ್ಳಲು ಮುಂದೆ ಬರುವ ಅರ್ಹ ಅಭ್ಯರ್ಥಿಗಳಿಗೆ ಈ ಮುಂದಿನ ದರದಲ್ಲಿ ಸಹಾಯಧನ ಒದಗಿಸುವುದು.

| | ಸಹಾಯ ಧನ | ಸಹಾಯ ಧನದ ಗರಿಷ್ಠ ಮಿತಿ |
|---|---|---|
| ಸಣ್ಣ ರೈತರು | ಸೇ 25 | ರೂ 3,000<br>ಕ್ಷಾಮಪೀಡಿತ ಎಂದು ಗುರುತಿಸಲ್ಪಟ್ಟ ಕ್ಷೇತ್ರಗಳಲ್ಲಿ 4,000 |
| ಅತಿಸಣ್ಣ ರೈತರು ಅಥವಾ ಕೃಷಿ ಕಾರ್ಮಿಕರು | ಸೇ 33.33 | 5,000 |
| ಅನುಸೂಚಿತ ಜಾತಿ ಪಂಗಡ | ಸೇ 50 | 5,000 |
| ಗ್ರಾಮೀಣ ಕುಶಲಕಾರ್ಮಿಕರು | ಸೇ 33.33 | 3,000 |
| ನಿರುದ್ಯೋಗಿ ಯುವಕರಿಗೆ ತರಬೇತಿನೀಡುವ ಯೋಜನೆ | ಅದರ ಖರ್ಚನ್ನು ಪೂರ್ಣವಾಗಿ ವಹಿಸಲಾಗುವುದು | |

**ಕಾರ್ಯವಿಧಾನ**

**ಹಂತ 1:** ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ವ್ಯಾಪ್ತಿಗೆ ಒಳಪಡುವ ಗ್ರಾಮ ಅಥವಾ ಗ್ರಾಮಗುಚ್ಛಗಳನ್ನು ಗುರುತಿಸುವುದು. ಹೀಗೆ ಗುರುತಿಸುವಾಗ ಅಲ್ಲಿಯ ಅಧೋರಚನೆಗೂ ಅಲ್ಲಿಯ ವ್ಯಾಪ್ತಿಗೆ ಒಳಪಡುವ ಬ್ಯಾಂಕ್ ಮತ್ತು ಹಣಕಾಸು ಸಂಸ್ಥೆಗಳ ಅಭಿಪ್ರಾಯಗಳಿಗೂ ಪೂರ್ಣ ಗಮನ ಕೊಡುವುದು.

**ಹಂತ 2:** ಗುರುತಿಸಲಾದ ಹಳ್ಳಿಗಳಲ್ಲಿರುವ ದುರ್ಬಲ ವರ್ಗದವರನ್ನು ಅವರ ಅರ್ಹತೆಗೆ ತಕ್ಕಂತೆ ಹಾಗೂ ಆ ಹಳ್ಳಿಯ ಅಧೋರಚನೆಗೆ ಸಂಬಂಧಪಟ್ಟಂತೆ ಈ ಮುಂದಿನ ಕಾರ್ಯಕ್ರಮಗಳಲ್ಲಿ ವಿಭಾಗಿಸುವುದು:

(ಅ) ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ

(ಆ) ಗ್ರಾಮೀಣ ಉದ್ಯೋಗ ರಾಷ್ಟ್ರೀಯ ಯೋಜನೆ

(ಇ) ಗ್ರಾಮೀಣ ಉದ್ಯೋಗ ರಾಷ್ಟ್ರೀಯ ಯೋಜನೆ (ಗಿರಿಜನಕ್ಕಾಗಿ)

(ಈ) ಗ್ರಾಮೀಣ ಉದ್ಯೋಗ ಖಾತರಿ ಯೋಜನೆ

**ಹಂತ 3:** ಕಾರ್ಯಕ್ರಮವನ್ನು ಆದಷ್ಟು ತೀವ್ರವಾಗಿ ಜಾರಿಗೆ ತರಲು ಸಂಘ ಎಲ್ಲ ಹಂತಗಳಲ್ಲಿಯೂ ಜಾಗರೂಕತೆ ವಹಿಸುತ್ತದೆ. ಈ ಸಂಸ್ಥೆಯ ಮುಖ್ಯ ಕಾರ್ಯವಾದ ಸಹಾಯಧನ ಬಿಡುಗಡೆಯನ್ನು ಈ ಮುಂದಿನ ರೀತಿಯಲ್ಲಿ ನಿರ್ವಹಿಸಲಾಗುತ್ತದೆ:

ಗುರುತಿಸುವಿಕೆ ಕಾರ್ಯಕ್ರಮ, ಸಾಲಕ್ಕೆ, ಮತ್ತು ಸಹಾಯಧನಕ್ಕೆ ಪ್ರತ್ಯೇಕ ಅರ್ಜಿಗಳ ತಯಾರಿಕೆ, ಬ್ಯಾಂಕಿನಿಂದ ಸಾಲ ಮಂಜೂರಾದ ಬಗ್ಗೆ ಪತ್ರ. ಈ ಕಾರ್ಯಗಳು ಮುಗಿದ ಮೇಲೆ ಸಂಘ ಸಂಬಂಧಿಸಿದ ಬ್ಯಾಂಕುಗಳಲ್ಲಿ ಉಳಿತಾಯ ಖಾತೆಯಲ್ಲಿ ಮೊದಲೇ ಇಡಲಾದ ಹಣವನ್ನು ಸಹಾಯಧನಕ್ಕೆ ಬಳಸಿಕೊಳ್ಳಲು ಆದೇಶ ನೀಡುತ್ತದೆ. ಈ ರೀತಿ ಸಾಲದ ಹಣ ಮತ್ತು ಸಹಾಯಧನ ಎರಡನ್ನೂ ಸೇರಿಸಿ ಫಲಾನುಭವಿಗಳಿಗೆ ಸಾಲ ನೀಡಲಾಗುತ್ತದೆ.

ಈ ಮುಂದಿನ ಅಂಶಗಳನ್ನೊಳಗೊಂಡ ವಿವರಣಗಳನ್ನು ಬ್ಯಾಂಕ್ ತಿಂಗಳಿಗೊಮ್ಮೆ ಸಂಘಕ್ಕೆ ಕಳುಹಿಸಿಕೊಡುತ್ತದೆ:

1 ಬಂದ ಅರ್ಜಿಗಳ ಸಂಖ್ಯೆ,

2 ಮಂಜೂರು ಮಾಡಲಾದ ಫಲಾನುಭವಿಗಳ ಸಂಖ್ಯೆ,

3 ಉಳಿದವರು ಹಾಗೂ ಬೇಡಿಕೆ ಪಟ್ಟಿಯಲ್ಲಿರುವವರ ಸಂಖ್ಯೆ.

ನಿರೀಕ್ಷಿತ ಮಟ್ಟದಲ್ಲಿ ಯೋಜನೆಗಳು ಯಶಸ್ವಿಯಾದಲ್ಲಿ ಗ್ರಾಮೀಣ ಜನರು ಅತ್ಯಂತ ಸುಖಿಗಳಾಗುತ್ತಾರೆ.



## ಪ್ರಕ್ಷುಬ್ಧಮಯ ದಿನಗಳು

ಈಗಿನ ದಿನಗಳು ಪ್ರಕ್ಷುಬ್ಧಮಯ. ಭವಿಷ್ಯ ಬಿರುಗಾಳಿಯಿಂದ ಕೂಡಿರುತ್ತದೆಂದೇ ತೋರುತ್ತಿದೆ. ಭಾರತದ ಜನಕೋಟಿಯ ಎಲ್ಲ ವರ್ಗಗಳೂ ಎಚ್ಚತ್ತು ಎದ್ದುನಿಂತಿವೆ, ತಂತಮ್ಮ ಹಿತಗಳ ರಕ್ಷಣೆಗಾಗಿ ಸಜ್ಜಾಗಿವೆ. ಗ್ರಾಮೀಣ ಬಡಜನರಲ್ಲಿ ಇದುವರೆಗೂ ಅರಿವು ಇರಲಿಲ್ಲ: ತಮ್ಮ ಹಿತಗಳನ್ನು ಕುರಿತ ಅರಿವಲ್ಲ, ತಮ್ಮ ವಿರುದ್ಧ ಕಾರ್ಯಪ್ರವೃತ್ತವಾಗಿರುವ ಸಾಮಾಜಿಕ ರಾಜಕೀಯ ಬಲಗಳ ಅರಿವು. ತಮ್ಮನ್ನು ಅದುಮಿಟ್ಟಿರುವ ಬಲಗಳ ಮೂಲಗಳನ್ನು ಗುರುತಿಸಲು ಅವರು ತೊಡಗಿದ್ದಾರೆ. ಶೂನ್ಯದೊಳಕ್ಕೆ ಬಿಸಾಡಲ್ಪಟ್ಟ ಬಹುತೇಕ ವಿರೋಧ ಪಕ್ಷಗಳು ಗಟ್ಟಿಯಾಗಿ ಕಾಲೂರಿ ನಿಲ್ಲಲು ಹವಣಿಸುತ್ತಿವೆ. ಹತಾಶೆಯಿಂದ ಅವು ಗ್ರಾಮೀಣ ಜನಸಮೂಹದ ನಡುವೆ ಕಾಲುಗಳನ್ನು ತೂಗುಬಿಟ್ಟಿವೆ. ಅವು ಜೋರಾಗಿ ಪ್ರತಿಭಟಿಸುತ್ತಿವೆ, ಗ್ರಾಮಾಭಿವೃದ್ಧಿ ಕುರಿತ ಆದರ್ಶದ ಮಾತುಗಳನ್ನಾಡುತ್ತಿವೆ. ಇವೆಲ್ಲದರ ಉದ್ದೇಶವೊಂದೇ: ತಂತಮ್ಮ ಸ್ವಾರ್ಥಸಾಧನೆ, ಗ್ರಾಮಾಂತರ ಜನತೆಯಲ್ಲಿ ಬಹುಸಂಖ್ಯಾತವಾಗಿರುವ ಬಡರೈತರು ಹಾಗೂ ಭೂರಹಿತ ಕಾರ್ಮಿಕರಲ್ಲಿ ಉದಿತೋದಿತವಾಗಿರುವ ವರ್ಗಪ್ರಜ್ಞೆಯನ್ನು ಅಳಿಸಿಹಾಕುವ ಸಲುವಾಗಿ ಕಾರ್ಯಪ್ರವೃತ್ತವಾಗಿವೆ. ಇಂದು ಜೋರಾಗಿ ಕೂಗುತ್ತಿರುವ ಗ್ರಾಮೀಣ ಜನರ ನಾಯಕತ್ವದಲ್ಲಿರುವವರೆಂದರೆ ಪಟ್ಟಣಿಗ ಬುದ್ಧಿಜೀವಿಗಳು, ಹಾಗೂ ಶ್ರೀಮಂತ ರೈತರ ಮೂಲ ಬೆಂಬಲ ಹೊಂದಿರುವಂಥವರು.

—ಎಸ್. ಕೆ. ಲೋಟ್ಲಿಕಾರ್ (ಇಕನಾಮಿಕ್ ಟೈಮ್ಸ್, ಜನವರಿ 31, 1981)

# ಖಾಸಗಿ ಹಣಕಾಸು ನಿಗಮಗಳು

**ಕೆ. ಟಿ. ಪಂಪಾಪತಿ**

ಈಚಿನ ವರ್ಷಗಳಲ್ಲಿ ವಾಣಿಜ್ಯ ಬ್ಯಾಂಕುಗಳು ತಮ್ಮ ಸೇವಾ ಕಾರ್ಯಗಳನ್ನು ತೀವ್ರವಾಗಿ ವಿಸ್ತರಿಸುತ್ತಿವೆ. ವರ್ಷಕ್ಕೆ ಸುಮಾರು 2,400ಕ್ಕೂ ಹೆಚ್ಚು ಶಾಖೆಗಳನ್ನು ತೆರೆಯುತ್ತ ಹೊಸ ವಿಕ್ರಮವನ್ನೇ ಸಾಧಿಸುತ್ತಿವೆ. 1969ರಲ್ಲಿ ಕೇವಲ 8,262 ಶಾಖೆಗಳನ್ನು ಹೊಂದಿದ್ದ ವಾಣಿಜ್ಯ ಬ್ಯಾಂಕುಗಳು ಈಗ 45,000ಕ್ಕೂ ಹೆಚ್ಚು ಶಾಖೆಗಳನ್ನು ಹೊಂದಿ ತಮ್ಮ ಸೇವೆಯನ್ನು ಇನ್ನೂ ವಿಸ್ತರಿಸಲು ಪ್ರಯತ್ನಿಸುತ್ತಿವೆ. ಆದಾಗ್ಯೂ ಇವು ಭಾರತಾದ್ಯಾಂತ ಇರುವ ಆರು ಲಕ್ಷ ಹಳ್ಳಿಗಳಿಗೆ ಮತ್ತು ಇತರ ಪಟ್ಟಣಗಳಿಗೆ ತಮ್ಮ ಸೇವಾ ಕಾರ್ಯಗಳನ್ನು ವಿಸ್ತರಿಸಲು ಇನ್ನೂ ಸಾಧ್ಯವಾಗಿಲ್ಲ. ನಿಯಮಕ್ಕೊಳಪಡದ ಹಣಕಾಸು ಸಂಸ್ಥೆಗಳಿಗೆ, ಚೀಟಿ ವ್ಯವಹಾರಸ್ಥರಿಗೆ, ಷರಾಫದಾರರಿಗೆ, ಮತ್ತಿತರ ಬಡ್ಡಿ ವ್ಯಾಪಾರಿಗಳಿಗೆ ಈ ಪರಿಸ್ಥಿತಿ ಸಹಾಯಕವಾಗಿದೆ. ಈ ಒಂದು ಸುಸಂಧಿಯನ್ನು ಉಪಯೋಗಿಸಿಕೊಂಡು ಈ ಎಲ್ಲ ಸಂಸ್ಥೆಗಳ ಮತ್ತು ವ್ಯಾಪಾರಸ್ಥರ ಕಲಾಪಗಳು ದೇಶದ ಎಲ್ಲೆಡೆ ವಿಸ್ತರಿಸುತ್ತಿವೆ.

1971ರಲ್ಲಿ ಬ್ಯಾಂಕಿಂಗ್ ಆಯೋಗ ನೇಮಿಸಿದ ಒಂದು ಅಧ್ಯಯನ ತಂಡ ನಿಯಮಕ್ಕೊಳಪಡದ ಕೆಲವು ಹಣಕಾಸು ಸಂಸ್ಥೆಗಳನ್ನು ಗುರುತಿಸಿ ಅವನ್ನು ಬೆಂಗಳೂರು ರೀತಿಯ ಹಣಕಾಸು ನಿಗಮಗಳೆಂದು ಹೆಸರಿಸಿತು. ಆದರೆ ಅದು ಅವುಗಳ ಬಗ್ಗೆ ಆಳವಾಗಿ ಅಧ್ಯಯನ ಮಾಡಲಿಲ್ಲ. ಸಮಯದ ಅಭಾವದಿಂದಾಗಿ ಪೂರ್ತಿ ಮಾಹಿತಿಯನ್ನೂ ಪಡೆಯಲಿಲ್ಲ. ಹೀಗಾಗಿ ಆ ಕೆಲಸ ಅಪೂರ್ಣವಾಯಿತು.

ಈ ಅಪೂರ್ಣ ಕಾರ್ಯವನ್ನು ಮದರಾಸಿನ ಹಣಕಾಸು ನಿರ್ವಹಣ ಮತ್ತು ಸಂಶೋಧನ ಸಂಸ್ಥೆಯ (ಇನ್‌ಸ್ಟಿಟ್ಯೂಟ್ ಆಫ್ ಫೈನಾನ್ಷಿಯಲ್ ಮ್ಯಾನೇಜ್‌ಮೆಂಟ್ ಮತ್ತು ರಿಸರ್ಚ್—ಐಎಫ್‌ಎಂಆರ್) ಡಾ. ಸಿ. ಪಿ. ಎಸ್. ನಾಯರ್ ಅವರು ಯಶಸ್ವಿಯಾಗಿ ಪೂರ್ತಿಗೊಳಿಸಿ ಒಟ್ಟಾಗಿ ಅವನ್ನು 'ಹಣಕಾಸು ನಿಗಮ'ಗಳು ಅಥವಾ ನಿಯಮಕ್ಕೊಳಪಡದ ಬ್ಯಾಂಕುಗಳೆಂದು ಹೆಸರಿಸಿ, ಅವುಗಳ ಬೆಳೆವಣಿಗೆ ಮತ್ತು ಕಾರ್ಯಚಟುವಟಿಕೆಗಳನ್ನು ಅರಿತು ಅವನ್ನು ನಿಯಮಕ್ಕೊಳಪಡಿಸಲು ಸಲಹೆಗಳನ್ನು ನೀಡಿದ್ದಾರೆ. ಡಾ. ನಾಯರ್ ಅವರ ಅಭಿಪ್ರಾಯದಂತೆ, 1980ರ ಮಾರ್ಚ್‌ಕೊನೆಯಲ್ಲಿ ಇಂಥ ನಿಗಮಗಳ ಸಂಖ್ಯೆ 3,071ಕ್ಕೂ ಹೆಚ್ಚು ಇತ್ತು. ಇವುಗಳ ಒಟ್ಟು ಠೇವಣಿ ಸುಮಾರು ರೂ. 652 ಕೋಟಿ ಮತ್ತು ಒಟ್ಟು ಸಾಲ ಸುಮಾರು ರೂ. 609 ಕೋಟಿ. ಇವುಗಳ ಸಾಲ ಒಟ್ಟು ಠೇವಣಿಯ ಸೇಕಡ 95.4ರಷ್ಟು ಇದೆ ಎಂದು ಅವರು ಹೇಳಿದ್ದಾರೆ. ಆದರೆ ಒಂದು ಆಶ್ಚರ್ಯಕರ ಸಂಗತಿ ಎಂದರೆ ಇವುಗಳ ಕಾರ್ಯಚಟುವಟಿಕೆಯಲ್ಲಿ ಸೇಕಡ 90ಕ್ಕೂ ಹೆಚ್ಚು ಭಾಗ ದಕ್ಷಿಣ ಭಾರತಕ್ಕೆ ಸೀಮಿತವಾಗಿದೆ. ಇವುಗಳ ಬೆಳವಣಿಗೆಯಲ್ಲಿ ತಮಿಳುನಾಡು ಮೊದಲನೆಯ ಸ್ಥಾನದಲ್ಲಿದ್ದು ಅನಂತರದ ಸ್ಥಾನಗಳನ್ನು ಅನುಕ್ರಮವಾಗಿ ಕೇರಳ, ಕರ್ನಾಟಕ ಮತ್ತು ಆಂಧ್ರ ಪ್ರದೇಶಗಳು ಪಡೆದಿವೆ ಎಂದು ಅವರು ತಿಳಿಸಿದ್ದಾರೆ.

ಮೇಲುನೋಟಕ್ಕೆ ಈ ಹಣಕಾಸು ನಿಗಮಗಳು (ಫೈನಾನ್ಸ್ ಕಾರ್ಪೊರೇಷನ್) ವಾಣಿಜ್ಯ ಬ್ಯಾಂಕುಗಳ ಒಟ್ಟು ಶಾಖಾ ವಿಸ್ತರಣೆಯಲ್ಲಿ ಸೇಕಡ 10.17ರಷ್ಟಿದ್ದು ಠೇವಣಿಗಳಲ್ಲಿ ಸುಮಾರು 2·27%ರಷ್ಟು, ಮತ್ತು ಸಾಲ ನೀಡುವುದರಲ್ಲಿ ಸೇಕಡ 3·19%ರಷ್ಟು ಪಾಲು ಪಡೆದಿವೆ. ಆದರೆ, ಈ ಸಂಸ್ಥೆಗಳು ದಕ್ಷಿಣ ಭಾರತದಲ್ಲೇ ತಮ್ಮ ಕಾರ್ಯವನ್ನು ಸಾಂದ್ರೀಕೃತಗೊಳಿಸಿಕೊಂಡಿವೆಯಲ್ಲದೆ ಇಲ್ಲಿ ಇವು ಸುಮಾರು ರೂ. 650 ಕೋಟಿಗಳಷ್ಟು ಠೇವಣಿಯನ್ನು ಹೊಂದಿರುವುದರಿಂದ, ದಕ್ಷಿಣ ಭಾರತದಲ್ಲಿ ಒಟ್ಟು ರೂ. 5,936 ಕೋಟಿಗಳಷ್ಟು ಠೇವಣಿಯನ್ನು ಹೊಂದಿರುವ ವಾಣಿಜ್ಯ ಬ್ಯಾಂಕುಗಳಿಗೆ ಇವು ಸವಾಲಾಗಿ ಪರಿಣಮಿಸಿವೆ.

ಲಾಭ ಒಂದೇ ಇವುಗಳ ಮುಖ್ಯ ಗುರಿ. ಇವು ಸಾಮಾನ್ಯವಾಗಿ ಪಾಲುದಾರಿಕೆ ಸಂಸ್ಥೆಗಳು. ತಮಗೆ ಬೇಕಾದ ಬಂಡವಾಳವನ್ನು ಇವು ಠೇವಣಿಗಳ ಮೂಲಕ ಮತ್ತು ಇತರ ಸಾಲಗಳ ಮೂಲಕ ಸಂಗ್ರಹಿಸುತ್ತಿವೆ. 1932ರ ಭಾರತದ ಪಾಲುದಾರಿಕೆ ಅಧಿನಿಯಮದ ಅನ್ವಯ ನೋಂದಾಯಿತವಾದ ಈ ಸಂಸ್ಥೆಗಳ ಕಾರ್ಯಗಳು ಇವುಗಳ ಪಾಲುದಾರರಲ್ಲೇ ಸಾಮಾನ್ಯವಾಗಿ ಹಂಚಿಕೆಯಾಗಿರುತ್ತವೆ. ಇವುಗಳ ಪಾಲುದಾರರಲ್ಲಿಯೇ ವ್ಯವಸ್ಥಾಪಕ ನಿರ್ದೇಶಕ ಮತ್ತು ಇತರರನ್ನು ಆರಿಸಿಕೊಳ್ಳಲಾಗಿರುತ್ತದೆ. ಸಾಲ ನೀಡುವಲ್ಲಿ ಎಲ್ಲ ಪಾಲುದಾರನೂ ಒಟ್ಟಾಗಿ ಆಲೋಚಿಸಿ, ತೀರ್ಮಾನ ಕೈಗೊಳ್ಳುತ್ತಾರೆ. ಠೇವಣಿಗಳನ್ನು ಮಾತ್ರ ಸಮಾಜದ ಎಲ್ಲರಿಂದಲೂ ಸ್ವೀಕರಿಸಲಾಗುತ್ತದೆ. ಸಾಲವನ್ನು ಪಾಲುದಾರರ ಶಿಫಾರಸ್ಸಿನ ಮೇಲೆ ಅಥವಾ ಅವರ ಪರಿಚಯಸ್ಥರಿಗೆ ನೀಡಲಾಗುತ್ತದೆ. ಈ ಸಂಸ್ಥೆಗಳು ತಮ್ಮ ಸಾಲವನ್ನು ಬೀಡಿ ಅಂಗಡಿಯಿಂದ ಬಸ್ಸಿನವರೆಗೆ, ಕಿರಾಣಿ ವ್ಯಾಪಾರಸ್ಥರಿಂದ ಕೃಷಿ ಮತಿತ್ತರ ಕಾರ್ಯನಿರತರವರೆಗೆ ಎಲ್ಲರಿಗೂ ಅತಿ ಹೆಚ್ಚಿನ ಬಡ್ಡಿಗೆ ನೀಡುತ್ತಾ ತಮ್ಮ ಲಾಭವನ್ನು ಹಲವುಮಡಿಗೊಳಿಸುತ್ತಾ ನಡೆದಿವೆ. ಈ ಸಂಸ್ಥೆಗಳಲ್ಲಿ ಸಾಲ ನೀಡುವ ಕಾರ್ಯ ಕೇವಲ 2 ಅಥವಾ 3 ತಾಸುಗಳಲ್ಲಿ ಮುಗಿಯುವುದರಿಂದ ಬಡ್ಡಿಯಲ್ಲಿ ಹೆಚ್ಚಳವಿರುವಾಗ್ಯೂ ಸಾಕಷ್ಟು ಜನರು ತಮ್ಮ ಅವಸರಕ್ಕನುಗುಣವಾಗಿ ಸುಲಭವಾಗಿ ಇವುಗಳ ಬಲೆಗೆ ಸಿಲುಕುತ್ತಿದ್ದಾರೆ.

ಇವು ಹಲವು ವಿಧಗಳಲ್ಲಿ ವಾಣಿಜ್ಯ ಬ್ಯಾಂಕುಗಳನ್ನು ಹೋಲುತ್ತವೆ. ಇವು ವಾಣಿಜ್ಯ ಬ್ಯಾಂಕುಗಳಂತೆ ನಾನಾ ಬಗೆಯ ಠೇವಣಿಗಳನ್ನು ಸ್ವೀಕರಿಸುತ್ತ, ಗ್ರಾಹಕರ ಠೇವಣಿಗಳಿಗೆ ಪಾಸ್ ಪುಸ್ತಕ ಮತ್ತು ನಗದು ಪತ್ರಗಳನ್ನು ನೀಡುವುವಲ್ಲದೆ, ಕಾಲಕಾಲಕ್ಕೆ ಅವುಗಳನ್ನು ಯಾವುದೇ ಸೋಡಿಯಿಲ್ಲದೆ ಹಿಂಪಡೆಯುವ ಸೌಲಭ್ಯಗಳನ್ನು ಕಲ್ಪಿಸಿರುವುವಲ್ಲದೆ, ಜಾಮೀನು ಸಹಿತ ಅಥವಾ ಜಾಮೀನು ಇಲ್ಲದೆಯೇ ಸಾಲವನ್ನು ನೀಡುತ್ತವೆ. ತಮ್ಮ ಗ್ರಾಹಕರ ಚೆಕ್ಕುಗಳನ್ನೂ

ಕೆ. ಟಿ. ಪಂಪಾಪತಿ, ಭಾರತೀಯ ಸ್ಟೇಟ್ ಬ್ಯಾಂಕ್, ಉಗಾರ ಬದ್ರುಕ್

ಹುಂಡಿಗಳನ್ನೂ ವಟಾವಣೆ ಮಾಡುತ್ತವೆ. ಆದರೆ, ಇವು ವಾಣಿಜ್ಯ ಬ್ಯಾಂಕುಗಳಂತೆ ಗ್ರಾಹಕರಿಗೆ ಚೆಕ್ಕು ಪುಸ್ತಕದ ಸೌಲಭ್ಯ ನೀಡುವುದಿಲ್ಲ. ಗ್ರಾಹಕರ ಚಾಲ್ತಿ ಠೇವಣಿಗಳ ಮೇಲೆ ಬಡ್ಡಿಯನ್ನು ನೀಡುತ್ತವೆ. ಹಲವು ಅಂಶಗಳಲ್ಲಿ ಇವು ಭಿನ್ನವಾಗಿವೆ.

ಈ ಸಂಸ್ಥೆಗಳು ತಮ್ಮ ಠೇವಣಿಗಳಿಗಾಗಿ ವ್ಯಾಪಕವಾಗಿ ಜಾಹಿರಾತುಗಳನ್ನು ನೀಡುತ್ತ, ಜನರನ್ನು ಆಕರ್ಷಿಸುವುವಲ್ಲದೆ, ಅವರ ಉಳಿತಾಯ ಖಾತೆಯ ಮೇಲೆ ಸೇಕಡ 7ರಿಂದ 9ರ ಬಡ್ಡಿಯನ್ನು ಮತ್ತು ಮುದ್ದತು ಅಥವಾ ಇತರ ಕಾಲಾವಧಿ ಠೇವಣಿಗಳ ಮೇಲೆ ಸೇಕಡ 10ಕ್ಕೂ ಮೇಲೆ, ಹಲವೇಳೆ 18ಕ್ಕೂ ಹೆಚ್ಚು ಬಡ್ಡಿ ನೀಡುತ್ತವೆ. ವಾಣಿಜ್ಯ ಬ್ಯಾಂಕುಗಳು ನೀಡುವ ಬಡ್ಡಿಗಿಂತ ಅಧಿಕ ಬಡ್ಡಿಯನ್ನು ನೀಡುವುದರಿಂದ ಸಮಾಜದ ಎಲ್ಲ ವರ್ಗಗಳ ಜನರಿಂದ ಠೇವಣಿಗಳನ್ನು ಸಂಗ್ರಹಿಸುವಲ್ಲಿ ಯಶಸ್ವಿಯಾಗಿವೆ. ಇವುಗಳಲ್ಲಿ ಹಣ ತೊಡಗಿಸುವವರಲ್ಲಿ ಮಧ್ಯಮ ವರ್ಗದ ಜನರು, ವೈದ್ಯರು, ವಕೀಲರು, ಪಿಂಚಣಿದಾರರು ಮತ್ತು ಜಮೀನುದಾರರೇ ಹೆಚ್ಚಾಗಿ ಇರುವರೆಂದು ಕಂಡುಬರುತ್ತದೆ.

ಈ ಸಂಸ್ಥೆಗಳು ಎಲ್ಲಾ ಕ್ಷೇತ್ರಗಳಿಗೂ ಸಾಲ ನೀಡುತ್ತವೆ. ಇವು ನೀಡುವ ಒಟ್ಟು ಸಾಲದಲ್ಲಿ ಸೇಕಡ 36.6ರಷ್ಟನ್ನು ವಾಣಿಜ್ಯ ಮತ್ತು ಇತರ ಉದ್ಯಮಗಳಿಗೂ, ಸೇಕಡ 10ರಷ್ಟನ್ನು ವ್ಯವಸಾಯ ಮತ್ತು ತತ್ಸಂಬಂಧವಾದ ಇತರ ಕಾರ್ಯಗಳಿಗೂ, ಸೇಕಡ 6.8ರಷ್ಟನ್ನು ಆಮದು ಮತ್ತು ರಫ್ತು ವ್ಯವಹಾರಕ್ಕೂ, ಸೇಕಡ 5ರಿಂದ 6ರಷ್ಟನ್ನು ಕೈಗಾರಿಕಾ ಸಂಸ್ಥೆಗಳಿಗೂ, 10ರಿಂದ 15ರಷ್ಟನ್ನು ಚಲನಚಿತ್ರ ಮತ್ತು ಸಾರಿಗೆ ವ್ಯವಹಾರಸ್ಥರಿಗೂ, 8ರಿಂದ 10ರಷ್ಟನ್ನು ಸಣ್ಣ ವ್ಯವಹಾರಸ್ಥರಿಗೂ ಇತರರಿಗೂ ನೀಡುತ್ತಿವೆ.

ಈ ಸಂಸ್ಥೆಗಳು ನೀಡುವ ಒಟ್ಟು ಸಾಲದಲ್ಲಿ 35ರಷ್ಟು ಭಾಗ ವಾಣಿಜ್ಯ ಮತ್ತು ಉದ್ಯಮಗಳಿಗೆ ಮೀಸಲಿರುವುದರಿಂದ ವಾಣಿಜ್ಯ ಬ್ಯಾಂಕುಗಳಿಗೆ ಈ ಕ್ಷೇತ್ರದಲ್ಲಿ ಹೆಚ್ಚಾಗಿ ಸಾಲ ನೀಡಲು ಸಾಧ್ಯವಾಗದೆ ಹೋಗುತ್ತಿರುವುದಲ್ಲದೆ, ಈ ಉದ್ಯಮಗಳು ತಮ್ಮ ಸಾಲಕ್ಕೆ ಅಧಿಕ ಬಡ್ಡಿಯನ್ನು ನೀಡುತ್ತಿರುವುದರಿಂದ, ಅವುಗಳು ಉತ್ಪಾದಿಸುವ ವಸ್ತುಗಳು ಸಹಜವಾಗಿ ದುಬಾರಿಯಾಗಿರುತ್ತವೆ. ಆದ್ದರಿಂದ ಈ ಸಂಸ್ಥೆಗಳು ಪರೋಕ್ಷವಾಗಿ ಬೆಲೆ ಏರಿಕೆಗೆ ಕಾರಣವಾಗಿವೆ. ಆದ್ದರಿಂದ ಇಂಥ ಸಂಸ್ಥೆಗಳೇ ಅಲ್ಲದೆ ಇನ್ನೂ ಹಲವಾರು ವ್ಯವಹಾರಸ್ಥರು ರಾಷ್ಟ್ರದ ಹಣಕಾಸು ಮಾರುಕಟ್ಟೆಯಲ್ಲಿ ತಮ್ಮ ಜಾಲವನ್ನು ನಿರಂತರವಾಗಿ ಹಬ್ಬಿಸುತ್ತಿರುವುದರಿಂದ, ಭಾರತೀಯ ರಿಸರ್ವ್ ಬ್ಯಾಂಕು ಇವುಗಳ ಬಗ್ಗೆ ವಿಚಾರ ಮಾಡಿ, ಇವನ್ನು ಹಣಕಾಸು ಶಿಸ್ತಿನ ಕ್ರಮಗಳಿಗೆ ಅಥವಾ ನಿಬಂಧನೆಗೆ ಒಳಪಡಿಸುವುದು ಅಗತ್ಯವಾಗಿದೆ.



## ಸ್ಥಾನ ನಷ್ಟ

ಠೇವಣಿಗಳನ್ನು ಆಕರ್ಷಿಸುವುದು ಬ್ಯಾಂಕುಗಳಿಗೆ ದಿನೇ ದಿನೇ ಹೆಚ್ಚು ಹೆಚ್ಚು ಕಠಿಣವಾಗುತ್ತಿದೆ. ದೇಶದ ರಾಷ್ಟ್ರೀಯ ಉಳಿತಾಯಕ್ಕೆ ಸೇ. 70ರಷ್ಟು ದೇಣಿಗೆ ನೀಡುವ ಕುಟುಂಬವಲಯದ ಠೇವಣಿಗಳನ್ನು ಪಡೆಯುವಲ್ಲಿ ಬ್ಯಾಂಕುಗಳು ಬಲು ತೀವ್ರ ಸ್ಪರ್ಧೆ ಎದುರಿಸುತ್ತಿರುವುದು ಒಂದು ಕಾರಣ. ಬ್ಯಾಂಕೇತರ ಹಣಕಾಸು ಸಂಸ್ಥೆಗಳೂ ಕಂಪನಿಗಳೂ ನವೋನ್ಮೇಷಶಾಲಿ ಠೇವಣಿ ಯೋಜನೆಗಳನ್ನು ಆಗಾಗ್ಗೆ ನೀಡುತ್ತಿರುತ್ತವೆ......

ಬ್ಯಾಂಕೇತರ ವಲಯದ ಕಂಪನಿಗಳು ಅನುಸೂಚಿತ ವಾಣಿಜ್ಯ ಬ್ಯಾಂಕುಗಳಿಗಿಂತ ಹೆಚ್ಚು ವೇಗವಾಗಿ ಠೇವಣಿಗಳನ್ನಾಕರ್ಷಿಸುತ್ತಿವೆಯೆಂಬುದು ಭಾರತೀಯ ರಿಸರ್ವ್ ಬ್ಯಾಂಕ್ ನಡೆಸಿದ ಒಂದು ಅಧ್ಯಯನದಿಂದ ಗೊತ್ತಾಗಿದೆ. 1982ರ ಮಾರ್ಚ್‌ಗೆ ಅಂತ್ಯವಾದ ವರ್ಷದಲ್ಲಿ ಬ್ಯಾಂಕೇತರ ಕಂಪನಿಗಳ ಠೇವಣಿಗಳು ಸೇ. 31.1ರಷ್ಟು ಅಧಿಕವಾದುವು. ಇದೇ ಅವಧಿಯಲ್ಲಿ ಬ್ಯಾಂಕ್ ಠೇವಣಿಗಳ ಏರಿಕೆ 15.4%. 1972–82ರ ದಶಕದಲ್ಲಿ ಬ್ಯಾಂಕೇತರ ಕಂಪನಿಗಳ ಠೇವಣಿಗಳಲ್ಲಿ ಏಳು ಮಡಿ ಏರಿಕೆಯಾಯಿತೆಂಬುದು ಅದೇ ಅಧ್ಯಯನದಿಂದ ತಿಳಿದುಬರುತ್ತದೆ. ಈ ಅವಧಿಯಲ್ಲಿ ಬ್ಯಾಂಕಿಂಗ್ ವಲಯದ ಠೇವಣಿಗಳ ಏರಿಕೆ ಐದು ಮಡಿ ಮಾತ್ರ.

ಠೇವಣಿ ಸಂಗ್ರಹಣದ ಕ್ಷೇತ್ರದಲ್ಲಿ ಬ್ಯಾಂಕುಗಳು ನಿಧಾನವಾಗಿ ತಮ್ಮ ನೆಲೆ ಕಳೆದುಕೊಳ್ಳುತ್ತಿವೆಯೆಂಬುದು ಸ್ಪಷ್ಟ. ಭವಿಷ್ಯದಲ್ಲಿ ಅವು ಇನ್ನಷ್ಟು ಸ್ಥಾನ ಕಳೆದುಕೊಳ್ಳುತ್ತವೆಯೆಂಬ ಸೂಚನೆಗಳಿವೆ. ಬ್ಯಾಂಕಿಂಗ್ ಪ್ರಾಧಿಕಾರಿಗಳು ನಿರ್ಣಾಯಕ ಕ್ರಮ ಕೈಗೊಳ್ಳದಿದ್ದರೆ ಹೀಗಾದೀತು.

—ವಿ. ಎನ್. ನಾಡಕರ್ಣಿ (ಭಾರತೀಯ ಸ್ಟೇಟ್ ಬ್ಯಾಂಕಿನ ಮಾಜಿ ಅಧ್ಯಕ್ಷರು)

# ಸಹಕಾರಿ ಬ್ಯಾಂಕುಗಳಲ್ಲಿ ನೇಮಕಾತಿ

**ಶಾ. ಅಚ್ಚಣ್ಣ**

ಸಹಕಾರ ಕ್ಷೇತ್ರ ರಾಜ್ಯ ಮತ್ತು ರಾಷ್ಟ್ರದ ಅಭಿವೃದ್ಧಿಗೆ ಬಹಳ ಶ್ರಮಿಸುತ್ತಿದೆ ಮತ್ತು ರಾಷ್ಟ್ರದ ಆರ್ಥಿಕ ಮುನ್ನಡೆ ಅದರ ಕಾರ್ಯ ವ್ಯಾಪ್ತಿಯನ್ನು ಬಹಳವಾಗಿ ಅವಲಂಬಿಸಿದೆ. ಯಾವ ಸಂಘ, ಸಂಸ್ಥೆ ಅಥವಾ ಬ್ಯಾಂಕೇ ಆಗಲಿ ತಾನು ಹಾಕಿಕೊಂಡ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲು ಸಾಕಷ್ಟು ನೌಕರರ ನೇಮಕಾತಿ ಬಹಳ ಮುಖ್ಯವಾದುದು. 1915ರಿಂದ 1925ರಿಂದೀಚೆಗೆ ಅನುಕ್ರಮವಾಗಿ ಸ್ಥಾಪಿಸಲಾದ ಕೇಂದ್ರ ಸಹಕಾರಿ ಬ್ಯಾಂಕುಗಳು ಮತ್ತು ಸಹಕಾರಿ ಜಮೀನು ಅಡವಮಾನ ಬ್ಯಾಂಕುಗಳು ಆಯಾ ರಾಜ್ಯಗಳಿಗೆ ಕಾರ್ಯ ವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡಿದ್ದುವು. 1935ರಲ್ಲಿ ಭಾರ ತೀಯ ರಿಸರ್ವ್ ಬ್ಯಾಂಕು ಸ್ಥಾಪಿತವಾದ ಮೇಲೆ ಗ್ರಾಮೀಣ ಸಹಕಾರಿ ಹಾಗೂ ಪಟ್ಟಣ ಸಹಕಾರಿ ಬ್ಯಾಂಕುಗಳು ಸ್ಥಾಪಿತವಾದುವು.

1935ರಿಂದೀಚೆಗೆ ಅನೇಕ ಸಮಿತಿಗಳು ವರದಿ ನೀಡಿದ್ದರೂ ಸಹಕಾರಿ ಸಂಸ್ಥೆಗಳಲ್ಲಿ ನೌಕರರ ನೇಮಕಾತಿಯ ಬಗ್ಗೆ ಯಾವ ನಿಖರ ದಾದ ನಿರ್ದೇಶನವನ್ನೂ ಸೂಚಿಸಿಲ್ಲ. ಆದರೆ 1975ರ ಅಕ್ಟೋಬರಿ ನಲ್ಲಿ ಶ್ರೀ ಮಾಧವದಾಸರ ನೇತೃತ್ವದಲ್ಲಿ ನೇಮಿತವಾದ ಸಮಿತಿ ಕೇವಲ ಭೂ ಅಭಿವೃದ್ಧಿ ಬ್ಯಾಂಕುಗಳ ಕಾರ್ಯರೂಪ ರೇಖೆಗಳನ್ನು ಅಧ್ಯಯನ ಮಾಡಿ ನೇಮಕಾತಿಯ ಬಗ್ಗೆ ಕೆಲವೊಂದು ಸಲಹೆ ಗಳನ್ನು ನೀಡಿದ್ದರೂ ಆಯಾ ರಾಜ್ಯಗಳಲ್ಲಿ ಇರುವ ಬ್ಯಾಂಕು ಗಳ ವ್ಯವಹಾರಕ್ಕೆ ತಕ್ಕಂತೆ ಸೂಕ್ತ ರೀತಿಯಲ್ಲಿ ನೇಮಕಾತಿ ಮಾಡು ವುದು ಒಳ್ಳೆಯದೆಂದು ಸೂಚಿಸಿದೆ. 1979ರ ನವೆಂಬರಿನಲ್ಲಿ ಶ್ರೀ ಶಿವರಾಮನ್ ನೇತೃತ್ವದ ಸಮಿತಿ ತನ್ನ ವರದಿಯನ್ನು ಕೇಂದ್ರ ಸರ್ಕಾರಕ್ಕೆ ಕೊಟ್ಟಾಗಲೂ ಅದು ರಾಷ್ಟ್ರಮಟ್ಟದಲ್ಲಿ ನಬಾರ್ಡ್ ಸ್ಥಾಪಿಸಿ, ರಾಜ್ಯ ಮಟ್ಟದಲ್ಲಿ ಅಲ್ಪಾವಧಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ಸಹಕಾರ ಕ್ಷೇತ್ರದಿಂದ ಒಂದೇ ಬ್ಯಾಂಕಿ ನಿಂದ ಕೃಷಿಕರಿಗೆ ಕೊಡಬಹುದೆಂದು ತಿಳಿಸಿದೆ. ಅದು ಕೂಡ ಬ್ಯಾಂಕು ಗಳಲ್ಲಿ ನೇಮಕಾತಿಯ ಬಗ್ಗೆ ಒಂದು ನಿಖರವಾದ ಅಭಿಪ್ರಾಯವನ್ನು ಕೊಟ್ಟಿಲ್ಲ. ಇದಕ್ಕೆಲ್ಲ ಮುಖ್ಯ ಕಾರಣ, ಸಹಕಾರಿ ಕ್ಷೇತ್ರದಲ್ಲಿ ಕೇಂದ್ರ ಮಟ್ಟದಲ್ಲಿ ಅದಕ್ಕೆ ಸಂಬಂಧಪಟ್ಟಂತೆ ಕಾನೂನು ಇಲ್ಲದೆ, ಇದನ್ನು ಕೇಂದ್ರ ಸರ್ಕಾರ ಆಯಾ ರಾಜ್ಯಗಳಿಗೆ ಬಿಟ್ಟುಕೊಟ್ಟಿರುವುದು. ರಾಜ್ಯ ಸರ್ಕಾರಗಳು ತಮ್ಮವೇ ಆದ ಬೇರೆಬೇರೆ ಕಾನೂನು ಮತ್ತು ನಿಯಮಗಳನ್ನು ಹೊಂದಿರುತ್ತವೆ. ಆದರಿಂದಾಗಿ, ಇಡೀ ದೇಶಕ್ಕೆ ಸಂಬಂಧಿಸಿದಂತೆ ಸಹಕಾರಿ ಬ್ಯಾಂಕುಗಳಲ್ಲಿ ನೇಮಕಾತಿಯ ಬಗ್ಗೆ ನಿಖರವಾಗಿ ಹೇಳಲು ಸಾಧ್ಯವಾಗುವುದಿಲ್ಲ. ನೇಮಕಾತಿಯ ಬಗ್ಗೆ ಕರ್ನಾಟಕ ರಾಜ್ಯದ ಸಹಕಾರಿ ಅಧಿನಿಯಮದ ಪ್ರಕಾರ ಸಹಕಾರಿ ಬ್ಯಾಂಕುಗಳ ಬಗ್ಗೆ ಇಲ್ಲಿ ಪರಿಶೀಲನೆ ಮಾಡಲಾಗಿದೆ.

ಕರ್ನಾಟಕದಲ್ಲಿ ರಾಜ್ಯ ಮಟ್ಟದ ಹಾಗೂ ಪಟ್ಟಣದ ಸಹಕಾರಿ ಬ್ಯಾಂಕುಗಳ ಸಂಖ್ಯೆ ಸುಮಾರು 202. ಕರ್ನಾಟಕ ರಾಜ್ಯದಲ್ಲಿ ಸಹಕಾರಿ ಸಂಸ್ಥೆಗಳ ಅಧಿನಿಯಮದ ಪ್ರಕಾರ ಕೆಲವೊಂದು ಹುದ್ದೆ ಗಳ ನೇಮಕಾತಿಗಳ ಬಗ್ಗೆ ಕೂಲಂಕಷವಾದ ಸೂಚನೆಗಳಿದ್ದರೂ ಪಟ್ಟಣ ಬ್ಯಾಂಕುಗಳು ಹಾಗೂ ಗ್ರಾಮೀಣ ಬ್ಯಾಂಕುಗಳಲ್ಲಿ ಮತ್ತು ಕೇಂದ್ರ ಸಹಕಾರಿ ಬ್ಯಾಂಕು ಹಾಗೂ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕುಗಳಲ್ಲಿ ಇಚ್ಛಾನುಸಾರ ನೌಕರರ ನೇಮಕಾತಿ ಮಾಡುತ್ತಿ ದ್ದುದು ಸರ್ಕಾರದ ಗಮನಕ್ಕೆ ಬಂದು 1977ರ ಏಪ್ರಿಲ್ 15ರಂದು ಅದು ಸಹಕಾರಿ ಅಧಿನಿಯಮ ಮತ್ತು ನಿಯಮಾವಳಿಗಳ ವಿಭಾಗ 128-ಎಯ ಮೇಲೆ ಸಹಕಾರಿ ಬ್ಯಾಂಕು ಮತ್ತು ಇತರ ಸಹಕಾರಿ ಸಂಸ್ಥೆಗಳಲ್ಲಿ ಎಲ್ಲ ಬಗೆಯ ನೌಕರರ ನೇಮಕಾತಿಗಳ ಬಗ್ಗೆ ಒಂದು ಆದೇಶವನ್ನು ಹೊರಡಿಸಿತು (ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿಸಿ: 14 : ಸಿಎಲ್‌ಎಂ : 77 ದಿನಾಂಕ 15 ಏಪ್ರಿಲ್ 1977).

ಈ ಆದೇಶದ ಪ್ರಕಾರ ಈ ಮುಂದಿನ ಸಹಕಾರಿ ಬ್ಯಾಂಕುಗಳು ನೇಮಕಾತಿಯ ಸಮಿತಿಯ ವ್ಯಾಪ್ತಿಯೊಳಗೆ ಬರುತ್ತವೆ :

1. ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು,
2. ತಾಲ್ಲೂಕು ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು,
3. ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕು,
4. ಜಿಲ್ಲಾ ಮಟ್ಟದ ಸಹಕಾರಿ ಸೆಂಟ್ರಲ್ ಬ್ಯಾಂಕುಗಳು,
5. ಪಟ್ಟಣ ಹಾಗೂ ಗ್ರಾಮೀಣ ಸಹಕಾರಿ ಬ್ಯಾಂಕು,
6. ಕೈಗಾರಿಕಾ ಸಹಕಾರಿ ಬ್ಯಾಂಕು.

ಈ ಸಹಕಾರಿ ಬ್ಯಾಂಕುಗಳು ಒಂದೇ ಸಹಕಾರ ಕಾನೂನಿನೊಳಗೆ ಕೆಲಸ ಮಾಡುತ್ತಿದ್ದರೂ ಇವುಗಳ ಕಾರ್ಯವ್ಯಾಪ್ತಿಗೆ ತಕ್ಕಂತೆ ನೇಮ ಕಾತಿಯ ಸಮಿತಿಗಳ ಅಧಿಕಾರಿಗಳು ಬೇರೆಬೇರೆಯಾಗಿ ಇದ್ದರು.

ತಾಲ್ಲೂಕು ಭೂ ಅಭಿವೃದ್ಧಿ ಬ್ಯಾಂಕುಗಳು ತಮ್ಮವೇ ಆದ ಆಡಳಿತ ಮಂಡಳಿಯನ್ನು ಹೊಂದಿದ್ದು ನೌಕರರುಗಳ ನೇಮಕಾತಿಗಳು ಯಾದೃಚ್ಛಿಕವಾಗಿ ನಡೆಯುತ್ತಿದ್ದುದನ್ನು ಗಮನಿಸಿ ಸರ್ಕಾರ ಸಹಕಾರಿ ಸಂಘಗಳ ಅಧಿನಿಯಮ 128-ಎ ಪ್ರಕಾರ ಸಮಾನ ಸಿಬ್ಬಂದಿ ಪ್ರಾಧಿಕಾರವನ್ನು ಸ್ಥಾಪಿಸಿ ಅದರ ಕೆಳಗೆ ಎಲ್ಲ ತಾಲ್ಲೂಕು ಮಟ್ಟದ ಭೂ ಬ್ಯಾಂಕುಗಳು ನೌಕರರ ನೇಮಕಾತಿ ಮಾಡಬೇಕೆಂಬ ನಿಯಮವನ್ನು ಜಾರಿಗೆ ತಂದಿತು, ಹಾಗೂ ನೇಮಕಾತಿ ಸಮಿತಿಗಳ ಬಗ್ಗೆ 1ನೆಯ ಮೇ 1984ರ ಆದೇಶ ಸಂಖ್ಯೆ : ಆರ್‌ಡಿಸಿ : 52 : ಸಿಎಲ್‌ಎಂ : 77ರಲ್ಲಿ ಸ್ವಲ್ಪ ಬದಲಾವಣೆ ಮಾಡಿ ಆದೇಶ ಹೊರಡಿ ಸಿತು. ಈ ನೇಮಕಾತಿ ಸಮಿತಿಗಳು ಈಗಲೂ ಜಾರಿಯಲ್ಲಿವೆ.

ಯಾವ ಒಂದು ಸಹಕಾರಿ ಬ್ಯಾಂಕೇ ಆಗಲಿ ಹುದ್ದೆಗಳಿಗೆ ನೇರ ವಾಗಿ ನೇಮಕಾತಿ ಮಾಡುವಾಗ ಖಾಲಿ ಇರುವ ಹುದ್ದೆಗಳಿಗೆ ಸಮ

---

ಶಾ. ಅಚ್ಚಣ್ಣ, ಕರ್ನಾಟಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್, ಬೆಂಗಳೂರು

ವಾಗಿ ಮತ್ತು ಸರ್ಕಾರದ ಆದೇಶಾನುಸಾರ ಸರಾಸರಿಯಾಗಿ ಅನುಸೂಚಿತ ಮತ್ತು ಹಿಂದುಳಿದ ವರ್ಗಗಳಿಗೆ ಇಷ್ಟು ಸ್ಥಾನ ಮತ್ತು ಇತರರಿಗೆ ಇಷ್ಟು ಸ್ಥಾನಗಳೆಂದು ತಿಳಿಸಿ, ಎರಡು ಪ್ರಮುಖ ದಿನ ಪತ್ರಿಕೆಗಳಲ್ಲಿ ಪ್ರಕಟಿಸಬೇಕು. ಹೀಗೆ ಪ್ರಕಟಿಸುವಾಗ ವಿದ್ಯಾರ್ಹತೆ, ಖಾಲಿ ಇರುವ ಹುದ್ದೆ, ವಯೋಮಿತಿ ಮತ್ತು ಅರ್ಜಿಗಳು ತಲುಪಲು ಕೊನೆಯ ದಿನಾಂಕ ಇತ್ಯಾದಿಗಳನ್ನು ವಿವರವಾಗಿ ಸೂಚಿಸಿರಬೇಕು. ಈ ರೀತಿ ಬಂದ ಅರ್ಜಿಗಳನ್ನು ಪರಿಶೀಲಿಸಿ, ನೇಮಕಾತಿ ಸಮಿತಿಯ ಮುಂದೆ ವಿಮರ್ಶಿಸಿ, ಅಭ್ಯರ್ಥಿಗಳ ಪರೀಕ್ಷೆಗೆ ದಿನಾಂಕವನ್ನು ನಿಗದಿ ಪಡಿಸಿ, ಅರ್ಹತೆ ಇರುವ ಅಭ್ಯರ್ಥಿಗೆ ನೇಮಕಾತಿ ಸಮಿತಿಯ ಮುಂದೆ ಹಾಜರಾಗಲು ಅಂಚೆಯ ಮೂಲಕ ತಿಳಿಸಬೇಕು. ಹೀಗೆ ಬಂದ ಅಭ್ಯರ್ಥಿಗಳನ್ನು ಮೌಖಿಕವಾಗಿ ಪರೀಕ್ಷಿಸಿ ಉತ್ತೀರ್ಣರಾದವರಿಗೆ ನೇಮಕಾತಿ ಆದೇಶ ನೀಡಲಾಗುತ್ತದೆ. ಸಹಕಾರ ಸಂಘಗಳ ನೇಮಕಾತಿ ಅಧಿನಿಯಮದ ಪ್ರಕಾರ ನೇಮಕಾತಿ ಸಮಿತಿಗೆ ಯಾವುದೇ ತೀರ್ಮಾನ ತೆಗೆದುಕೊಳ್ಳುವ ಅಧಿಕಾರವಿರುತ್ತದೆ. ಒಂದು ವೇಳೆ ನೇಮಕಾತಿಯಲ್ಲಿ ಅಭ್ಯರ್ಥಿಗೆ ಅಸಮಾಧಾನವೇನಾದರೂ ಇದ್ದಲ್ಲಿ ಅಭ್ಯರ್ಥಿ ನೇರವಾಗಿ ರಾಜ್ಯದ ಉಚ್ಚನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬಹುದು. ಈ ವಿಚಾರದಲ್ಲಿ ಈ ಮುಂದಿನ ಅಂಶವನ್ನು ಗಮನಿಸಬಹುದು.

1 ಕೃಷಿಕರ, ರಾಜ್ಯದ ಮತ್ತು ರಾಷ್ಟ್ರದ ಏಳಿಗೆಗೆ ಸಹಕಾರ ಸಂಘಗಳೇ ಬಹು ಮುಖ್ಯವೆಂದು ಹೆಜ್ಜೆಹೆಜ್ಜೆಗೂ ತಿಳಿಸಿ ಸಾಕಷ್ಟು ಸಮಿತಿಗಳನ್ನು ನೇಮಿಸಿ ಅವುಗಳ ವರದಿಗಳನ್ನು ಪಡೆದಿರುವುದು ಸರಿ. ಸಹಕಾರ ಸಂಘಗಳು ದಕ್ಷತೆ ಸಾಧಿಸಬೇಕಾದರೆ ರಾಷ್ಟ್ರಮಟ್ಟದಲ್ಲಿ ನೇಮಕಾತಿಯ ಬಗ್ಗೆ ಒಂದು ಏಕರೂಪದ ಕಾನೂನನ್ನು ಮಾಡಿ ಜಾರಿಗೆ ಬರುವಂತೆ ಖಾತರಿಪಡಿಸಬಹುದು.

2 ನೇರವಾಗಿ ನೇಮಕಾತಿ ಮಾಡುವಾಗ ಲಿಖಿತ ಮೂಲಕ ಪರೀಕ್ಷಿಸಿ ಉತ್ತೀರ್ಣರಾದ ಅಭ್ಯರ್ಥಿಗೆ ನೇಮಕಾತಿ ಮಾಡಬಹುದು.

3 ಸಹಕಾರಿ ಬ್ಯಾಂಕುಗಳು ರಾಷ್ಟ್ರವ್ಯಾಪಿಯಾಗಿ ಕೆಲಸ ಮಾಡುತ್ತಿರುವುದರಿಂದ ವಾಣಿಜ್ಯ ಬ್ಯಾಂಕುಗಳ ರೀತಿಯಲ್ಲಿ ಸಹಕಾರ ಸಂಘದ ಅಧಿನಿಯಮ ಮಾಡಬಹುದು.



## ಸಹಕಾರಿ ಸಿಬ್ಬಂದಿ ನೇಮಕಾತಿ-ನಿಯಂತ್ರಣ

ಅಧಿಕಾರೇತರ ವ್ಯವಸ್ಥಾಪಕ ವರ್ಗಕ್ಕೂ ವೃತ್ತಿಪರ ವ್ಯವಸ್ಥಾಪಕ ವರ್ಗಕ್ಕೂ ನಡುವಣ ಘರ್ಷಣೆಯ ಒಂದು ಪ್ರಧಾನ ಕ್ಷೇತ್ರವೆಂದರೆ ನೌಕರರ ಆಯ್ಕೆ ಹಾಗೂ ನೇಮಕಾತಿ, ಮತ್ತು ಅವರ ಮೇಲೆ ನಿಯಂತ್ರಣವನ್ನು ಕುರಿತದ್ದು. ಆದ್ದರಿಂದ ವ್ಯವಸ್ಥಾಪಕ ವರ್ಗಗಳಿಂದ ಅಭ್ಯರ್ಥಿಗಳ ಆಯ್ಕೆ ಹಾಗೂ ನೇಮಕಾತಿಯ ಪ್ರಕ್ರಿಯೆಗಳನ್ನು ಹಿಂತೆಗೆದುಕೊಂಡು, ಆ ಹೊಣೆಯನ್ನು ಈ ಕೆಲಸದಲ್ಲಿ ವಿಶೇಷಜ್ಞತೆ ಗಳಿಸಿರುವ ಸ್ವತಂತ್ರ ಅಭಿಕರಣಗಳಿಗೆ ವಹಿಸಿಕೊಡುವ ಯತ್ನ ನಡೆದಿದೆ. ಆದರೆ ಸಾಂದರ್ಭಿಕ ನೇಮಕಾತಿಗಳು ಈಗಲೂ ಮುಂದುವರಿದಿವೆ ಹಾಗೂ ಇವು ಅನಿವಾರ್ಯವೇನೋ ಎನಿಸಿವೆ. ಸಿಬ್ಬಂದಿಯ ನಿಯಂತ್ರಣ ಕುರಿತದ್ದು ಇನ್ನೊಂದು ಮುಖ್ಯ ಅಂಶ. ಅನೇಕ ಸಹಕಾರಿ ಬ್ಯಾಂಕುಗಳಲ್ಲಿ ಅಧಿಕಾರಿಗಳೂ ಸೇರಿದಂತೆ ಇಡೀ ಸಿಬ್ಬಂದಿಯ ಮೇಲೆ ಅಧಿಕಾರೇತರ ಅಧ್ಯಕ್ಷ ನಿಯಂತ್ರಣ ಹೊಂದಿರುತ್ತಾನೆ. ಶಿಸ್ತಿನ ಪಾಲನೆಗೆ ಇದು ಸಹಾಯಕವಾಗಲಾರದು. ಇದರಿಂದ ಕೆಲಸವನ್ನು ಆಗ ಮಾಡಿಸಲು ವೃತ್ತಿಪರ ವ್ಯವಸ್ಥಾಪಕ ವರ್ಗಕ್ಕೆ ಕಷ್ಟವಾಗುತ್ತದೆ. ಇಂಥ ವ್ಯವಸ್ಥೆಯಲ್ಲಿ ವೃತ್ತಿಪರ ವ್ಯವಸ್ಥಾಪಕ ವರ್ಗದ ಪ್ರಾವೀಣ್ಯ ನಷ್ಟವಾಗಿ ಹೋಗಿಬಿಡಬಹುದು.

—ಬಿ. ಪಿ. ಸಾತ್ಪುಟೆ

# ಸುದ್ದಿ ಸಾರ

**ಸಾ. ಅ. ಮಂಜುನಾಥ**

### ಅನಿವಾಸಿಗಳಿಗೆ ಭಾರತದಲ್ಲಿಯ ಸ್ಥಿರ ಆಸ್ತಿಗಳ ಮೇಲೆ ಸಾಲ ನೀಡಿಕೆಗೆ ನಿಷೇಧ

ಅನಿವಾಸಿ ಭಾರತೀಯರುರು ಭಾರತದಲ್ಲಿಯ ತಮ್ಮ ಸ್ಥಿರ ಆಸ್ತಿಗಳ ಮೇಲೆ ವಿದೇಶೀ ವಿನಿಮಯದ ಅಧಿಕೃತ ವ್ಯವಹರ್ತ್ಯಗಳಿಂದ ಸಾಲ ಪಡೆಯುವುದು ಇನ್ನು ಮುಂದೆ ಸಾಧ್ಯವಾಗದು. ಏಕೆಂದರೆ ಇಂತಹ ಸಾಲಗಳು ಮರುಪಾವತಿಯಾಗದೆ ಸುಸ್ತಿಯಾದರೆ, ಆಸ್ತಿಯ ಅಡ ಮಾನದ ಹಕ್ಕು ಸಾಧಿಸಿಕೊಂಡು ಹಣವನ್ನು ಭಾರತೀಯ ರೂಪಾಯಿ ಗಳಲ್ಲಿ ವಸೂಲು ಮಾಡಿಕೊಳ್ಳುವುದನ್ನು ಬಿಟ್ಟರೆ ವ್ಯವಹರ್ತ್ಯಗಳಿಗೆ ಬೇರೆ ದಾರಿಯೇ ಇಲ್ಲ. ಅದಕ್ಕಾಗಿಯೇ ಈ ನಿಷೇಧ.

### ಜಿಲ್ಲಾ ಸಲಹಾ ಸಮಿತಿಯಲ್ಲಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು

ಜಿಲ್ಲೆಯೊಂದರ ಎಲ್ಲ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳನ್ನು ಜಿಲ್ಲಾ ಸಲಹಾ ಸಮಿತಿಯಲ್ಲಿ ಸೇರಿಸಲು ಸಾಧ್ಯವಾಗದೆ ಹೋಗಬಹುದು. ಅಂತಹ ಸಂದರ್ಭದಲ್ಲಿ ಜಿಲ್ಲಾ ಸಲಹಾ ಸಮಿತಿಯ ಸಭೆಗಳಿಗೆ ಪ್ರತಿ ಸಭೆಗೆ ಒಬ್ಬರಂತೆ ಸರದಿಯ ಮೇಲೆ ಹಾಜರಾಗುವಂತೆ ಪ್ರತಿ ಕ್ಷೇತ್ರಾಭಿವೃದ್ಧಿ ಅಧಿಕಾರಿಯನ್ನು ನಾಮಕರಣ ಮಾಡಬಹುದಾಗಿದೆ. ಈ ಕೆಲಸವನ್ನು ಸಂಬಂಧಿಸಿದ ಅಗ್ರ ಬ್ಯಾಂಕು ತನ್ನ ಅಗ್ರ ಬ್ಯಾಂಕ್ ಅಧಿಕಾರಿಗಳ ಮೂಲಕ ನಡೆಯಿಸಬೇಕಾಗುತ್ತದೆ.

### ಪಟ್ಟಣ ಸಹಕಾರಿ ಬ್ಯಾಂಕುಗಳು—ಗುಜರಾತ್ ಅಗ್ರಪಂಕ್ತಿ

ಪಟ್ಟಣ ಸಹಕಾರಿ ಬ್ಯಾಂಕುಗಳಿಗೆ ಸಂಬಂಧಿಸಿದ ಎಲ್ಲ ವಿಷಯಗಳಲ್ಲೂ ಗುಜರಾತ್ ರಾಜ್ಯ ಇಂದು ಇತರ ರಾಜ್ಯಗಳಿಗಿಂತ ಮುಂದಿದೆ. ಜೂನ್ 1984ರಂದು ದೇಶದಲ್ಲಿದ್ದ ಒಟ್ಟು 1,310 ಪಟ್ಟಣ ಸಹಕಾರಿ ಬ್ಯಾಂಕುಗಳಲ್ಲಿ ಸೇ. 22 ಭಾಗ ಅಂದರೆ 294 ಬ್ಯಾಂಕುಗಳು ಗುಜ ರಾತಿನಲ್ಲಿದ್ದುವು. ಗುಜರಾತಿನಲ್ಲಿಯ ಪಟ್ಟಣ ಸಹಕಾರಿ ಬ್ಯಾಂಕುಗಳ ಒಟ್ಟು ಠೇವಣಿ ರೂ. 720 ಕೋಟಿಗಳಷ್ಟಿದ್ದು ಇದು ದೇಶದಲ್ಲಿಯ ಅಂತಹ ಠೇವಣಿಗಳ ಸೇ. 30ರಷ್ಟಾಗುತ್ತದೆ. ದೇಶದ ಪಟ್ಟಣ ಸಹಕಾರಿ ಬ್ಯಾಂಕುಗಳು ನೀಡಿದ ಸಾಲದ ಮೊತ್ತ ರೂ. 1,905 ಕೋಟಿಗಳಾದರೆ ಅದರಲ್ಲಿ ಗುಜರಾತಿನ ಪಾಲು ರೂ. 675 ಕೋಟಿ ಗಳು. ದುಡಿಯುವ ಬಂಡವಾಳ ರೂ. 5 ಕೋಟಿಗಳಿಗಿಂತ ಹೆಚ್ಚಿರುವ ಪಟ್ಟಣ ಸಹಕಾರಿ ಬ್ಯಾಂಕುಗಳಲ್ಲಿ ಸುಮಾರು ಅರ್ಧದಷ್ಟು ಗುಜರಾತಿ ನಲ್ಲಿಯೇ ಇವೆ.

### ಬ್ಯಾಂಕುಗಳ ಸಾಲ ನೀಡಿಕೆಯ ಬಡ್ಡಿದರಗಳು

ಬಡ್ಡಿ ವರಮಾನದ ಮೇಲಿನ ತೆರಿಗೆಯನ್ನು ರದ್ದುಗೊಳಿಸಿರುವುದ ರಿಂದಾಗಿ, ವಾಣಿಜ್ಯ ಬ್ಯಾಂಕುಗಳ ಸಾಲ ನೀಡಿಕೆಯ ಗರಿಷ್ಠ ದರವನ್ನು ಏಪ್ರಿಲ್ 1ರಿಂದ ಸೇ. 18ರಿಂದ ಸೇ. 17.50ಕ್ಕೆ ಇಳಿಸಲಾಗಿದೆ. ಕೆಲವು ನಿರ್ದಿಷ್ಟ ಶ್ರೇಣಿಗಳಿಗೆ ಸೇರಿದ ರಫ್ತುಗಳ ಹಡಗು ಸಾಗಣೆ ಮುನ್ ಉದರಿಯ ದರವನ್ನು ಸೇ. 14.5ರಿಂದ ಸೇ. 14ಕ್ಕೆ ಇಳಿಸ ಲಾಗಿದೆ. ಈ ರಫ್ತುಗಳೆಂದರೆ 180 ದಿನಗಳಿಗೆ ಮೀರಿದ ಮತ್ತು 270 ದಿನಗಳೊಳಗಿನ ಮಧ್ಯಮ ಮತ್ತು ಭಾರಿ ಇಂಜಿನಿಯರಿಂಗ್ ವಸ್ತುಗಳ ರಫ್ತು ಮತ್ತು ನಿರ್ಮಾಣ ಕರಾರುಗಳು ಮತ್ತು 90 ದಿನ ಗಳೊಳಗಿನ ಇತರ ವಸ್ತುಗಳ ರಫ್ತು ಮತ್ತು ಸಲಹಾ ಸೇವೆಗಳು. ವಾಣಿಜ್ಯ ಬ್ಯಾಂಕುಗಳ ಸಾಲ ನೀಡಿಕೆಯ ಬಡ್ಡಿದರದ ಗರಿಷ್ಠಮಿತಿ ಸೆಪ್ಟೆಂಬರ್ 1979ರಿಂದ ಮಾರ್ಚ್ 1981ರ ವರೆಗೆ ಹಂತಹಂತ ವಾಗಿ ಸೇ. 15ರಿಂದ 19.5ಕ್ಕೆ ಏರುತ್ತಾ ಹೋದುದನ್ನು ಇಲ್ಲಿ ಸ್ಮರಿಸ ಬಹುದು. ಏಪ್ರಿಲ್ 1982ರಲ್ಲಿ ಬಡ್ಡಿ ವರಮಾನದ ಮೇಲಿನ ತೆರಿಗೆ ಯನ್ನು ಅರ್ಧದಷ್ಟು ಕಡಿತಗೊಳಿಸಿದಾಗ ಸಾಲ ನೀಡಿಕೆ ದರವನ್ನು ಸೇ. 18ಕ್ಕೆ ಇಳಿಸಲಾಗಿತ್ತು.

### ಮಹಿಳಾ ಪಟ್ಟಣ ಸಹಕಾರಿ ಬ್ಯಾಂಕುಗಳು

ಪಟ್ಟಣ ಸಹಕಾರಿ ಬ್ಯಾಂಕುಗಳನ್ನು ಸ್ಥಾಪಿಸಿ ನಡಸುವಲ್ಲಿ ಇತ್ತೀಚೆಗೆ ಮಹಿಳೆಯರೂ ಮುಂದೆ ಬರುತ್ತಿದ್ದಾರೆ. ಕರ್ನಾಟಕದಲ್ಲಿ ಇಂತಹ ಮೂರು ಸಹಕಾರಿ ಬ್ಯಾಂಕುಗಳಿವೆ. ಬೆಂಗಳೂರಿನ ಮಹಿಳಾ ಸಹಕಾರಿ ಬ್ಯಾಂಕು, ತುಮಕೂರಿನ ಶಾರದಾ ಸೇವಾ ಸಮಾಜ ಸಹಕಾರಿ ಬ್ಯಾಂಕು ಮತ್ತು ಬೆಳಗಾವಿಯ ಜೀಜಾಮಾತಾ ಸಹಕಾರಿ ಬ್ಯಾಂಕ್ ಇವೇ ಆ ಬ್ಯಾಂಕುಗಳು. ಗುಜರಾತಿನ ಅಹಮದಾಬಾದ್ ನಗರ ಒಂದರಲ್ಲೇ ಮೂರು ಮಹಿಳಾ ಸಹಕಾರಿ ಬ್ಯಾಂಕುಗಳಿವೆ.

### ರಾಜ್ಯ ಸರಕಾರಗಳ ಹಣಕಾಸು ನೀತಿತಂತ್ರ

ನಿರ್ಯೋಜನಾ ಮತ್ತು ನಿರಭಿವೃದ್ಧಿಕ ವೆಚ್ಚಗಳನ್ನು ಹಿಡಿತದಲ್ಲಿರಿ ಸುವ ಮತ್ತು ಅದೇ ವೇಳೆಗೆ ಪ್ರೋತ್ಸಾಹದ ತೆರಿಗೆ ವಸೂಲಿ ಕ್ರಮವನ್ನು ಕೈಗೊಂಡು ಮತ್ತು ತೆರಿಗೆ ಬಾಕಿಯನ್ನು ಕಡಿಮೆಗೊಳಿಸಿ ತೆರಿಗೆ ನಿರ್ವಹಣೆಯನ್ನು ಬಿಗಿಗೊಳಿಸುವ ಅಂಶಗಳನ್ನು ರಾಜ್ಯಗಳ ಹಣಕಾಸು ನೀತಿತಂತ್ರ ಹೊಂದಿರಬೇಕಾಗುತ್ತದೆ. ಈ ವಿಷಯವನ್ನು ರಾಜ್ಯ ಸರ್ಕಾರಗಳ ಹಣಕಾಸು ನೀತಿಗಳ ಬಗೆಗೆ ನಡಸಿದ ಅಧ್ಯಯನ ವೊಂದರಲ್ಲಿ ಒತ್ತಿ ಹೇಳಲಾಗಿದೆ. ರಾಜ್ಯ ಸರ್ಕಾರದ ಸಂಸ್ಥೆಗಳು, ಅದರಲ್ಲೂ ವಿಶೇಷವಾಗಿ ವಿದ್ಯುಚ್ಛಕ್ತಿ ಮಂಡಳಿಗಳು ಮತ್ತು ರಸ್ತೆ ಸಾರಿಗೆ ನಿಗಮಗಳು ಸಾಕಷ್ಟು ಉತ್ಪತ್ತಿ ಗಳಿಸಿ ತಮ್ಮ ವಾರ್ಷಿಕ ಯೋಜನೆಗಳಿಗೆ ಹಣವೊದಗಿಸಲು ಸಂಪನ್ಮೂಲಗಳನ್ನು ರೂಢಿಸಲು ಸಾಧ್ಯವಾಗುತ್ತಿಲ್ಲ ಎಂದೂ ಈ ಅಧ್ಯಯನದಲ್ಲಿ ತಿಳಿಸಲಾಗಿದೆ.

### ರಿಸರ್ವ್ ಬ್ಯಾಂಕಿನ ಚಿನ್ನದ ಹಬ್ಬದ ವರ್ಷ

ನಮ್ಮ ದೇಶದ ಕೇಂದ್ರ ಬ್ಯಾಂಕ್ ಆದ ರಿಸರ್ವ್ ಬ್ಯಾಂಕು 50 ವರ್ಷ

ಸಾ. ಅ. ಮಂಜುನಾಥ, 45-5/1, 'ಶಂಕರ ಕೃಪ' ಹಿಂಭಾಗ, 16ನೆಯ ಅಡ್ಡರಸ್ತೆ, 3ನೆಯ ವಿಭಾಗ, ಜಯನಗರ, ಬೆಂಗಳೂರು 2

ಗಳ ಸಾರ್ಥಕ ಸೇವೆಯನ್ನು ಸಲ್ಲಿಸಿದೆ. ಜೂನ್ 1ರಂದು ರಿಸರ್ವ್ ಬ್ಯಾಂಕಿನ ಸ್ವರ್ಣ ಮಹೋತ್ಸವ ವರ್ಷದ ಮುಖ್ಯ ಸಮಾರಂಭ ಅದರ ಕೇಂದ್ರ ಕಚೇರಿಯ ಸ್ಥಳವಾದ ಮುಂಬಯಿಯಲ್ಲಿ ಹೋಮಿ ಭಾಭಾ ಸಭಾಂಗಣದಲ್ಲಿ ನಡೆಯಿತು. ಪ್ರಧಾನಿ ಶ್ರೀ ರಾಜೀವ ಗಾಂಧಿಯವರು ಸಮಾರಂಭದ ಮುಖ್ಯ ಅತಿಥಿಗಳಾಗಿದ್ದರು. ಕೇಂದ್ರ ಹಣಕಾಸು ಸಚಿವರಾದ ವಿಶ್ವನಾಥ ಪ್ರತಾಪ ಸಿಂಗ್ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಹಣಕಾಸು ರಾಜ್ಯ ಸಚಿವ ಶ್ರೀ ಜನಾರ್ದನ ಪೂಜಾರಿಯವರು ಸಮಾರಂಭದಲ್ಲಿ ಭಾಗವಹಿಸಿದ್ದರು.

### ಸ್ಮಾರಕ ಗ್ರಂಥಗಳ ಪ್ರಕಟಣೆ

ರಿಸರ್ವ್ ಬ್ಯಾಂಕು ತನ್ನ ಚಿನ್ನದ ಹಬ್ಬದ ಆಚರಣೆಯ ಅಂಗವಾಗಿ ಈ ಮುಂದಿನ ಮೂರು ಸ್ಮಾರಕ ಗ್ರಂಥಗಳನ್ನು ಹೊರತಂದಿದೆ.

1 'ಪೂರ್ವ ಭಾರತದಲ್ಲಿ ಕೃಷಿ ಉತ್ಪಾದಕತೆಯ ಬಗೆಗಿನ ಸಮಿತಿಯ ವರದಿ' : ರಿಸರ್ವ್ ಬ್ಯಾಂಕಿನ ಕೇಂದ್ರೀಯ ಮಂಡಳಿಯ ಸದಸ್ಯರಾದ ಡಾ. ಎಸ್. ಆರ್. ಸೇನ್ ಈ ಸಮಿತಿಯ ಅಧ್ಯಕ್ಷರು.

2 'ಭಾರತೀಯ ರಿಸರ್ವ್ ಬ್ಯಾಂಕ್–50 ವರ್ಷಗಳು (1935-85)' : ಲೇಖಕರು ಶ್ರೀ ಇ. ಪಿ. ಡಬ್ಲ್ಯು ಡ ಕಾಸ್ಟಾ.

3 'ರಿಸರ್ವ್ ಬ್ಯಾಂಕ್ ಮತ್ತು ಗ್ರಾಮೀಣ ಉದರಿ': ಇತ್ತೀಚೆಗೆ ನಿವೃತ್ತರಾದ ರಿಸರ್ವ್ ಬ್ಯಾಂಕಿನ ಉಪಗವರ್ನರ್ ಡಾ. ಹಾತೆಯವರ ನೇತೃತ್ವದ ಒಂದು ಸಮಿತಿ ಈ ಗ್ರಂಥವನ್ನು ರಚಿಸಿದೆ.

### ಸಂಶೋಧನೆ ಮತ್ತು ಅಭಿವೃದ್ಧಿಯ ಬಗ್ಗೆ ದಿ| ಇಂದಿರಾ ಗಾಂಧಿಯವರ ಕಳಕಳಿ

ಅಭಿವೃದ್ಧಿಗಾಗಿ ಸಂಶೋಧನೆಯ ಬಗ್ಗೆ ದಿವಂಗತ ಪ್ರಧಾನಿ ಇಂದಿರಾ ಗಾಂಧಿಯವರಿಗೆ ಅಪಾರ ಕಳಕಳಿ ಇತ್ತು. ಅವರ ಸ್ಮಾರಕವಾಗಿ ಹಾಗೂ ತನ್ನ ಚಿನ್ನದ ಹಬ್ಬದ ಅಂಗವಾಗಿ ರಿಸರ್ವ್ ಬ್ಯಾಂಕು ಆರ್ಥಿಕ ಅಭಿವೃದ್ಧಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಉಚ್ಚಮಟ್ಟದ ಸಂಶೋಧನ ಸಂಸ್ಥೆಯೊಂದನ್ನು ಸ್ಥಾಪಿಸಲಿದೆ. 'ಇಂದಿರಾಗಾಂಧಿ ಇನ್‌ಸ್ಟಿಟ್ಯೂಟ್ ಆಫ್ ಡೆವಲಪ್‌ಮೆಂಟ್ ರಿಸರ್ಚ್' (ಅಭಿವೃದ್ಧಿ ಸಂಶೋಧನೆಯ ಇಂದಿರಾಗಾಂಧಿ ಸಂಸ್ಥೆ) ಎಂದು ಕರೆಯಲಾಗುವ ಈ ಸಂಸ್ಥೆಯನ್ನು ಮುಂಬಯಿಯ ಹೊರವಲಯದ ಗೋರೆಗಾಂವ್‌ನಲ್ಲಿ ಮಹಾರಾಷ್ಟ್ರ ಸರ್ಕಾರ ನೀಡಿರುವ 10 ಎಕರೆ ಪ್ರದೇಶದಲ್ಲಿ ಸ್ಥಾಪಿಸಲಾಗುವುದು. ಅಂದಾಜು ವೆಚ್ಚ 4.5 ಕೋಟಿ ರೂ.ಗಳಾಗುವ ಇದರ ನಿರ್ಮಾಣ ಕಾರ್ಯ ಎರಡು ವರ್ಷಗಳಲ್ಲಿ ಪೂರ್ಣಗೊಳ್ಳಲಿದೆ.



## ವಸತಿ ಸೌಕರ್ಯ ಹಣಕಾಸು ಬ್ಯಾಂಕು

ಖಾಸಗಿ ವಸತಿ ನಿರ್ಮಾಣಕ್ಕೆ ಅಗತ್ಯವಾದ ಉದರಿ ನೀಡಿಕೆಗಾಗಿಯೇ ಪ್ರತ್ಯೇಕವಾದ ಹೊಸ ಬ್ಯಾಂಕೊಂದು ಇಷ್ಟರಲ್ಲೇ ಸ್ಥಾಪನೆಯಾಗಲಿದೆ.

ಕಾಮಗಾರಿ ಮತ್ತು ಮಂತ್ರಾಲಯ ಮಂಡಿಸಿರುವ ಈ ಸೂಚನೆಗೆ ಯೋಜನಾ ಆಯೋಗ ಹಸಿರು ಬಾವುಟ ತೋರಿಸಿದೆಯೆಂದು ತಿಳಿದು ಬಂದಿದೆ. ಈಗಾಗಲೇ ಯೋಜನಾ ಆಯೋಗ ಏಳನೆಯ ಯೋಜನೆಯ ಅಡಿಯಲ್ಲಿ ಇದಕ್ಕಾಗಿ ರೂ. 50 ಕೋಟಿಯನ್ನು ಮುಡಿಪಿಟ್ಟಿದೆ. ರಿಸರ್ವ್ ಬ್ಯಾಂಕ್ ಮತ್ತು ಇತರ ಹಣಕಾಸು ಸಂಸ್ಥೆಗಳು ಇನ್ನು ರೂ. 50 ಕೋಟಿಯನ್ನು ಒದಗಿಸುವ ನಿರೀಕ್ಷೆಯಿದೆ. ಹೀಗೆ ಬ್ಯಾಂಕಿನ ಆರಂಭಿಕ ಬಂಡವಾಳ ರೂ. 100 ಕೋಟಿ ಆಗಿರುತ್ತದೆ.

ವಸತಿ ನಿರ್ಮಾಣ ರಾಜ್ಯ ವಿಷಯ. ಕೇಂದ್ರ ಸರ್ಕಾರ ತನ್ನ ಆಯವ್ಯಯದಲ್ಲಿ ಇದಕ್ಕಾಗಿ ಒಂದಿಷ್ಟು ಹಣ ತೆಗೆದಿರಿಸಬಹುದಷ್ಟೆ. ವಸತಿ ನಿರ್ಮಾಣ ಮತ್ತು ಪಟ್ಟಣ ಅಭಿವೃದ್ಧಿ ನಿಗಮ, ವಸತಿ ಅಭಿವೃದ್ಧಿ ಹಣಕಾಸು ನಿಗಮ ಮತ್ತು ಶೃಂಗ (ಅಪೆಕ್ಸ್) ಹಣಕಾಸು ಸಹಕಾರ ಸಂಸ್ಥೆಗಳು ವಸತಿ ಹಣಕಾಸಿನ ಅಗತ್ಯಗಳನ್ನು ಸ್ವಲ್ಪ ಮಟ್ಟಿಗೆ ಪೂರೈಸುತ್ತವೆ. ಬ್ಯಾಂಕಿಂಗ್ ವಲಯ, ಜೀವ ವಿಮಾ ನಿಗಮ ಮತ್ತು ಸಾಮಾನ್ಯ ವಿಮಾ ನಿಗಮಗಳು ಕೂಡ ಸ್ವಲ್ಪ ಹಣವನ್ನು ಒದಗಿಸುತ್ತವೆ.

ಕಾರ್ಯತಂಡದ ಶಿಫಾರಸಿನ ಮೇರೆಗೆ ಮಂತ್ರಾಲಯದ ಕೋರಿಕೆಯಂತೆ ರಾಷ್ಟ್ರೀಯ ಸಾರ್ವಜನಿಕ ಹಣಕಾಸು ಮತ್ತು ನೀತಿಸಂಸ್ಥೆ ಈ ಬಗ್ಗೆ ಸ್ವತಂತ್ರ ಪರಿಶೀಲನೆ ನಡಸಿ ಮೂರು ಹಂತಗಳ ವ್ಯವಸ್ಥೆಯೊಂದರ ರಚನೆಯಾಗಬೇಕೆಂದು ಸಲಹೆ ನೀಡಿದೆ : ವಸತಿ ಸಲಹಾ ಮಂಡಲಿ, ರಾಷ್ಟ್ರೀಯ ಹಣಕಾಸು ನಿಗಮ ಮತ್ತು ವಸತಿ ಉಳಿತಾಯ ಮತ್ತು ಸಾಲ ನೀಡಿಕೆ ಬ್ಯಾಂಕುಗಳೇ ಈ ಮೂರು ಹಂತಗಳ ವ್ಯವಸ್ಥೆ.

ಸಂಸ್ಥೆಯ ಈ ವರದಿಯ ಪ್ರಕಾರ ಸರ್ಕಾರದ ಮಂತ್ರಾಲಯ ಏಳನೆಯ ಯೋಜನೆಯಲ್ಲಿ ಖಾಸಗಿ ವಸತಿ ನಿರ್ಮಾಣಕ್ಕೆ ಧನಪೋಷಣೆ ಮಾಡಲು ಬ್ಯಾಂಕೊಂದನ್ನು ಸ್ಥಾಪಿಸುವ ಕಾರ್ಯಕ್ರಮವನ್ನು ಸೇರಿಸಿದೆ.

—ಯು.ಎನ್.ಐ. ವಾರ್ತೆ

# ವಿಧವೆಯರಿಗೆ ಮಾಸಾಶನ
# ಒಂದು ಮಾನವೀಯ ಯೋಜನೆ

ಜೀವನದಲ್ಲಿ ಯಾರ ಆಸರೆಯೂ ಇಲ್ಲದ ನಿರ್ಗತಿಕ ವಿಧವೆಯರಿಗೆ ಜೀವನೋಪಾಯ ಕಲ್ಪಿಸಲು ಸರ್ಕಾರ ಕೈಗೊಂಡಿರುವ ಒಂದು ಮಾನವೀಯ ಯೋಜನೆ ಇದು. ನಿರ್ಗತಿಕ ವಿಧವೆಯರ ನಿರಾಶೆಯ ಬಾಳಿಗೆ ಒಂದು ಆಶಾಕಿರಣ.

ಈ ಯೋಜನೆಯ ಪ್ರಕಾರ 18 ವರ್ಷಕ್ಕೆ ಮೇಲ್ಪಟ್ಟ ಸಂಬಂಧಿಕರ ಆಶ್ರಯವಿಲ್ಲದ ವಿಧವೆಯರಿಗೆ ತಿಂಗಳಿಗೆ 50 ರೂ.ಗಳಷ್ಟು ಸಹಾಯಧನ ದೊರೆಯುತ್ತದೆ. ಈ ವೇತನ ಪಡೆಯಲು ಕೆಳಕಂಡ ಅರ್ಹತೆಗಳಿರಬೇಕು.

- ಆಕೆಯ ವಾರ್ಷಿಕ ವರಮಾನ 1500 ರೂ.ಗಳಿಗೆ ಮೀರಿರಬಾರದು.
- ಆಕೆ ಅಥವಾ ಆಕೆಯ ಮರಣ ಹೊಂದಿದ ಪತಿ, ಅರ್ಜಿ ದಿನಾಂಕದಿಂದ ಹಿಂದಿನ ನಿರಂತರ ಮೂರು ವರ್ಷಗಳ ಅವಧಿಗೆ ಕಡಿಮೆಯಿಲ್ಲದಂತೆ ಕರ್ನಾಟಕ ರಾಜ್ಯದಲ್ಲಿ ವಾಸ ಮಾಡಿರಬೇಕು.
- ಈ ವೇತನವು ಆಕೆಯ ಮರಣ ಕಾಲದವರೆಗೆ ಮಾತ್ರ ದೊರೆಯುವುದು ಮತ್ತು ಆಕೆ ಮರುವಿವಾಹ ಮಾಡಿಕೊಂಡರೆ ಈ ವೇತನಕ್ಕೆ ಅರ್ಹಳಲ್ಲ.
- ಈಗಾಗಲೇ ಅಂಗವಿಕಲ ವೇತನ, ವೃದ್ಧಾಪ್ಯ ವೇತನವನ್ನು ಪಡೆಯುತ್ತಿರುವ ವಿಧವೆಯರು ಈ ವೇತನಕ್ಕೆ ಅರ್ಹರಾಗುವುದಿಲ್ಲ.
- ಒಂದು ಕುಟುಂಬವಲ್ಲಿ ಒಬ್ಬರಿಗಿಂತ ಹೆಚ್ಚು ಮಂದಿ ಅರ್ಹ ವಿಧವೆಯರಿದ್ದರೆ ಅಂಥವರೆಲ್ಲರೂ ಈ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಅವುಗಳಿಗೆ ಒಳಪಡುವ ವಿಧವೆಯರು ನಿಯಮಿತ ನಮೂನೆಯಲ್ಲಿ ತಾಲ್ಲೂಕು ತಹಶೀಲದಾರರಿಗೆ ಅರ್ಜಿಗಳನ್ನು ಸಲ್ಲಿಸಬೇಕು.

ಈ ಅರ್ಜಿಗೆ ನ್ಯಾಯಾಲಯ ಶುಲ್ಕ (ಕೋರ್ಟ್ ಫೀ) ಸ್ಟಾಂಪನ್ನು ಲಗತ್ತಿಸುವ ಆವಶ್ಯಕತೆ ಇಲ್ಲ. ತಾಲ್ಲೂಕು ಕಛೇರಿ, ಪಂಚಾಯಿತಿ ಕಛೇರಿ, ಗ್ರಾಮಾಧಿಕಾರಿಗಳು, ಮುನಿಸಿಪಲ್ ಕಛೇರಿ ಹಾಗೂ ನಗರ ಸಭೆಗಳ ಕಛೇರಿಗಳಿಂದ ಅರ್ಜಿ ನಮೂನೆಗಳನ್ನು ಪಡೆಯಬಹುದು.

**ವಿಧವೆಯರಿಗೆ ಮಾಸಾಶನ; ನಿರ್ಗತಿಕ ವಿಧವೆಯರ ಬದುಕಿಗೊಂದು ಆಸರೆ........**

ಕರ್ನಾಟಕ ವಾರ್ತೆ

